Last Warning to the Lingayat Community




ಕ್ರಾಂತಿಕಾಲ } ಹಿಂದೆನೋಡಿರಿ { ಕಡೆಯಾಟ

# ಅಯ್ಯಗಳ ಗೋಳು

ಅರ್ಥಾತ್

# ಸಮಾಜಸುಧಾರಣೆ

ಲೇಖಕನೂ ಪ್ರಕಾಶಕನೂ

ಹುಚ್ಚಪ್ಪ ಬಸವಪ್ಪ ಕಲಬುರ್ಗಿ ಬಿ. ಎ.

ಸಮಾಜಸೇವಕ

ಧಾರವಾಡ

೧೯೨೮

ಪ್ರತಿಗಳು ೧೦೦೦

ಅಯ್ಯಾ, ಸತ್ಯಶರಣಮಾರ್ಗಾನುವರ್ತನದಲ್ಲಿ ತಮ್ಮಗಳ ಬೆಲೆಯು.

ಸದ್ಭಕ್ತಬಾಂಧವವೃಂದವೇ, ಅಂತಃಕರಣದಿಂದ ಕಲ್ಯಾಣಕಟ್ಟಲು ಹತ್ತುಹತ್ತು ಏಳು ಆಣೆ.

ಗುರುರಾಜ್ಯವೇ ಗುರುರಾಜ್ಯವು.

## ನಾಮಧಾರಿ ಜಂಗಮ ನಿಷೇಧ.

ಅಯ್ಯಾ, ನಾವು ಪರಮ ವಿರಕ್ತರು ಪಟ್ಟದೊಡೆಯರೆಂದು, ಪರದೇಶಯ್ಯಗಳು ಅತೀತ ಚರಮೂರ್ತಿಗಳೆಂದು, ಶಂಖ, ಗಿಲು ( ಗಿಂಡಿ ) ದಂಡಾಗ್ರವ ಪಿಡಿದು, ಕಾವಿಯ ಕಾಷಾಯಾಂಬರವ ಹೊದ್ದು, ಮಹಾ ಘನಲಿಂಗ ಚರಮೂರ್ತಿಗಳೆಂದು, ನುಡಿದುಕೊಂಬ ತೊನ್ನಹೊಲೆ ಮಾದಿಗರ ಪ್ರಸಂಗಕ್ಕೆ ಮನವೆಳಸದೆ ಮುಖವೆತ್ತಿ ನೋಡದೆ, ಶಬ್ದಮುಗ್ಧನಾಗಿ ಸುಮ್ಮನೆ ಕುಳಿತಿರ್ದನು ಕಾಣಾ ನಿಮ್ಮ ಶರಣ! ಅದೇನು ಕಾರಣವೆಂದರೆ, ತನ್ನ ತಾನಾರೆಂದರಿಯದೆ ತನ್ನ ಇಷ್ಟ ಮಹಾ ಘನಲಿಂಗದ ಗೊತ್ತು ಮುಟ್ಟದೆ, ತನು ಮನ ಧನವೆಂಬ ತ್ರಿವಿಧ ಪದಾರ್ಥವನರ್ಪಿಸಿ, ತ್ರಿವಿಧ ಪದಾರ್ಥವ ಗರ್ಭೀಕರಿಸಿಕೊಂಡ ಪ್ರಸನ್ನ ಪ್ರಸಾದವ ಸ್ವೀಕರಿಸಿ ಪರತತ್ವ ಪ್ರಸಾದಮೂರ್ತಿ ತಾನಾಗಲರಿಯದೆ, ಉಚ್ಚಂಗೀ ದುರ್ಗಿಗೆ ಬಿಟ್ಟ ಪೋತರಾಜನಂತೆ ಮೂರು ಮೂರು ಜಡೆ ಮುಡಿ ಗಡ್ಡಗಳ ಬಿಟ್ಟುಕೊಂಡು ಡೊಂಬ ಜಾತಿಕಾರರಂತೆ ವೇಷವ ತೊಟ್ಟು, ಸಂಸ್ಕೃತಾದಿ ಪ್ರಾಕೃತಾಂತ್ಯವಾದ ನಾನಾ ಶಾಸ್ತ್ರವ ಹೇಳಿ, ಸುಡುಗಾಡ ಸಿದ್ಧಯ್ಯಗಳಂತೆ ಕುಟಿಲ ಕುಹಕ ಯಂತ್ರ ತಂತ್ರಗಳ ಕಟ್ಟುತ, ಪುರಜನರ ಮೆಚ್ಚಿಸಬೇಕೆಂದು ಅಯ್ಯಾ ನಾವು ಕೆರೆ, ಬಾವಿ, ಮಠವ ಕಟ್ಟಿ, ಮದುವೆ, ಮಾಂಗಲ್ಯ ದೀಕ್ಷೆ, ಪಟ್ಟ ಪ್ರಯೋಜನ, ಅಯ್ಯತನ ಅನ್ನಛತ್ರ, ಅರವಟ್ಟಿಗೆ, ದಾಸೋಹ, ಪುರಾಣ ಪುಸ್ತಕ ಮಾಡಿಸಬೇಕೆಂದು, ಗುರುಲಿಂಗ ಜಂಗಮಕ್ಕಲ್ಲದೆ, ನಿರಾಭಾರ ವೀರಶೈವಕ್ಕೆ ಹೊರಗಾಗಿ, ದುರಾಶೆ ಮುಂದುಗೊಂಡು, ನಾನಾ ದೇಶವ ತಿರುಗಿ, ಅರಸುಗಳಾದಿ ದೇಸಾಯಿಗಳಂತ್ಯವಾದ ಹೊಲೆ ... ಬೊಗಳಿ, ವ್ಯಾಪಾರದ ಮರೆಯಿಂದ ನಡಮೂರ ...ತು, ಪರರೊಡವೆಯ ಅಪಹರಿಸುವ ಸೆಟ್ಟಿ ವರ್ತ... ...ಕ್ಕಳ ಕಾಡಿ ಜೇಡಿ, ಕೊಟ್ಟರೆ ಹೊಗಳಿ, ಕೊಡ... ...ಮಾದಿಗರು ಕೊಟ್ಟ ದ್ರವ್ಯವ ಕೊಂಡು ಬಂದು, ...ಳಗೆ ಮಡಗಿಕೊಂಡು, ಪರಸ್ತ್ರೀಯರ ಹಡಕಿ ... ದುರ್ಗುಣಿ ದುರಾಚಾರಿಗಳ ಶ್ರೀ ಗುರುಲಿಂಗ ... ಪ್ರಸಾದವ ತೆಗೆದುಕೊಂಬುವವರಿಗೆ ಇಪ್ಪ... ...ಲ್ಲಿ ನರಕದ ಕೊಂಡದಲ್ಲಿಕ್ಕುವ ಕಾಣಾ ನಿಮ್ಮ ...ಳ ಮಾಚಿದೇವ )

...ಾಡಿದಡೆ ಹಂದೀ ಮಲವ ಕೊಂಡ ಸಮಾನ; ... ನರಕವ ಕೊಂಡ ಸಮಾನ; ಭಂಗೀ ಭಕ್ಷಣವ ...ತಿಂದ ಸಮಾನ; ಗಾಂಜೀ ಭಕ್ಷಣವ ಮಾಡಿ ... ಕುಲದ ಮಲವ ತಿಂದ ಸಮಾನ; ಇದು ...ಾಂಜಿ ಭಕ್ಷಿಸಿ ಅಂಗದ ಮೇಲೆ ಇಷ್ಟಲಿಂಗವ ...ಮನೆಯೊಳಗಿಟ್ಟು ಪೂಜಿಸುವ ಭ್ರಷ್ಟ ಹೊಲೆ

## ನಾಮಧಾರಿ ಜಂಗಮ ನಿಷೇಧ.

ಅಯ್ಯಾ, ನಾವು ಪರಮ ವಿರಕ್ತರು ಪಟ್ಟದೊಡೆಯರೆಂದು, ಪರದೇಶ[illegible]
ಗಳು ಅತೀತ ಚರಮೂರ್ತಿಗಳೆಂದು, ಶಂಖ, ಗಿಲು ( ಗಿಂಡಿ ) ದಂಡಾಗ್ರ[illegible]
ಪಿಡಿದು, ಕಾವಿಯ ಕಾಷಾಯಾಂಬರವ ಹೊದ್ದು, ಮಹಾ ಘನಲಿಂಗ [illegible]
ಮೂರ್ತಿಗಳೆಂದು, ನುಡಿದುಕೊಂಬ ತೊನ್ನಹೊಲೆ ಮಾದಿಗರ ಪ್ರಸಂಗಕ್ಕೆ [illegible]
ವೆಳಿಸದೆ ಮುಖವೆತ್ತಿ ನೋಡದೆ, ಶಬ್ದಮುಗ್ಧನಾಗಿ ಸುಮ್ಮನೆ ಕುಳಿತಿರ್ದನು ಕಾಣಾ
ನಿಮ್ಮ ಶರಣ! ಅದೇನು ಕಾರಣವೆಂದರೆ, ತನ್ನ ತಾನಾರೆಂದರಿಯದೆ ತನ್ನ [illegible]
ಮಹಾ ಘನಲಿಂಗದ ಗೊತ್ತು ಮುಟ್ಟದೆ, ತನುಮನ ಧನವೆಂಬ ತ್ರಿವಿಧ ಪದಾರ್ಥವ
ನರ್ಪಿಸಿ, ತ್ರಿವಿಧ ಪದಾರ್ಥವ ಗರ್ಭೀಕರಿಸಿಕೊಂಡ ಪ್ರಸನ್ನ ಪ್ರಸಾದವ ಸ್ವೀಕರಿಸಿ,
ಪರತತ್ವ ಪ್ರಸಾದಮೂರ್ತಿ ತಾನಾಗಲರಿಯದೆ, ಉಚ್ಚಂಗೀ ದುರ್ಗಿಗೆ [illegible]
ಪೋತರಾಜನಂತೆ ಮಾರು ಮಾರು ಜಡೆ ಮುಡಿ ಗಡ್ಡಗಳ ಬಿಟ್ಟುಕೊಂಡು ಡೊಂ[illegible]
ಜಾತಿಕಾರರಂತೆ ವೇಷವ ತೊಟ್ಟು, ಸಂಸ್ಕೃತಾದಿ ಪ್ರಾಕೃತಾಂತ್ಯವಾದ ನಾ[illegible]
ಶಾಸ್ತ್ರವ ಹೇಳಿ, ಸುಡುಗಾಡ ಸಿದ್ಧಯ್ಯಗಳಂತೆ ಕುಟಿಲ ಕುಹಕ ಯಂತ್ರ ತಂತ್ರ[illegible]
ಕಟ್ಟುತ, ಪುರಜನರ ಮೆಚ್ಚಿಸಬೇಕೆಂದು ಅಯ್ಯಾ ನಾವು ಕೆರೆ, ಬಾವಿ, ಮಠ[illegible]
ಸ್ಥ, ಮದುವೆ, ಮಾಂಗಲ್ಯ ದೀಕ್ಷೆ, ಪಟ್ಟ ಪ್ರಯೋಜನ, ಅಯ್ಯತನ ಅನ್ನಛತ್ರ
ಅರವಟ್ಟಿಗೆ, ದಾಸೋಹ, ಪುರಾಣ ಪುಸ್ತಕ ಮಾಡಿಸಬೇಕೆಂದು, ಗುರುಲಿಂಗ
ಜಂಗಮಕ್ಕಲ್ಲದೆ, ಶಿರಃಭಾರ ವೀರಶೈವಕ್ಕೆ ಹೊರಗಾಗಿ, ದುರಾಶೆ ಮುಂದುಗೊಂ
ಡು, ನಾನಾ ದೇಶವ ತಿರುಗಿ, ಅರಸುಗಳಾದಿ ದೇಸಾಯಿಗಳಂತ್ಯವಾದ ಹೊಲ್ಲೆ
[illegible] ಬೊಗಳಿ, ವ್ಯಾಪಾರದ ಮರೆಯಿಂದ ನಡಮೂರ
[illegible]ತು, ಪರರೊಡವೆಯ ಅಪಹರಿಸುವ ಸೆಟ್ಟಿ ವರ್ತ
[illegible]ಕ್ಕಳ ಕಾಡಿ ಬೇಡಿ, ಕೊಟ್ಟವರ ಹೊಗಳಿ, ಕೊಡ
[illegible]ರಮಾದಿಗರು ಕೊಟ್ಟ ದ್ರವ್ಯವ ಕೊಂಡು ಬಂದು,
[illegible]ಳಗೆ ಮಡಗಿಕೊಂಡು, ಪರಸ್ತ್ರೀಯರ ಹಡಕೆ
[illegible] ದುರ್ಗಣಿ ದುರಾಚಾರಿಗಳ ಶ್ರೀ ಗುರುಲಿಂಗ
[illegible] ಪ್ರಸಾದವ ತೆಗೆದುಕೊಂಬುವವರಿಗೆ ಇಪ್ಪ
[illegible]ಲ್ಲಿ ನರಕದ ಕೊಂಡದಲ್ಲಿಕ್ಕುವ ಕಾಣಾ ನಿಮ್ಮ
[illegible]ಳ ಮಾಚಿದೇವ )

[illegible]ಾಡಿದಡೆ ಹಂದೀ ಮಲವ ಕೊಂಡ ಸಮಾನ;
[illegible] ನರಕವ ಕೊಂಡ ಸಮಾನ; ಭಂಗೀ ಭಕ್ಷಣವ
[illegible]ತಿಂದ ಸಮಾನ; ಗಾಂಜೀ ಭಕ್ಷಣವ ಮಾಡಿ
[illegible] ಕುಲದ ಮಲವ ತಿಂದ ಸಮಾನ; ಇಮ
[illegible]ಾಂಜಿ ಭಕ್ಷಿಸಿ ಅಂಗದ ಮೇಲೆ ಇಷ್ಟಲಿಂಗವ
[illegible], ಮನೆಯೊಳಗಿಟ್ಟು ಪೂಜಿಸುವ ಭ್ರಷ್ಟ ಹೊಲೆ

# ವಿಷಯಾನುಕ್ರಮಣಿಕೆಯು.

## ಸೂಚನೆ

ಲಿಂಗರಹಸ್ಯವು (ಪುಟ ೫೯–೧೪೪) ಬಹು ಗಹನವಾದ ವಿಷಯವಿರುವದರಿಂದ ಸಾವಧಾನದಿಂದಲೂ ಸಮಾಧಾನದಿಂದಲೂ ಶಾಂತರೀತಿಯಿಂದಲೂ ಓದಿ ಮನನ ಮಾಡಿಕೊಳ್ಳಬೇಕಾಗುವದರಿಂದ ಮೊದಲು ಉಳಿದ ಎಲ್ಲ ಭಾಗಗಳನ್ನು ಓದಿ ಬಳಿಕ ಅದರ ಕಡೆಗೆ ತಿರುಗಬಹುದು.

# ಉಪಕ್ರಮವು.

ಈಗ ಲಿಂಗ ಧರಿಸಿದ ಪ್ರತಿಯೊಂದು ವ್ಯಕ್ತಿಯು ಏನು ಮಾಡಿದರೆ, ನಮ್ಮ ಲಿಂಗವಂತ ಸಮಾಜವು ಕಳಕೊಂಡ ಕಳೆಯನ್ನು ಹೊಂದಿ, ನಿಜಕಲ್ಯಾಣದ ಶರಣಮಾರ್ಗದಲ್ಲಿ ಒಂದಾಗಿ ನಡೆದು, ಲೋಕಮಾದರಿಯಾದೀತೆಂಬದನ್ನು ಈ ಪುಟ್ಟ ಪುಸ್ತಕದಲ್ಲಿ ಹೇಳಿರುವದು. “ಬೈದು ಹೇಳುವವರು ನಮ್ಮವರೆಂ” ಬ ಗಾದೆಯ ಮಾತು ಇದೆಯಲ್ಲ! ಅದನ್ನು ಇಲ್ಲಿ ಎಷ್ಟೂ ಮರೆಯಬಾರದಾಗಿದೆ. ಇದ್ದ ಸಂಗತಿಯನ್ನು ಇದ್ದಕ್ಕಿದ್ದಂತೆ ಹೊರಗೆ ಇಡುವದರಿಂದ ಕೆಲವರ ಕಣ್ಣು ಕೆಂಪಗಾಗುವದೇನೋ ನಿಜ! ಆದರೂ ಯಾವ ಸಂಗತಿಗಳನ್ನು ಬಚ್ಚಿ ಇಡುವದರಿಂದ ಬಹು ಜನರ ಹಿತ ಕೆಡುವದೋ, ಆ ಸಂಗತಿಗಳನ್ನು ಎಂದೂ ಬಚ್ಚಿಡದಿರುವದು ವಿವೇಕಿಯ ಕೆಲಸವಾಗಿದೆ. ಲೋಕಹಿತಘಾತಕವಾದ ಸಂಗತಿಗಳನ್ನು ಮುಂದಿಡಲು ಹೊಯ್ದಾಡುವವರು ಎಷ್ಟು ಧರ್ಮನಿರತರಾಗಿ ಕಾಣಿಸಿಕೊಂಡರೂ, ಅವರಂತಹ ಹೇಡಿಗಳೂ, ಕಲ್ಯಾಣಕಂಟಕರೂ ಅವರೇ ಆಗಿರುವರು. ಕೆಲವರು ದೋಷಗಳನ್ನು ಮುಂದಿಡುವದು ನಿಂದ್ಯವೆಂದು ತಿಳಿಯುವರು. ಇದು ಲಿಂಗಕಟ್ಟಿದವನಿಗೆ ಸರಿಯಾದುದಲ್ಲ! ಲಿಂಗ ಕಟ್ಟಿದವನಿಗೆ ಯಾರ ಹಂಗೂ ಇರುವದಿಲ್ಲ! ಕಲ್ಯಾಣವು ಕಾಣದ ಶಿವನನ್ನು ಕಾಣಿಸಿಕೊಡುವದಾಗಿದೆ. ಉಗಿ ನೀರುಗಳಂತೆ ಶಿವಕಲ್ಯಾಣಗಳ ಸ್ವರೂಪವಾಗಿದೆ. ಶಿವನೆಂದರೆ ಕಾಣದ ಕಲ್ಯಾಣ! ಕಲ್ಯಾಣವೆಂದರೆ ಕಾಣುವ ಶಿವನು!! ಕಲ್ಯಾಣಕ್ಕೆ ಕಂಟಕವಾದ ದೋಷಗಳನ್ನು ಹೆದರದೆ ಹೇಸದೆ ಮಾಡುವವರೂ, ಕಂಡೂ ಕಂಡು ಹೊರಗಿಡಲಿಕ್ಕೆ ಹೆದರುವವರೂ, ಶಿವನಿಂದಕರೇ! ದೋಷಗಳನ್ನು ಹೊರಗಿಟ್ಟು, ಅವುಗಳ ಪರಿಹಾರಕ ಉಪಾಯಗಳನ್ನು ಪ್ರಕಟಿಸುವವರೇ ನಿಜವೀರರು. ಆ ಉಪಾಯಗಳನ್ನು ಪ್ರಚಾರದಲ್ಲಿ ತರುವವರೇ ಧೀರರು. ಅರ್ಥಾತ್ ಗಣಾಚಾರಸಂಪನ್ನರು, ಲಿಂಗವ ಧರಿಸಿ. ಶಿವನಿಂದೆಯಷ್ಟೇ ಅಲ್ಲ! ಕಲ್ಯಾಣ ಘಾತಕ ಕಾರ್ಯಗಳಿಗೆ ಲಿಂಗಾಯತರ ಮಧ್ಯವಲ್ಲಿಯೇ ಆನುವಿರುವದೆಂದರೆ, ಅದು ಲಿಂಗವಂತ ಸಮಾಜವಾಗದು. ಆದುದರಿಂದ ದೋಷಗಳನ್ನು ಮುಂದಿಟ್ಟು ಅವುಗಳ ಪರಿಹಾರಕ ಕಾರ್ಯದಲ್ಲಿ ಅಧೀರರಾಗಿ ಉಳಿಯುವದು ಸಮಾಜ-ಹಿತಚಿಂತಕರ ಧರ್ಮವಲ್ಲ! ಶರೀರದ ಯಾವದೊಂದು ಭಾಗದಲ್ಲಿ ಹರಿಗೆಟ್ಟು, ಯಾವತ್ತೂ ರಕ್ತವನ್ನು ಕೆಡಿಸುವ ದೋಷ

ಸಂಗ್ರಹವನ್ನು ಹೊರಗೆ ಹಾಕದೆ ಶರೀರ ಸುಧಾರಿಸುವೆನೆನ್ನುವವನೂ, ಸಮಾ
ಜದ ದೋಷಗಳನ್ನು ಬಚ್ಚಿಟ್ಟು ಸಮಾಜಸುಧಾರಣೆ ಮಾಡುವೆನೆನ್ನುವನೂ ಇಬ್ಬ
ರೂ ಒಂದೇ! ಅವನು ವೈದ್ಯನಲ್ಲ! ಇವನು ಸಮಾಜಸುಧಾರಕನಲ್ಲ.

ಲಿಂಗವಂತ ಸಮಾಜಸುಧಾರಕನು ಗುರುವೆನಿಸುವನು. ಈ ಸುಧಾರ.ಕಾ
ರ್ಯದಲ್ಲಿ ತೊಡಗಿಕೊಂಡವರೆಲ್ಲರೂ ಸಮಾಜಸುಧಾರಕ ಮುಂದಾಳುಗಳು.
ಅರ್ಥಾತ್ ಗುರುವರ್ಗದವರು. ತನ್ನ ದೋಷಗಳನ್ನು ಬಚ್ಚಿಟ್ಟು ಎರಡನೆಯವ
ರನ್ನು ಸುಧಾರಿಸುವ ಅಧಿಕಾರವು ಯಾರಿಗೂ ಬರಲಾರದು. ಸಮಾಜಘಟನಾ
ಮಾತ್ರದಿಂದ ಸಮಾಜಸೂತ್ರಗಳನ್ನು ಹೊಂದಿದ ಈಗಿನ ಗುರುವರ್ಗವು ಅನಂತ
ದೋಷಗಳುಳ್ಳದ್ದಾಗಿರುವದರಿಂದ ಅವಕ್ಕೆ ಯಾವ ಪ್ರಕಾರದ ಅಧಿಕಾರವು ಉಳಿ
ದಿರುವದಿಲ್ಲ. ಗುರುವರ್ಗದಲ್ಲಿ ಯಾರಾದರು ಧರ್ಮನಿಷ್ಠಾಪರರು ಇರುತ್ತಿದ್ದರೆ,
ಅವರು ಈ ಪುಟ್ಟಪುಸ್ತಕದಲ್ಲಿ ಮುಂದಿಟ್ಟದೋಷಗಳನ್ನು ಒಪ್ಪಿಕೊಂಡು, ಅವುಗಳ
ಪರಿಹಾರಕನಿಯಮಗಳನ್ನು ಪ್ರಚಾರಗೊಳಿಸುವದರಲ್ಲಿ ತಾವೇ ಕಂಕಣಬದ್ಧರಾಗಿ
ಮುಂದರಿಯುವರು. ಸನ್ ೧೯೧೨ನೆಯ ಮಾರ್ಚವಲ್ಲಿ, ತನ್ನ ಮೂಲ ಪೀಠ
ದಲ್ಲಿ ಪೈದೋರಿ ಪ್ರಕಟನಾದ ಶ್ರೀಮಜ್ಜಗದ್ಗುರುಸಿದ್ಧಪ್ರಭುವು ತನ್ನ ಲೀಲೆ
ಯಲ್ಲಿ ಲೋಕವನ್ನು ವೀರಶೈವಸೃಷ್ಟಿಯ ಹದಕ್ಕೆ ತಂದಿರುವನು. ಹಿರಿದೂ
ಕಿರಿದೂ, ಎಳದೂ ಬಳದೂ ಇತ್ಯಾದಿ ಎಲ್ಲವನ್ನೂ ಸರಿಸಮ ಮಾಡಿರುವನು.
ಸೃಷ್ಟಿಯ ಸ್ವಾಭಾವಿಕ ಕ್ರಮದಲ್ಲಿ ಬೆಳೆಯುತ್ತಿರುವ ಅನುಭವವು ನಿಜಕಲ್ಯಾಣ
ವನ್ನು ಲಕ್ಷಿಸುವಷ್ಟು ದೊಡ್ಡದಾಗಿರುವದು. ಆದಂದ ಪ್ರತಿಯೊಂದು ವ್ಯಕ್ತಿಯು
ತನ್ನಲ್ಲಿದ್ದ ದೋಷಗಳನ್ನು ಕಂಡುಕೊಳ್ಳುವ ಯೋಗ್ಯತೆಯುಳ್ಳದ್ದಾಗಿರವದು.
ಈ ದೋಷಗಳನ್ನು ತಾನೇ ತಿದ್ದಿಕೊಳ್ಳುವ ಹಾಗೆ ಅನುಕೂಲ ಪರಿಸ್ಥಿತಿಯನ್ನೂ
ಉಂಟುಮಾಡಿರುವನು. ಈ ಕಾಲದಲ್ಲಿ ಇನ್ನೂ ಕಲ್ಯಾಣಘಾತಕ ಕಾರ್ಯಗಳಿಗೆ
ಆನುವು ಇರುವದೆಂದರೆ, ಸಮಾಜದ ದುರ್ದೈವವೋ, ಅಥವಾ ಈ ಸಮಾಜದಲ್ಲಿ
ತಲೆಯೆತ್ತಿದ ಜೀವಿಗಳ ದುರ್ದೈವವೋ? ಬಾಂಧವರಿರಾ ಇದು ದೊಡ್ಡ ತಪ್ಪಾಗು
ವದು. ಲೋಕಕಲ್ಯಾಣಲೀಲೆಯನಾಡನಿಂತ ಪ್ರಭುವರನ ಪ್ರತ್ಯಕ್ಷದಲ್ಲಿ ಇವು ಇನ್ನು
ದಕ್ಕಲಾರವು. ಇದರಿಂದ ಬಹಳ ಅನರ್ಥಕ್ಕೆ ಗುರಿಯಾಗಬೇಕಾದೀತು. ಬಲು
ಎಚ್ಚರಿಕೆ! ಬಲು ಎಚ್ಚರಿಕೆ!!

ಶ್ರೀಮದ್ಬಸವ ದಿವ್ಯಪ್ರಭುವು ಅವತರಿಸಿ ಆಚರಿಸಿ ತೋರಿ, ಈ ಲಿಂಗಾಂಗಿಯ
ಧರ್ಮದ ತಳಹದಿಯನ್ನು ಹಾಕಿಕೊಟ್ಟು ವೈಮುರಿಯಾಗಿ ಇಂದಿಗೆ ೭೮೦ ವರುಷ
ಗಳಾದರೂ, ಅವರ ಅನುಯಾಯಿಗಳಾದ ನಮ್ಮಲ್ಲಿ ಇಂತಹ ದೋಷಗಳು ಇರು
ವದು ಸಕಲ ದ್ರೋಹಗಳಿಗೆ ಕಾರಣವಾಗಿರುವದು. ದೇವರಾಜ್ಯದಲ್ಲಿ ಲಿಂಗವಂತ
ಸಮಾಜದ ತಪ್ಪಿಯ ಮೇಲೆ ದೊಡ್ಡ ಭಾರವಿರುವದು. ಇದನ್ನು ಮುನದಂಡ್ಯ

ಧರ್ಮನಿಷ್ಠಾಪರರು ಯಾವ ವರ್ಗದವರೇ ಆಗಿರಲಿ, ಅವರು ತೀವ್ರ ಎಚ್ಚರಗೊಂಡು ಈ ರಾಡಿಯನ್ನು ಕಿತ್ತುಹಾಕಲಿಕ್ಕೆ ತ್ರಿಕರಣಪೂರ್ವಕವಾಗಿ ದುಂಬಾಲಗೊಳ್ಳತಕ್ಕದ್ದು. ಈ ಕಾರ್ಯದಲ್ಲಿ ಆ ಪ್ರಭುವರನ ಶಕ್ತಿಯು ತಪ್ಪದೆ ಸಹಾಯವಾಗುವದು. ಗುರುವರ್ಗವು ತಮ್ಮದೊಂದು ಸ್ವಭಾವಸಿದ್ಧ ಜಾತಿಯೆಂದೂ, ಸಕಲ ಸ್ವಾಮಿತ್ವವೆಲ್ಲ ತಮಗೇ ಇರುವದೆಂದೂ ಸಾಧಿಸುತ್ತ ಬಂದುದು ಸಕಲ ದೋಷಗಳನ್ನು ಹೊಟ್ಟೆಯಲ್ಲಿ ಅಟ್ಟಿಸಿಕೊಳ್ಳಲು ಕಾರಣವಾಯಿತು. ಈ ಪ್ರಯತ್ನವೇ ಲಿಂಗಾಂಗಿಧರ್ಮಕ್ಕೆ ವಿರೋಧವಾದುದರಿಂದ ದೋಷಗಳೆಲ್ಲ ಬೊಡ್ಡಿಯಲ್ಲಿ ಹುಟ್ಟಿ ಬೆಳೆದಿರುವವು. ಲಿಂಗವಂತ ಧರ್ಮಕ್ಕೆ ಗುರುವರ್ಗವೇ ಬೊಡ್ಡಿಯು; ಅದರ ಶಾಖೋಪಶಾಖೆಗಳೆಲ್ಲ ಭಕ್ತವರ್ಗವು. ಬೇರುಗಳ ಮುಖದಿಂದ ಹೀರಿ ಬಂದುದೆಲ್ಲ ಬೊಡ್ಡಿಯ ಮಾರ್ಗವಾಗಿ ಮೇಲಿನ ಭಾಗಗಳಿಗೆ ಹಂಚಿಹೋಗುತ್ತಿರುವದು. ಆದುದರಿಂದ ಬೊಡ್ಡಿಯ ದೋಷಗಳೆಲ್ಲ ಗಿಡಕ್ಕೆ ಆವರಿಸಿರುವವು. ಶ್ರೀಮದ್ಬಸವಣ್ಣನು ಏನೊಂದು ಎಡ್ಡೆಣಿಸದೆ ನಂಬಿ ನಡಿಯುವದೇ ಭಕ್ತಿಯೆಂಬ ವೃಕ್ಷದ ಬೊಡ್ಡಿಯೆಂದು ಸಾರಿ ಆಚರಿಸಿ ತೋರಿದುದನು, ಗುರುವರ್ಗವು ಮೀರಿ, ಭಕ್ತರಿಗೆ ನಡೆಯಿರೆಂದು ಹೇಳುತ್ತ. ತಾವು ಮಾತ್ರ ನಂಬುಗೆಗೆಟ್ಟು ಆಚರಿಸುತ್ತ ಬಂದುದರಿಂದ ಆ ದೋಷವು ತುಂಬಾ ವ್ಯಾಪಿಸಿ ಸಮಾಜವನ್ನೇ ನುಂಗಿಬಿಟ್ಟಿರುವದು. ಗಿಡದ ರಚನೆಯಲ್ಲಿ ಬೊಡ್ಡಿಯೇ ಗಿಡಕ್ಕೆ ಸ್ವಾಭಾವಿಕವಾಗಿ ಆಧಾರವಾದುದರಿಂದ, ಮೇಲ್ಭಾಗವೆಲ್ಲ ಎಷ್ಟು ಕೆಟ್ಟರೂ ಗಿಡವು ಬೊಡ್ಡಿಯನ್ನೇ ಆಶ್ರಯಿಸಿ ಹೇಗೆ ನಿಂತಿರುವದೋ, ಹಾಗೆ ಸಮಾಜವು ನಿಂತಿರುವದು.

ಗುರುವರ್ಗವು ಭಕ್ತರಿಗಿಂತ ಯಾವ ಸಂಗತಿಯಲ್ಲಿಯೂ ಎಷ್ಟು ಮುಂದೆ ಇರುವದಿಲ್ಲ. ಭಕ್ತರಲ್ಲಿ ಎಷ್ಟೋ ಸುಶಿಕ್ಷಿತರೂ ಸುಶೀಲರೂ ಇರುವರು. ಗುರುವರ್ಗದಲ್ಲಿ ಗುರುತ್ವಕ್ಕೆ ಕಾರಣವಾದ ಲಿಂಗಕಳೆಯು ಎಂದೋ ಹೊರಟೆದ್ದು ಹೋಗಿದೆ. ಲೌಕಿಕವಿದ್ಯೆಯನ್ನೂ ಕೇಳಬಾರದು. ಭಕ್ತವರ್ಗದಲ್ಲಿ ಸುಶಿಕ್ಷಿತರಾದವರು ಅಂತಹ ಅಂಧಶ್ರದ್ಧೆಯುಳ್ಳವರಲ್ಲ! ವ್ಯವಹಾರದಲ್ಲಿ ಈ ಸುಶಿಕ್ಷಿತರಿಗಿದ್ದಷ್ಟು ಗೌರವವು ಗುರುವರ್ಗದಲ್ಲಿ ಉಳಿದಿರುವದಿಲ್ಲ. ಲಿಂಗಕಳಾವಿಹೀನವಾದ ಗುರುವರ್ಗದ ಯೋಗ್ಯತೆಯನ್ನು ಈ ಸುಶಿಕ್ಷಿತವರ್ಗವು ಸಹಜವಾಗಿ ಅಳೆಯಬಲ್ಲುದು. ಅದು ತನಗೆ ಯೋಗ್ಯವಾಗಿ ಕಂಡವರಿಗೆ ಸಿರಬಾಗಿಸೀತಲ್ಲದೆ, ಅಯೋಗ್ಯರಿಗೆ ಅಡಿಮೆಗಾಗದು. ಅಲ್ಲದೆ ಧರ್ಮತತ್ವಗಳನ್ನು ಅರಿತು ಶರಣಮಾರ್ಗಕ್ಕೆ ವಿರೋಧವಾದ ನಡೆಯನ್ನು ಎಷ್ಟು ಒಪ್ಪಲಾರದು. ಗುರುವರ್ಗದ ನಡೆಯು ಶರಣಮಾರ್ಗಕ್ಕೆ ಹೊರತಾಗಿರುವದು. ಜನರ ಬೆಂಬಲವು ಸುಶಿಕ್ಷಿತರಿಗಾದಷ್ಟು ಇನ್ನಾರಿಗಾಗಲಾರದು. ಅದರೊಳಗೆ ಗುರುವರ್ಗದಲ್ಲಿ ಭೇದಾಭೇದಗಳೂ, ಜಗಳ ಜಂಟಗಳೂ ಹೇಳಕೂಡದಷ್ಟು ಹೆಚ್ಚಾಗಿರುವವು. ಜಾತ್ಯಾಭಿಮಾನವಂತೂ ಮೈಯುಂಡು ಬಿಟ್ಟಿದೆ. ಇಂತಹ ಹೀನಾವಸ್ಥೆಯನ್ನು ಹೊಂದಿದ

ಗುರುವರ್ಗದ ಗೌರವದ ಆಟವು ಇನ್ನುಮುಂತೆ ಸಮಾಜದಲ್ಲಿ ನಡೆಯದ ಹಾಗೆ ಮಾಡಿದ ಹೊರತು ಸಮಾಜಸುಧಾರಣೆಯು ಆಗಿ ನಾವು ಕಲ್ಯಾಣವನ್ನು ಹೊಂದಲಾರೆವೆಂಬ ಭಾವವು ಸುಶಿಕ್ಷಿತರಲ್ಲಿ ಮಿನುಗಹತ್ತಿರುವದು. ಇದೆಲ್ಲ ಸಂಗತಿಯನ್ನು ಲಕ್ಷ್ಯಕ್ಕೆ ತಂದು ಗುರುವರ್ಗವು ಬೇಗನೆ ಬುದ್ಧಿಗಲಿಯಬೇಕು. ಆದರೆ ಇದ್ದ ದೋಷಗಳನ್ನು ಇದ್ದಕ್ಕಿದ್ದಂತೆ ಮುಂದಿಡುವದರಿಂದ, ಅವುಗಳನ್ನು ಸಮಾಧಾನದಿಂದ ಒಪ್ಪಿಕೊಂಡು ಆ ದೋಷಪರಿಹಾರಕ ಮಾರ್ಗದಲ್ಲಿ ತಾವಾಗಿಯೇ ಅಡಿಯಿಟ್ಟು ನಡೆಯಿಸಿಕೊಂಡು ಹೋಗುವ ಮುಂದಾಳುಗಳು ಗುರುವರ್ಗದಲ್ಲಿ ಇರುತ್ತಿದ್ದರಷ್ಟೇ, ಕೂಡಲೆ ಆಗ ಬಹುದಾದ ಸುಧಾರಣೆಯು!

ಯಾವ ದೃಷ್ಟಿಯಿಂದ ನೋಡಿದರೂ ಈಗಿನ ಗುರುವರ್ಗಕ್ಕೆ ಆದರ ಪದವು ಆದಕ್ಕೆ ಇನ್ನು ಬಹಳ ದಿವಸ ಉಳಿಯಲಾರದು. ಸೂಕ್ಷ್ಮದೃಷ್ಟಿಯಿಂದ ಪರ್ಯಾಲೋಚಿಸಿದರೆ ಆದರ ಪದವು ಬೀರೂರಲ್ಲಾದ ವೀರಶೈವ ಮಹಾಸಭೆಯಲ್ಲಿಯೇ ತಪ್ಪಿರುವದು. ಮೊನ್ನೆ ಬೆಂಗಳೂರಲ್ಲಾದ ಮಹಾಸಭೆಯು, ಈ ಪದಚ್ಯುತವಾದ ಸಂಗತಿಯನ್ನು ತನ್ನ ವಿವೇಕಪೂರ್ವಕವಾದ ನಡೆಯಿಂದಲೇ ವ್ಯಕ್ತಪಡಿಸಿರುವದು. ಸೂಕ್ಷ್ಮರಾದವರು ಈ ಕುರುಹಿನ ಪ್ರಯೋಗಗಳಿಂದಲೇ ಎಚ್ಚರಗೊಂಡು ಇದ್ದ ದುರಭಿಮಾನವನ್ನೆಲ್ಲ ಬಿಟ್ಟುಕೊಟ್ಟು, ಎಲ್ಲರನ್ನು ಸಮಗೊಳಿಸುವದಾದ ಶರಣ ಮಾರ್ಗದಲ್ಲಿ ಕಂಕಣಬದ್ಧರಾಗಿ ಕೂಡಿ ನಡೆಯುವದೊಂದೇ ರಾಜಮಾರ್ಗವಾಗಿರುವದು. ಗುರುಲಿಂಗ ಜಂಗಮದ ಸಾಮರಸ್ಯಯೋಗದಲ್ಲಿ ಎಷ್ಟೂ ತೆರಹಿಲ್ಲದ ನಿರತರಾದವರಿಗೇ ಪೂಜಿಗೊಳ್ಳುವದೂ, ದಾನಧರ್ಮಕಾಣಿಕಾದಿಗಳನ್ನು ತೆಗೆದುಕೊಳ್ಳುವದೂ, ನಿಜಸೂತ್ರವನ್ನು ಯೋಜಿಸಿ ಪ್ರತಿಯೊಂದು ಕಾರ್ಯವನ್ನು ಲಿಂಗಕಾರ್ಯವನ್ನಾಗಿ ಮಾಡುವದೂ ಸಲ್ಲುವದಲ್ಲದೆ ಉಳಿದವರಾರಿಗೂ ಸಲ್ಲಲಾರದು. ಈ ಸಲ್ಲುವಿಕೆಯು ಯಾವದೊಂದು ಜಾತಿ ಅಥವಾ ಕುಲ ಸಾಂಪ್ರದಾಯದಲ್ಲಿಲ್ಲ!

ಅಷ್ಟಾವರಣನಿರತರಾದ ಲಿಂಗಾಯತರ ಮಧ್ಯದಲ್ಲಿ ಪಂಚಸೂತಕಗಳ ಗಾಳಿಯು ಸಹ ಇರಕೂಡದು. ಒಬ್ಬನು ತನ್ನ ಕುಲಾಭಿಮಾನವನ್ನು ಮರೆಯದೆ, ಇನ್ನೊಬ್ಬ ಕುಲವಂತನನ್ನು ನಮಿಸುವದೂ, ಆ ಕುಲವಂತನು ನಾನು ನಮಸ್ಕಾರಕ್ಕೆ ಯೋಗ್ಯನೆಂದು ತನ್ನ ಕಾಲುಗಳನ್ನು ಚಾಚಿ ಸೆಟೆದು ಕೂಡ್ರುವದೂ ಶರಣ ಮಾರ್ಗವಲ್ಲ! ಇವೆಲ್ಲ ಹಾಳಾಗಿ, ಎಂದು, ಗುರುವರ್ಗದವರು ತಮ್ಮ ಹೆಣ್ಣುಗಳನ್ನು ಭಕ್ತವರ್ಗಕ್ಕೆ ಕೊಡಲು ಸಿದ್ಧರಾಗಿ ಕಲ್ಯಾಣಕಟ್ಟಲು ನಮ್ಮ ಸಮಾಜದಲ್ಲಿ ಒಮ್ಮನದಿಂದ ಕೂಡುವರೋ, ಅಂದೇ ಲೋಕವು ಕಲ್ಯಾಣಮಂದಿರವಾಗಲಾರಂಭಿಸಿತೆಂದು ತಿಳಿಯತಕ್ಕದ್ದು.

ಧಾರವಾಡ.<br>ಬುಧವಾರ ತಾ|| ೧೬-೫-೩೫ } ಸಮಾಜಸೇವಕ,<br>ಎಚ್. ಬಿ. ಕಲಬುರ್ಗಿ, ಬಿ. ಎ.

# ಅನಾದಿಭಕ್ತನೇ ಜಗದ್ಭರಿತನೂ ಜಂಗಮನೂ ಜಗದುದ್ಧಾರಕನೂ ಜಗದ್ಗುರುವೂ.

## ಈ ಮಾತಿಗೆ ಚೆನ್ನಬಸವಣ್ಣನೇ ಸಾಕ್ಷಿ!

### ವಿಷಯಪ್ರವೇಶವು.

ನಮ್ಮ ವೀರಶೈವ ಸಮಾಜವು ಯಾವ ದುರ್ದಶಿಗೆ ಬಂದಿರುವದೆಂಬುದು ಕಣ್ಣಮುಂದಿರುವದು. ಲೋಕದಲ್ಲಿ ಏನು ಕೋಲಾಹಲವೆದ್ದಿರುವದೆಂಬುದು ಕಿವಿಗೆ ಗಡಿಚಿಕ್ಕಿರುವದು. ಸೃಷ್ಟಿಯಕಾರ್ಯಗಳಲ್ಲಿ ಎಷ್ಟು ಕ್ಷುಬ್ಧತೆಯುಂಟಾಗಿರುವದೆಂಬದನ್ನು ವರ್ತಮಾನ ಪತ್ರಗಳು ಸಾರುತ್ತಿರುವವು. ಜನರ ಸ್ವಭಾವಾದಿಗಳು ಎಷ್ಟು ಭರದಿಂದ ಬದಲಾಗಹತ್ತಿರುವವೆಂಬದನ್ನು ಬಹಳದೂರಬೇಡ ಹತ್ತಿಪ್ಪತ್ತುವರ್ಷದ ಹಿಂದಿನ ಇತಿಹಾಸವು ಹೇಳಹತ್ತಿರುವದು ಇವನ್ನೆಲ್ಲ ಸೂಕ್ಷ್ಮದೃಷ್ಟಿಯಿಂದ ನೋಡಿದರೆ ಲೋಕದಲ್ಲಿ ಒಂದು ದೊಡ್ಡ ಕ್ರಾಂತಿಯೇ ನಡೆದಿರುವದೆಂದು ಸ್ಪಷ್ಟವಾಗುವದು. ಆಪರೂ ಅಂಗದಲ್ಲಿ ಅಂಗವಿಸಿದ (ಬೇರುಗೊಂಡ) ದೋಷಗಳು ಲಿಂಗಸಾಮರಸ್ಯಯೋಗವಿಲ್ಲದೆ ಕುಂದವಾದುದರಿಂದ ಲಿಂಗಾಯತ ಸಮಾಜವು ತನ್ನ ದೋಷಗಳನ್ನೆಲ್ಲ ಹೊಡೆದೋಡಿಸಿ, ತನ್ನ ಸತ್ಯವಾದ ನಡೆಯಿಂದ ನಿಜೈಕ್ಯತೆಯ ನಿಜಲಿಂಗಕ್ಷೇತ್ರವನ್ನು ತೋರಿಸಿಕೊಡಬೇಕಾಗಿದೆ. ಈ ಸಮಯದಲ್ಲಿ ಈ ಸಮಾಜವು ತನ್ನ ನಿಜತತ್ತ್ವಾನುವರ್ತನದಲ್ಲಿ, ಈಗೆದ್ದಿರುವ ದುರಭಿಮಾನದ ಗೊಂದಲಕ್ಕೆ ಬಿದ್ದು ಕಾಲವಿಲಂಬವನ್ನು ಎಷ್ಟೂ ಮಾಡಬಾರದಾಗಿದೆ. ಮಾಡಿದಲ್ಲಿ ಈ ಕ್ರಾಂತಿಯ ಕಾಲವು ಹೊಸದೊಂದು ಲಿಂಗಾಂಗಿಯಸೃಷ್ಟಿಯನ್ನು ನಿರ್ಮಿಸಿಕೊಳ್ಳದೆ ಬಿಡಲಾರದು. ಇದರಿಂದ ಸಹಜವಾಗಿ ನಮಗೆ ಹೊಂದುವದಾದ ಜಗದ್ಗುರುತ್ವವು ನಮ್ಮ ಕೈಬಿಟ್ಟು, ಆ ಹೊಸಸೃಷ್ಟಿಯನ್ನು ಹೊಂದುವದಾಗುವದು ಈ ವಿಷಯದಲ್ಲಿ ಇಡೀ ಸಮಾಜವು ಎಚ್ಚರಪಟ್ಟು ಶರಣಮಾರ್ಗವಿಡಿದು ಧಾವಿಸಬೇಕಾಗಿದೆ. ಎಚ್ಚರಿಕೆ! ಬಲು ಎಚ್ಚರಿಕೆ!!

ಅಂಗದಲ್ಲಿ ಎಲ್ಲಿಯವರೆಗೆ ದೋಷವೃತ್ತಿಗೆ ಅನುವಿರುವವೋ, ಅಲ್ಲಿಯವರೆಗೆ ಆ ಅಂಗಕ್ಕೆ ಲಿಂಗ ಸಾಧ್ಯವಾಗಲಾರದು ಅಂಗಕ್ಕೆ ಲಿಂಗ ಸಾಧ್ಯವಿಲ್ಲದ ನಡೆಯು

ಎಷ್ಟು ಮನೋಹರವಾದಾಗ್ಯೂ ಅದರಿಂದ ರಂಜನೆಯಲ್ಲದೆ ನಿರಂಜನವು ತೋರ ಲಾರದು. ಕಲ್ಯಾಣವು ನಿರಂಜನದಲ್ಲಿ ಒಡೆದು ತೋರುವದಲ್ಲದೆ, ರಂಜನೆಯಲ್ಲಿ ವಾತ್ರಿಷ್ಟು ಮರೆ ಮಾಡುವದು. ಆದುದರಿಂದ ನಿಜಾಚಾರವನ್ನು ಪ್ರಚುರಗೊಳ ಸಬೇಕೆನ್ನುವವರು, ಮೊದಲು ದೋಷಗಳನ್ನು ನಿವಾರಿಸುವ ಕ್ರಿಯೆಯಲ್ಲಿ ಕಂಕಣ ಬದ್ಧರಾಗತಕ್ಕದ್ದು. ಶರಣಮಾರ್ಗವು ನಿಜಪದಕ್ಕೆ ಮುಟ್ಟಿಸುವ, ಸರ್ವದೋಷಪ ರಿಹರಿಸುವ ಮಹಾಮಂತ್ರವಾದಾಗ್ಯೂ, ಇಡೀ ಸಮಾಜವನ್ನೆಲ್ಲ ಒಮ್ಮನದಿಂದ ಈ ಮಾರ್ಗಕ್ಕೆ ಹಚ್ಚುವದೊಂದು ಕಾರ್ಯವು ಮಹತ್ವದ್ದಾಗಿರುವದು. ಯಾವ ದೊಂದು ಸಮಾಜವನ್ನು ನಡಿಸುವ ಸೂತ್ರವೆಲ್ಲ ಅದರ ಸರಕಾರದ ಕೈಯಲ್ಲಿರುವ ದು. ಸರಕಾರವು ತಪ್ಪುದಾರಿಯಲ್ಲಿ ಹೆಜ್ಜೆ ಇಟ್ಟು ಅತ್ತ ಕಡೆಗೆ ಇಡೀ ಸಮಾಜ ವನ್ನೇ ಹೊಡೆವದ್ದಾದರೆ, ಸಮಾಜದ ದುರ್ದಶೆಯನ್ನು ಕೇಳುವದೇನು? ಅನಂತ ಕಷ್ಟನಷ್ಟಗಳಿಗೀಡಾಗುವದು. ಈಗಿನ ಈ ಪರಮಾವಧಿಯ ದುರ್ದಶೆಯನ್ನು ಕಂಡು, ಅಯ್ಯೋ ನಮ್ಮನ್ನು ಈ ದುರ್ದಶೆಗೆ ತಂದವರಾರು? ನಮ್ಮ ಉಪಾತ್ತ ತತ್ವ ಗಳ ಅನುವರ್ತನವೆತ್ತ? ಈಗಿನ ಹೀನದಶೆಯು ನಡೆಯುತ್ತ? ಇವು ನಮ್ಮಲ್ಲಿ ಹೇಗೆ ಸೇರಿದವು? ಇವುಗಳಿಂದ ಪಾರಾಗುವ ಬಗೆಯಾವದು? ಅದನ್ನು ಪ್ರಚಾರದ ಲ್ಲಿ ತರುವ ಪರಿಯಾವದು? ಇತ್ಯಾದಿ ಕಲ್ಪನೆಗಳು ಪ್ರತಿಯೊಬ್ಬ ವಿವೇಕ ಶಾಲಿಯ ಅಂತರಂಗದಲ್ಲಿ ಬರದೆ ಉಳಿಯಲಾರವು. ಆದುದರಿಂದ ಈ ದೋಷಪರಿಹಾರಕ ವಿವರಣೆಯಲ್ಲಿ ಪ್ರಾಮುಖ್ಯವಾಗಿ ಐದು ಭಾಗಗಳನ್ನು ಮಾಡಿ ಒಂದೊಂದನ್ನೇ ಕ್ರ ಮವಾಗಿ ವಿವರಿಸಿರುವದು.

## ೧ನೆಯ ಭಾಗ

### ಈಗಿನ ವೀರಶೈವ ಸರಕಾರವೂ ಅದರ ದೋಷಮಯ ಸ್ಥಿತಿಯೂ.

ಬಾಬುಗಳನ್ನು ತೆಗೆದುಕೊಂಡು ಧಾರ್ಮಿಕಕಾರ್ಯಗಳನ್ನು ಮಾಡುವವ ರೂ, ಭಿಕ್ಷಾಧಿಕಾರಿಗಳೂ, ಕಾಣಬರುವ ಹಿರಿಯರೂ ಕೂಡಿ ಈ ಸರಕಾರವಾಗಿರು ವದು. ಆದರೂ ಸಮಾಜದ ಸೂತ್ರಗಳೆಲ್ಲ ಗುರುವರ್ಗದವರ ಕೈಯಲ್ಲಿರುವವು.

ಈ ಸಮಾಜ ಸರಕಾರವನ್ನು ಒಳಹೊಕ್ಕು ನೋಡಿದರೆ, ಈಗ ಲೋಕದಲ್ಲಿ ಪ್ರಚಾರದೊಳಗಿರುವ ಬೇರೆ ಬೇರೆ ಸರಕಾರಗಳ ಪದ್ಧತಿಗಳೆಲ್ಲ ಇದರಲ್ಲಿರುವವೆಂದು ಕಂಡು ಬರುವದು. ಲಿಂಗಾಂಗಿಯ ಧರ್ಮಕ್ಕೆ ಭಕ್ತಿಯೇ ತಳಹದಿಯು; ಭಕ್ತಿ ಯು ಅಳವಟ್ಟ ಮೇರೆಗೆ ಅಧಿಕಾರತಾರತಮ್ಯವು. ಇವು ಕೊಟ್ಟು ಹೊಂದುವವಲ್ಲ! ಇಚ್ಛೆಯಿಂದ ಗಳಿಸಿದವೂ ಅಲ್ಲ! ಭಕ್ತಿಯೋಗದ ಮಾರ್ಗದಲ್ಲಿ ತಮ್ಮಿಂದ ತಾವೇ ಬಯಸದೆ ಉಂಟಾದಂತಹವು. ಇಂತಹ ಸಹಜವಾದ ಅಧಿಕಾರ ತಾರತಮ್ಯಗಳನ್ನು ಹೊಂದಿದ ತಂಡವು, ಕೆಳಗಿನಿಂದ ತುದಿಯ ವರೆಗೆ ಕೇವಲ ನಂಬುಗೆಯಿಂದಲೂ,

ತುದಿಯಿಂದ ಕೆಳತನಕ ಕೇವಲ ಅಂತಃಕರಣಗಳಿಂದಲೂ ಒಂದಾಗಿರುವದರಿಂದ ಮೇಲಿನಿಂದಾಗಲಿ ಕೆಳಗಿನಿಂದಾಗಲಿ ಹೊರಟ ಧ್ವನಿಯು ಎಲ್ಲರಿಗೂ ಮಾನ್ಯವಾದುದು—ಮೇಲಿನಿಂದ ಹೊರಟಧ್ವನಿಯು ಕ್ರಮವಾಗಿ ತಳತನಕ ಒಪ್ಪಿಗೆಯನ್ನು ಹೊಂದಿ, ಸಮಾಜವು ಅದನ್ನು ಪರಿಪಾಲಿಸುವದಾದಲ್ಲಿ ರಾಜಪ್ರಜಾಸತ್ತಾತ್ಮಕವೂ, ತಳದಲ್ಲಿ ಹೊರಟ ನುಡಿಯು ಕ್ರಮವಾಗಿ ತುದಿಯವರೆಗೆ ಒಪ್ಪಿಗೆಯಾಗಿ ಪರಿಪಾಲಿಸುವದಾದಲ್ಲಿ ಪ್ರಜಾರಾಜಸತ್ತಾತ್ಮಕವೂ, ಶರಣಮಾರ್ಗದಲ್ಲಿ ಎಲ್ಲರೂ ಸರಿಸಮಾನರೆಂಬ ತತ್ವಾನುವರ್ತನವಿರುವದರಿಂದ ಪ್ರಜಾಸತ್ತಾತ್ಮಕವೂ, ಗುರುವಚನವೇ ಶ್ರೇಷ್ಠವೆಂದು ಪರಿಪಾಲಿಸುವದರಿಂದ ರಾಜಸತ್ತಾತ್ಮಕವೂ ಆಗಿರುವದು. ಅಲ್ಲದೆ ಎಲ್ಲಕಾರ್ಯಗಳು ಲಿಂಗಸೂತ್ರವಿಡಿದು ಜರಗುವವಾದುದರಿಂದ ದೇವರಾಜ್ಯವೂ ಅರ್ಥಾತ್ ಸ್ವರಾಜವೂ ಆಗಿರುವದು.

ಈ ಸರಕಾರದ ವ್ಯವಸ್ಥೆಯೂ ಉತ್ಪನ್ನದ ಸಂಗತಿಯೂ ವಿಚಿತ್ರವಾಗಿರುವವು. ಲಿಂಗವಂತ ಸಮಾಜವು ತನ್ನ ಧರ್ಮದ ಉದಾತ್ತವಾದ ತತ್ವಗಳ ಅನುವರ್ತನದಲ್ಲಿ ನಿರತವಾದ-ದಾದರೆ, ಯಾವ ಕೋರ್ಟ-ಕಚೇರಿಗಳೂ ಬೇಕಿರುವದಿಲ್ಲ! ಇನ್ನೊಬ್ಬರನ್ನು ಗೆದ್ದು ಅವರ ಭೂಮಿಸೀಮೆಗಳನ್ನು ಸ್ವಾಧೀನ ಪಡಿಸಿಕೊಳ್ಳಬೇಕೆಂಬ ಅಪೇಕ್ಷೆಯು ಈ ಸರಕಾರದ ಕನಸುಮನಸಿನಲ್ಲಿಯೂ ಸಹ ಇರದ್ದರಿಂದ ಇದಕ್ಕೆ ದಂಡಿನ ಹಾಗು ಮದ್ದು, ಗುಂಡು, ಕತ್ತಿ, ಕಠಾರಿ, ಇತ್ಯಾದಿ ಆಯುಧಗಳ ಅವಶ್ಯವೇನು ಇರುವದಿಲ್ಲ. ಪಾತಕಕೃತಿಗಳಿಗೆ ಎಷ್ಟೂ ಅನುವು ಇರದಿರುವದರಿಂದ ಅಪರಾಧಿಗಳನ್ನು ಗೊತ್ತು ಹಚ್ಚಿ ಹಿಡತರಬೇಕಾದ ಪೋಲೀಸರೂ ಬೇಕಿರುವದಿಲ್ಲ. ಕೇವಲ ಪ್ರಶಾಂತಮಯವಾದ ಭಕ್ತಿಯೋಗದಲ್ಲಿ ದಾಸೋಹವಿಡಿದು ಲಿಂಗಾಂಗ ಸಾಮರಸ್ಯವನ್ನು ಸಾಧಿಸುವದಿರುವದರಿಂದ, ಸಾಧಕರ ಚಿತ್ತಸಲ್ಲಟವಾಗದಂತೆ ಅವರನ್ನು ಭಕ್ತಿಯ ಮಾರ್ಗದಲ್ಲಿ ಮುಂದಡಿಯುನಿಡಿಸುವದಕ್ಕಾಗಿಯೂ, ವಿಷಯೋಪಭೋಗಗಳನ್ನೆಲ್ಲ ಲಿಂಗೋಪಭೋಗವನ್ನಾಗಿಸಿ ಸೃಷ್ಟಿಯ ವ್ಯಾಪಾರಗಳನ್ನು ಅದರ ಸಹಜಧರ್ಮದಲ್ಲಿ ವಿಕಾರಕ್ಕೆ ಎಷ್ಟೂ ಅನುವು ದೊರೆಯದ ಹಾಗೆ ಸಾಗಿಸಿಕೊಂಡು ಹೋಗುವದಕ್ಕಾಗಿಯೂ ಬಾಹ್ಯಬಂಧನೆಯು ಬೇಕಾಗುವದರಿಂದ ಅಷ್ಟರಪೂರ್ತಿ ಈ ಸರಕಾರದ ವ್ಯವಸ್ಥೆಯಿರುವದು. ಇಷ್ಟೇ ಅದರ ಕರ್ತವ್ಯವಾಗಿ ತನ್ನ ರಾಜ್ಯವನ್ನು ನಿರ್ವಿಕಾರಯೋಗದಲ್ಲಿ ಸಾಗಿಸುವದಾಗಿರುವದು. ಅದ್ದರಿಂದ ಪ್ರತಿಯೊಂದುಕಾರ್ಯವನ್ನು ನಿಜಲಿಂಗಸೂತ್ರವಿಡಿದು ಶಾಸ್ತ್ರಸಮ್ಮತವಾಗಿಯೂ ದೈವಸಮ್ಮತವಾಗಿಯೂ ಲಿಂಗಾನುಸಂಧಾನದ ಶಾಂತಿಯೋಗದಲ್ಲಿ ಜರಗಿಸಬೇಕಾಗುವದು. ಏನಾದರೊಂದು ಮಹತ್ವದ ಕಾರ್ಯವನ್ನು ಮಾಡುವ ಪ್ರಸಂಗಬಿದ್ದಲ್ಲಿ ಅದಕ್ಕೆಬೇಕಾದಷ್ಟು ಹಣದಪೂರ್ತಿ ವರ್ಗಣಿಯ ರೂಪದಿಂದ ಕೂಡಿಸಬಹುದು. ಬರೇ ಉಪಜೀವನದ ಪೂರ್ತಿ ಗರಜು ಇರುವದರಿಂದ ಪ್ರತಿಯೊಂ

ದು ಧಾರ್ಮಿಕಕಾರ್ಯದಲ್ಲಿ ಬಾಬುಗಳ ರೂಪದಿಂದಲೂ, ನಿತ್ಯದಲ್ಲಿ ಕೋಠಧಾನ್ಯ (ಕಾಳಿನಭಿಕ್ಷ) , ಸ್ವಯಂಪಾಕ ( ಹಿಟ್ಟಿನಭಿಕ್ಷೆ) , ಕಂತಿ (ರೊಟ್ಟೀಭಿಕ್ಷೆ) ಇತ್ಯಾದಿ ಭಿಕ್ಷಗಳ ರೂಪದಿಂದಲೂ, ಪೇಟಿಯಲ್ಲಿ ಪಸಿಗಿ ಧರ್ಮಾದಾವಗಳ ರೂಪದಿಂದಲೂ ತನ್ನ ಕರಕಂಪಾಯಗಳನ್ನು ಎತ್ತಿ ಕೇವಲ ಧಾರ್ಮಿಕಬುದ್ಧಿಯಿಂದ ತನ್ನ ಕ್ಷೇತ್ರವನ್ನು ಪರಿಪಾಲಿಸುತ್ತಿರುವದು.

ಈ ಕ್ಷೇತ್ರದ ಉದಾತ್ತ ತತ್ವಗಳನ್ನು ಹೇಳಿವ ಹೊರತು ಸರಕಾರದ ಕರ್ತವ್ಯವೂ ಸಮಾಜದೊಳಗಿನ ದೋಷಗಳೂ ಒಡೆದು ಕಾಣಲಾರವಾದುದರಿಂದ ಕೆಳ್ಗೆ ಆ ಉದಾತ್ತ ತತ್ವಗಳನ್ನು ಹೇಳಬೇಕಾಯಿತು.

## ಲಿಂಗಾಂಗಿಧರ್ಮದ ಉದಾತ್ತವಾದ ಮುಖ್ಯ ತತ್ವಗಳು.

೧ ಗುರುಲಿಂಗಜಂಗಮಗಳಲ್ಲಿಯೂ ಶಿವಶಾಸ್ತ್ರ, ಗುರುವಚನ, ಆಪ್ತರ ಅನುಭವೋಕ್ತಿಗಳಲ್ಲಿಯೂ ನಿಸ್ಸೀಮಭಕ್ತಿ.

೨ ಗುರುಲಿಂಗಜಂಗಮವಬಿಟ್ಟು ಅನ್ಯದೈವಕ್ಕೆ ಎರಗದಿರೋಣ; ಮತ್ತು ನಡಕೊಳ್ಳದಿರೋಣ.

೩ ಪಂಚಮಹಾಪಾತಕಗಳಿಂದ ದೂರಿರುವದು—ಸುಳ್ಳು, ಕಳವು, ವ್ಯಭಿಚಾರ, ಕೊಲೆ, ಅಭಕ್ಷ್ಯಭಕ್ಷಣ ಅಂದರೆ ಕಪ್ಪುಕಡಿತಿನ್ನೋಣ, ಅಪೇಯಪಾನ ಅಂದರೆ ಸಿಂದಿ ಶೆರೆ ಮೊದಲಾದವುಗಳನ್ನು ಕುಡಿಯೋಣ ಇವುಗಳ ಸುಳಿಗಾಳಿಗೂ ಸಹ ಎಲ್ಲಿಯೂ ಯಾವಕಾಲಕ್ಕೂ ಯಾವರೀತಿಯಿಂದಲೂ ಆಸ್ಪದ ಇರಬಾರದು.

೪ ಸದಾ ಲಿಂಗಾನುಸಂಧಾನದಲ್ಲಿದ್ದು ಕಾಯಕವ ಮಾಡಿ ಗುರುಲಿಂಗಜಂಗಮದ ದಾಸೋಹ ನಡಿಸುವದು.

೫ ಲಿಂಗಾಚಾರ, ಸದಾಚಾರ, ಶಿವಾಚಾರ, ಗಣಾಚಾರ, ಭೃತ್ಯಾಚಾರವೆಂಬ ಪಂಚಾಚಾರಗಳಲ್ಲಿ ಪರಾಯಣರಾಗಿರತಕ್ಕದ್ದು.

(ಅ) ತ್ರಿಕರಣಪೂರ್ವಕವಾಗಿ ಲಿಂಗಪೂಜೆಯಲ್ಲಿಯೇ ಇರುವದು ಲಿಂಗಾಚಾರ.

(ಆ) ಎಲ್ಲರಿಗೂ ಸಮ್ಮತವಾದ ನಡೆಯಲ್ಲಿ ಬಳಗಸಹಿತವಾಗಿ ಇದ್ದು ಕಾಯಕದಿಂದ ದಾಸೋಹ ನಡಿಸುವದು ಸದಾಚಾರ.

(ಇ) ಶಿವಭಕ್ತರಲ್ಲಿ ಜಾತಿಯನ್ನೆಣಿಸದೆ, ಅವರ ಮಿಕ್ಕಪ್ರಸಾದದಿಂದ ಬಾಳುವದರಲ್ಲಿ ನಿಷ್ಠೆಯನಾಚರಿಸುವದು ಶಿವಾಚಾರ.

(ಈ) ತನ್ನ ಶಕ್ತ್ಯಾನುಸಾರ ಶಿವನಿಂದೆ ಶಿವಭಕ್ತನಿಂದೆಗಳನ್ನು ತಡೆಯು ಲು ಪ್ರಯತ್ನಮಾಡುವದು ಇಲ್ಲವೆ ಆ ನಿಂದಕರ ತಂಡದಿಂದ ದೂರಿದ್ದು ಶಿವಧರ್ಮವನ್ನು ಕಾಯ್ದುಕೊಳ್ಳುವದು ಗಣಾಚಾರ

(ಊ) ಶಿವಭಕ್ತರೆಲ್ಲರೂ ಪ್ರತ್ಯಕ್ಷಶಿವಮೂರ್ತಿಗಳೆಂದೂ,ತನ್ನ ಹೊರತು ಮಿಕ್ಕವರಾರು ಸೇವಕರಲ್ಲವೆಂದೂ ಎಲ್ಲರ ಸೇವಕನಾಗಿ ಇಲ್ಲವೆ ಸೇವಕಳಾಗಿ ಶರಣಮಾರ್ಗದಲ್ಲಿ ನಿರಹಂಭಾವದಿಂದ ನಿರತ ವಾಗುವದು-ಭೃತ್ಯಾಚಾರ.

(೬) ಭಕ್ತ, ಮಹೇಶ, ಪ್ರಸಾದಿ, ಪ್ರಾಣಲಿಂಗಿ, ಶರಣ, ಐಕ್ಯಗಳೆಂಬ ಷಟ್ಸ್ಥಲಗಳಲ್ಲಿ ಸಂಪನ್ನರಾಗಿರುವದು

(೧) ತ್ರಿಕಾಲಲಿಂಗಪೂಜಾಸಕ್ತನೂ, ಸದಾಚಾರಸಂಪನ್ನನೂ ಆಗಿ ಕಾಯಕದಿಂದ ಬಂದುದನೆಲ್ಲ ಗುರುಲಿಂಗಜಂಗಮದ ದಾಸೋಹಕ್ಕೆ ಮಾಡುತ್ತ ಶಿವಭಕ್ತರಿಗೆ ಬಾಗಿನಡೆಯುವದು ಭಕ್ತಿಸ್ಥಳ.

(೨) ಪರಧನ ಪರಸ್ತ್ರೀ ಆತ್ಮಸ್ತುತಿ ಪರನಿಂದೆ ಹಿಂಸಾ ಸುಳ್ಳು ಮೊದ ಲಾದ ಮಹಾಪಾತಕಗಳಿಂದ ದೂರಿದ್ದು, ಎಷ್ಟು ಕಂಟಕಗಳು ಬಂದರೂ ಶರಣಮಾರ್ಗದಲ್ಲಿ ಲಿಂಗೈಕಭಕ್ತಿಯಿಂದ ನಿಷ್ಠಾಪರ ನಪ್ಪುದು ಮಹೇಶಸ್ಥಳ

(೩) ಲಿಂಗದ ನೆಲೆಗಂಡು ಆ ನೆಲೆಯಲ್ಲಿ ನೆಟ್ಟದೃಷ್ಟಿಯು ಎಷ್ಟೂ ಕದಲದಂತೆ ಮನವ ನಿಲಿಸಿ, ಸಕಲ ಭೋಗಗಳೆಲ್ಲ ಪ್ರಸಾದ ವಾಗುವಹಾಗೆ ಎಚ್ಚರ ಪಡುವದು ಪ್ರಸಾದಿಸ್ಥಳ.

(೪) ಲಿಂಗಾನುಸಂಧಾನದ ಎಚ್ಚರದ ವ್ಯಾಪಾರದಲ್ಲಿ ಆಚಾರವೇ ಅಂಗವನ್ನಾಗಿಸಿಕೊಂಡು ಆ ಅಂಗದಿಂದ ಲಿಂಗದ ಅನುಭವ ವನ್ನು ಹೊಂದುವದು ಪ್ರಾಣಲಿಂಗಿಸ್ಥಳ.

(೫) ಲಿಂಗ ಪತಿ ತಾನು ಸತಿಯಾಗಿ ಸದಾ ಲಿಂಗದೊಡನೆ ಲಿಂಗಾ ನುಭವದ ಆನಂದದಲ್ಲಿ ತೆರಪಿಲ್ಲದಿರುವದು ಶರಣಸ್ಥಳ.

(೬) ನಾನು ತಾನೆಂಬ ಭೇದಭಾವವು ಅಳಿದು ಯಾವ ವ್ಯಾಪಾರ ಗಳಲ್ಲಿ ತಾನಿರದೆ ಲಿಂಗದ ಅಂಗವಾಗಿ ಸಮರಸ ಯೋಗದಲ್ಲಿ ರುವದು ಐಕ್ಯಸ್ಥಳ.

(೭) ಜಾತಿ ಜನನ ಮರಣ ಉಚ್ಛಿಷ್ಟ ರಜಸ್ಸುಗಳಿಂದ ಲಿಂಗಪೂಜಾದಿ ಕ್ರಿಯೆಗಳಿಗೆ ಅಶುಚಿಯು ಉಂಟಾಗದಿರುವದರಿಂದ ಈ ಪಂಚಸೂತ ಕಗಳನ್ನು ಸಂಪೂರ್ಣವಾಗಿ ನಿರಸನ ಮಾಡಿ ಆಚರಿಸುವದು.

(೧) ಲಿಂಗಾಯತರಿಗೆ ಜಾತಿಭೇದವಿಲ್ಲ; ಕಾರಣ ಕಾಯಕ ಭೇದ ದಿಂದ ಲಿಂಗಾಯತರಲ್ಲಿ ಜಾತಿಯನ್ನು ಅರಸುವದು ತಪ್ಪು.

(೨) ಜನನದಾದ ಪಿಂಡಕ್ಕೆ ಲಿಂಗವಧರಿಸಿ ಮಾಂಸಪಿಂಡವಳಿದು ಮಂತ್ರಪಿಂಡವನ್ನಾಗಿಸುವದರಿಂದ ಸೂತಕವಿಲ್ಲ.

(೩) ಶಿವೈಕ್ಯವು ಮರಣವಲ್ಲ! ಕಾರಣ ಅಲ್ಲಿ ಮೈಲಿಗೆಗೆ ಆಸ್ಪದವಿಲ್ಲ.

(೪) ಪ್ರಸಾದೋಪಭೋಗದಲ್ಲಿ ಅನ್ನದ ಪೂರ್ವಾಶ್ರಯವು ಅಳಿದು ಶುದ್ಧವಾಗಿರುವದರಿಂದ ಮಿಕ್ಕುಳಿದುದು ಎಂಜಲವಲ್ಲ! ಕಾರಣ ಅದನು ಎಂಜಲವೆಂದು ಭಾವಿಸಲಾಗದು.

(೫) ಲಿಂಗವಧರಿಸಿ ಲಿಂಗಪೂಜಾಸಕ್ತಳಾದವಳು ಸದಾ ಶುಚಿರ್ಭೂತಳಾಗುದರಿಂದ, ಆಕೆಯಿಂದ ದ್ರವಿಸುವ ಮುಟ್ಟು ಆಕೆಯ ಕ್ರಿಯೆಗೆ ಬಾಧೆಯನ್ನುಂಟುಮಾಡಲಾರದು. ಆ ಬಗ್ಗೆ ಮೈಲಿಗೆಯನಾಚರಿಸುವದು ತಪ್ಪಾಗುವದು.

(೮) ಗುರು, ಲಿಂಗ, ಜಂಗಮ, ವಿಭೂತಿ, ರುದ್ರಾಕ್ಷಿ, ಮಂತ್ರ ಪಾದೋದಕ, ಪ್ರಸಾದಗಳೆಂಬ ಅಷ್ಟಾವರಣಗಳಲ್ಲಿ ನಿರತವಾಗುವದು.

(೧) ಭಕ್ತನ ಅಂಗದಲ್ಲಿ ಸ್ವಸ್ವರೂಪದಿಂದ ಕ್ರಿಯಾಮೂರ್ತಿಯಾಗಿ ಅಂಗವಿಸಿದುದು ಗುರು.

(೨) ಅಂಗೋಪಭೋಗವನು ಪ್ರಸಾದೋಪ ಭೋಗವನ್ನಾಗಮಾಡುವದು ಲಿಂಗ,

(೩) ಏನೊಂದು ರಂಜನೆಯಿಲ್ಲದೆ ಜ್ಞಾನದಲ್ಲಿ ನೆಲಸಿಸುದು ಜಂಗಮ.

(೪) ಭಕ್ತನ ಶುದ್ಧಾಂಗದಲ್ಲಿ ತಾನಾಗಿಯೇ ಹೊಳೆಯುತ್ತಿರುವದು ವಿಭೂತಿ.

(೫) ಭಕ್ತನ ಸಕಲ ಕರಣೇಂದ್ರಿಯಂಗಳನೆಲ್ಲ ಒಳಕೊಂಡು ಆತನ ನೇತ್ರವನು ತನ್ನಲ್ಲಿ ಸ್ಥಿರಪಡಿಸಿಕೊಂಡ ಪ್ರಭೆಯೇ ರುದ್ರಾಕ್ಷಿ.

(೬) ಭಕ್ತನ ಕರ್ಣೇಂದ್ರಿಯದ ವ್ಯಾಪಾರವು ಪ್ರಸಾದೋಪಭೋಗಕ್ಕೆ ನಿರಿಕ್ಷಾರ್ಥವೂ ಹೊರತಾದುದಾಗದಂತೆ ಚಿದ್ವೃತ್ತಿಯನೆಲ್ಲ ತನ್ನಲ್ಲಿ ಲೀನಮಾಡಿಕೊಂಡುದುದೇ ಮಂತ್ರ.

(೭) ರಸನೇಂದ್ರಿಯವು ಬಾಹ್ಯರುಚಿಗೆ ಹರಿಯದಂತೆ ಅದರ ಸಕಲ ವ್ಯಾಪಾರವನ್ನೆಲ್ಲ ಪರಿಪೂರ್ಣವಾದ ಲಿಂಗಾನುಭವದ ಆನಂದಮಯವಾದ ಚಿದ್ರಸದಲ್ಲಿ ಭಕ್ತನನ್ನು ಲೀನಮಾಡಿಕೊಂಡುದುದೇ ಪಾದೋದಕ.

(೮) ಭಕ್ತನ ವ್ಯಾಪಾರವೆಲ್ಲ ನಿರ್ವಿಕಾರದ ಯೋಗದಲ್ಲಿ ಪರಿಣಮಿಸುವಹಾಗೆ ಅಭೇದವೃತ್ತಿಯಿಂದ ಅವನನ್ನು ಅಂಗವಾಗಿಸಿಕೊಂಡುದು ಪ್ರಸಾದ.

(೯) ಶ್ರೀ ಸದ್ಗುರುರಾಯನು ಕರುಣಿಸಿ ನಿಜಸೂತ್ರಕ್ಕೆ ಒಳಪಡಿಸಿಕೊಂಡ ಹೊರತು, ಲಿಂಗದ ನೆಲೆಗಂಡು ಮೇಲಿನ ತತ್ವಗಳು ಅನುಭವಕ್ಕೆ ನಿಲುಕಲಾರವಾದುದರಿಂದ, ಕಲ್ಯಾಣವನ್ನು ಕಟ್ಟಲು ಯಾರಿಗೂ ಅಧಿಕಾರವು ಬರಲಾರದು. ಕಾರಣ ಆದ್ಯರು ತೋರಿಸಿದ ಮಾರ್ಗದಲ್ಲಿ ಭಕ್ತಿಯೋಗದಿಂದ ಗುರುಕಾರುಣ್ಯಕಸ್ಕಾಗಿ ನಡಕೊಳ್ಳಬೇಕಾಗುವದು. ಇದೇ ಕಲ್ಯಾಣದ ತಳಹದಿಗೆ ಕಾರಣವು! ಇದೇ ಕಲ್ಯಾಣಕ್ಕಾಗಿ ಆಚರಿಸುವ ಗೌರೀ ವ್ರತವು! ಗೌರೀವ್ರತವೇ ನಿಜವಾದ ವೀರಶೈವ ಮಾರ್ಗವು!!! ಈ ಗೌರೀವ್ರತವು ಅಳವಟ್ಟ ಹೊರತು ಗುರುಕಾರುಣ್ಯದ ಪಾತ್ರತೆಯು ಬರಲಾರದು. ಮೊದಲು ಎಲ್ಲರೂ ಇದನ್ನು ಆಚರಿಸಬೇಕಾದುದು.

(೧೦). ಲಿಂಗಸಾಮರಸ್ಯಯೋಗದಲ್ಲಿ ಲಿಂಗದೃಷ್ಟಿಯಿಂದ ಸ್ತ್ರೀಯರಿಗೂ ಪುರುಷರಿಗೂ ಸಮಾನ ಅಧಿಕಾರವಿರುವದರಿಂದ ಸ್ತ್ರೀಪುರುಷರೆಂದು ಭೇದ ಮಾಡದಿರುವದು.

(೧೧) ಆತ್ಮರ ಸೃಷ್ಟಿಯು ಲಿಂಗದ ಅಂಗದಿಂದ ತೋರಿದುದರಿಂದ ಎಲ್ಲರಿಗೂ ಲಿಂಗವೇ ಪತಿಯು. ಆದುದರಿಂದ ಲಿಂಗಸಾಮರಸ್ಯಯೋಗದಲ್ಲಿ ಲಿಂಗ ಪಾತಿವ್ರತ್ಯವೇ ಮುಖ್ಯವಾದುದುದು. ಕಾರಣ ಸ್ತ್ರೀಯರು ಕೂಡ ಲಿಂಗ ಪಾತಿವ್ರತ್ಯವನ್ನು ಆಚರಿಸಬೇಕಾಗುವದು. ಲೌಕಿಕ ಪಾತಿವ್ರತ್ಯವು ಲಿಂಗ ಪಾತಿವ್ರತ್ಯಕ್ಕೆ ಅಡ್ಡಾದುದಾದರೆ ಅದನ್ನು ಮೀರಬೇಕಾಗುವದು.

---

# ಸಮಾಜದಲ್ಲಿ ನೆಲೆಗೊಂಡ ದೋಷಗಳು.

ಮೇಲಿನ ತತ್ವಗಳನ್ನು ಕ್ರಮದಿಂದ ಒಂದೊಂದನ್ನೇ ವಿಮರ್ಶಿಸುತ್ತ ಹೋಗುವದರಿಂದ, ಸಮಾಜದ ದುರ್ದಶೆಗೆ ಕಾರಣವಾದ ದೋಷಗಳು ಒಡೆದು ತೋರುವವು. ಕಾರಣ ಅವುಗಳನ್ನು ಕೆಳಗೆ ಕ್ರಮವಾಗಿ ವಿವರಿಸಿ ಕನ್ನಡಿ ಮಾಡಿ ಇಟ್ಟಿರುವದು.

ಇನ್ನು ಶರೀರದಲ್ಲಿ ಒಂದು ಅವಯವದಿಂದಾದ ದೋಷಕ್ಕೆ ಮತ್ತೊಂದ ಅವಯವವು ಪಾತ್ರವಲ್ಲೆಂದೂ, ಆ ಅವಯವವು ಮಾಡಿದ ತಪ್ಪನ್ನು ಅದೇ ಉಣ್ಣಲೆಂದೂ ಅನ್ನಲಿಕ್ಕೆ ಬರುವಹಾಗಿಲ್ಲ; ಏಕೆಂದರೆ ಆ ಶರೀರದಿಂದ ಆ ಅವಯವವು ಬೇರೆಯಾದುದಲ್ಲ; ಮತ್ತು ಸರ್ವಾವಯವಗಳನ್ನು ಒಮ್ಮೆಲೆಯಾಗಲಿ, ಕ್ರಮದಿಂದ ಬೇರೆ ಬೇರೆ ಯಾಗಲಿ ಕುಣಿಸುವ ವಸ್ತು ಇಡೀ ಶರೀರ ತುಂಬಾ ವ್ಯಾಪಿಸಿ, ಹೃದಯಸ್ಥವಾಗಿರುವದು. ( ಹೃದಯದಲ್ಲಿರುವದು ) ಯಾವದೊಂದು ಅವಯವದಿಂದ ಆದ ತಪ್ಪಿಗೆ ಆ ಹೃದಯಸ್ಥವಾದುದೇ ಕಾರಣವಾದುದರಿಂದ, ಅದನ್ನು ಶಿಕ್ಷಿಸಲು ಆ ಇಡೀ ಶರೀರವನ್ನೇ ಉಪಯೋಗಿಸಬೇಕಾಗುವದು- ಇದೇ ಮಾತು ಸಮಾಜಪುರುಷನಿಗೂ ಹತ್ತುವದು. ಸಮಾಜದೊಳಗಿನ ಪ್ರತಿಯೊಂದು ವ್ಯಕ್ತಿಯು ಅದಕ್ಕೆ ಸಂಬಂಧಪಟ್ಟಿರುವದು. ಒಂದು ವ್ಯಕ್ತಿಯಿಂದಾದ ದೋಷಕ್ಕೆ ನಾನು ಪಾತ್ರನಲ್ಲವೆಂದು ಯಾರೂ ಅನ್ನಲಿಕ್ಕೆ ಬರುವದಿಲ್ಲ. ಎಲ್ಲಿಯವರೆಗೆ ಆ ವ್ಯಕ್ತಿಯು ಸಮಾಜದಲ್ಲಿರುವದೋ, ಅಲ್ಲಿಯವರೆಗೆ ಆ ದೋಷದ ಫಲವನ್ನು ಎಲ್ಲರೂ ಉಂಡೇ ತೀರಬೇಕಾಗುವದು. ಆ ದೋಷವು ಸಮಾಜಕ್ಕೆ ತಟ್ಟಬಾರದೆಂದು ಇರುತ್ತಿದ್ದರೆ, ಆ ದೋಷವನ್ನು ಮಾಡಿದ ವ್ಯಕ್ತಿಯನ್ನು, ಹಾವು ಕಡಿದ ಅವಯವವನು ಹೇಗೋ ಹಾಗೆ, ಸಮಾಜದಿಂದ ಹೊರಗಿಡಬೇಕು. ಹೊರಗೆ ಹಾಕುವದು ಮಾತ್ರ ಬೇಡ! ನಿರ್ದೋಷಿಯಾಗಿರುವದು ಬೇಕು! ಅಂದರೆ ಇದ್ದಾಗದ ಸಮಾಜದಲ್ಲಿ ಎಷ್ಟೋ ಸದಾಚಾರ ಸಂಪನ್ನರೂ, ಧರ್ಮನಿಷ್ಠಾಪರರೂ ಆದ ವ್ಯಕ್ತಿಗಳು ತಮ್ಮಷ್ಟಕ್ಕೆ ತಾವೇ ಇರಬಹುದು. ಇತರ ಮಂದಿ ಮಾಡಿದ ದೋಷಗಳಿಗೆ ನಾವು ಪಾತ್ರರಲ್ಲೆಂದು ಭಾವಿಸಲಿಕ್ಕಾಗದು. ಏಕೆಂದರೆ ಆ ಭಾವನೆಯು ಇಡೀ ಸಮಾಜದೃಷ್ಟಿಯಿಂದ ಪರಿಪೂರ್ಣವಾದದ್ದಲ್ಲ. ತಾವು ನಿರ್ದೋಷಿಗಳೆಂದು ಸಾಧಿಸುವದಾದರೆ, ಮೊದಲು ತಮ್ಮನ್ನು ತಾವೇ ಸಮಾಜದಿಂದ ಹೊರತು ಪಡಿಸಿಕೊಳ್ಳಬೇಕಾಗುವದು. ಹೀಗೆ ಹೊರತು ಪಡಿಸಿಕೊಂಡು ಸಾಧಿಸುವವರಿಗೆ ಸ್ವಾಭಿಮಾನದ ಸ್ವತಂತ್ರ ವ್ಯಕ್ತಿಗಳೆಂದು ಕರೆಯಬೇಕಾಗುವದು. ಇಂಥವರಿಂದ ಸಮಾಜದ ಯಾವ ಹಿತಕಾರ್ಯಗಳೂ ಆಗವು. ನಮ್ಮ ವೀರಶೈವ ಸೃಷ್ಟಿಯನ್ನು ನಿರೀಕ್ಷಿಸಿದರೆ ಪ್ರತಿಯೊಂದು ವ್ಯಕ್ತಿಯು ಜಗದ್ವ್ಯಾಪಿಯಾದ ಶ್ರೀಮನ್ನಿರಂಜನ ಜಗದ್ಗುರು ಸಿದ್ಧಪ್ರಭುವರನೆಂಬ ಶೂನ್ಯ ಲಿಂಗವನ್ನು ತಮ್ಮ ಪ್ರಾಣವನ್ನಾಗಿಸಿಕೊಂಡು ಸದಾಚಾರನಿರತವಾಗಿ ನಡೆಯುವದರಿಂದ, ವ್ಯಕ್ತಿಶಃ ನೋಡಿದರೂ ಅದೇ ನೋಟ! ಗುಂಪುಗೂಡಿ ಇಡೀ ಸಮಾಜವನ್ನು ನೋಡಿದರೂ ಅದೇ ನೋಟ! ಅಂದರೆ ಸಮಾಜವೆಂಬ ಪುರುಷನು ಆ ಶೂನ್ಯಲಿಂಗವೇ ಪ್ರಾಣವಾಗಿ, ಶಕ್ತಿವಿಶಿಷ್ಟಾದ್ವೈತವರ್ತನವೇ ಅಂಗವಾಗಿ ತೋರುವನು. ಆದುದರಿಂದ ಸಮಾಜದಲ್ಲಿ ಸಂಭವಿಸಿದ ತಪ್ಪುಗಳು ತನ್ನಿಂದ ಆಗಿರಲಿ, ಆಗದೆ ಇರಲಿ, ಅವು ತನ್ನಿಂದ ಆದವುಗಳೆಂದೇ ಒಪ್ಪಿಕೊಳ್ಳುವದು ಅವನ ಧರ್ಮವು! ಮತ್ತು ಪ್ರತಿಯೊಬ್ಬನು ಸಮಾಜ

ಸಂಬಂಧದಿಂದ ಕೆಳಗೆ ಹೇಳಿದ ಮೂರು ನಿಯಮಗಳನ್ನು ಪರಿಪಾಲಿಸುವದೇ ಅವನ ಆದ್ಯಕರ್ತವ್ಯವಾಗಿರುವದು. ಅದರೊಳಗೆ ನಮ್ಮ ವೀರಶೈವದಲ್ಲಿ, ಇವು ವೈಯಕ್ತಿಕ ನಿಯಮಗಳು, ಇವು ಧಾರ್ಮಿಕ ನಿಯಮಗಳು, ಇವು ಸಾಮಾಜಿಕ ನಿಯಮಗಳು, ಇವು ವ್ಯಾವಹಾರಿಕ ನಿಯಮಗಳು ಎಂದು ಬೇರ್ಪಡಿಸಿ ಹೇಳಿರುವದಿಲ್ಲ. ಕಾರಣ ಆವದೊಂದು ನಿಯಮ ತಪ್ಪಿದರೆ ಅದರಿಂದ ತನಗೂ ತನ್ನ ಸಮಾಜಕ್ಕೂ ಕುಂದು ತಟ್ಟದೆ ಇರಲಾರದು.

### ಅವಶ್ಯವಾಗಿ ಪರಿಪಾಲಿಸತಕ್ಕ ಮೂರು ನಿಯಮಗಳು.

(೧) ತ್ರಿಕರಣಪೂರ್ವಕವಾಗಿ ತನ್ನ ನಡೆಯಲ್ಲಿ ಯಾವ ತರದ ದೋಷವೂ ಯಾವ ಕಾಲಕ್ಕೂ ಎಲ್ಲಿಯೂ ಯಾವ ರೀತಿಯಿಂದಲೂ ಆಗದಂತೆ ಎಚ್ಚರ ಪಡತಕ್ಕದ್ದು.

(೨) ತನ್ನ ಹಾಗು ತನ್ನ ಸಂಬಂಧಿಕರಲ್ಲಾಗಲಿ, ನೆರೆಹೊರೆಯವರಲ್ಲಾಗಲಿ ಇಂತಹದೊಂದು ದೋಷವು ಸಂಭವಿಸುವದೆಂಬ ಲಕ್ಷಣವು ಕಂಡ ಕೂಡಲೆ ದೋಷವು ಅವರಿಂದ ಆಗದಂತೆ ಅವರನ್ನು ಹಾದಿಗೆ ತರಲು ಎಷ್ಟೂ ಹಿಂಜರಿಯಬಾರದು.

(೩) ತನಗೆ ಏನೊಂದು ತಿಳಿಯದೆ ಹೋಗಿ ದೋಷವು ಸಂಭವಿಸಿದಲ್ಲಿ ತಕ್ಕ ಶಾಸನವನ್ನು ಮಾಡಿಸಿ, ಅಂತಹ ದೋಷವು ಪುನಃ ಯಾರಿಂದಲೂ ಆಗದಂತೆ ಮಾಡುವದರಲ್ಲಿ ನಿಷ್ಠಾಪರರಾಗತಕ್ಕದ್ದು.

ಇವುಗಳಲ್ಲಿ ಮೊದಲನೆಯ ನಿಯಮವನ್ನು ಪರಿಪಾಲಿಸುವದರಲ್ಲಿ ದಕ್ಷನಾದವನು ಎರಡನೆಯ ನಿಯಮವನ್ನು ಪರಿಪಾಲಿಸಲು ಧೀರನಾಗುವನು. ೧ನೆಯ ೨ನೆಯ ನಿಯಮಗಳನ್ನು ಪರಿಪಾಲಿಸುವದರಲ್ಲಿ ನಿರತನಾದವನು, ೩ನೆಯ ನಿಯಮವನ್ನು ಪರಿಪಾಲಿಸಲು ನಿಷ್ಠೆಯ ತಾಳುವನು. ಈ ಮೂರೂ ನಿಯಮಗಳನ್ನು ಪರಿಪಾಲಿಸುವದರಲ್ಲಿ ಎಲ್ಲರೂ ನಿಷ್ಠಾಪರರಾದಲ್ಲಿ ಸಮಾಜಪುರುಷನಿಗೆ ಯಾವ ದೋಷಗಳೂ ಸಂಭವಿಸವು. ಶೂನ್ಯಲಿಂಗದ ನೆಲೆಯು ನಿಲುಕುವವರೆಗೆ, ಸಾಧಕರಿಗೆ ಇಂತಹ ನಿರ್ದೋಷಿಯಾದ ಸಮಾಜವೇ ಕರದೊಳಗಿನ ಇಷ್ಟವಾಗಿರುವದು.

### ತತ್ಪ್ರಾನುಕ್ರಮ ವಿಮರ್ಶಾತ್ಮಕ ದೋಷವಿವರವು.

(೧) ಗುರು ಲಿಂಗ ಜಂಗಮದ ಬಾಹ್ಯಾಚರಣೆಗೂ, ಶಾಸ್ತ್ರಬೋಧೆಗೂ ಗುರುವರ್ಗದ ವಿಕಾರಿಗಳಾದ ನರರೇ ಎಲ್ಲೆಲ್ಲೆಲ್ಲ ಗದ್ದುಗೆಯನೇರಿದುದರಿಂದ, ಇಂತಹ ನರರಲ್ಲಿಟ್ಟ ಭಕ್ತವರ್ಗದ ನಂಬುಗೆಯೆಲ್ಲ ಗುರುಲಿಂಗಜಂಗಮಕೆ ಸಲ್ಲದೆ, ಶಿವನ ನೆಲೆಯು ತಿಳಿಯದೆ, ಆ ನರರ ಸ್ಪರ್ಶ ಸನ್ನಿಧಿಗಳಿಂದುಂಟಾದ ದೋಷಗಳಿಂದ ಕೆಟ್ಟು, ಭಕ್ತಿಯು ಹಸಗೆಟ್ಟಿರುವದು.

(೨) ಗುರುಲಿಂಗಜಂಗಮವ ಬಿಟ್ಟು ಅನ್ಯ ದೈವಕೆ ನಡಕೊಳ್ಳಬಾರದೆಂಬ ತತ್ವವು ಹಸಗೆಟ್ಟು, ಮನೆ ಮನೆಯ ಪ್ರತಿಜಗಲಿಗಳ ಮೇಲೆ ಬೇರೆ ಬೇರೆ ಕುಲದೇವತೆಗಳು ಕಾಲುಚಾಚಿರುವವು.

(೩) ಪಂಚಮಹಾಪಾತಕಗಳು ಮನೆಮಾಡಿಕೊಂಡು ಯಾವ ದುರ್ವ್ಯಾಪಾರಕ್ಕೂ ಹೆದರದಂತೆಯೂ, ಹೇಸದಂತೆಯೂ, ನಾಚದಂತೆಯೂ ಮಾಡಿ ಬಿಟ್ಟವೆ.

## ಈ ಮೂರು ತತ್ವಗಳ ಅತಿಕ್ರಮಣದ ದೋಷಗಳ ಉದಾಹರಣೆಗಳು.

ಜನತೆಯಲ್ಲಿ ಒಬ್ಬರ ಮೇಲೊಬ್ಬರ ನಂಬುಗೆಯು ಇಲ್ಲದಿರುವದೇ ಸಾಕ್ಷಿ! ವಿಷಯಲಂಪಟರಾಗಿ ಧನಲೋಭದಿಂದ ಬಡ್ಡೀಬಾಚಿ ವ್ಯವಹಾರವು ಬೆಳೆದದ್ದೇ ಸಾಕ್ಷಿ. ಸರಕಾರದ ಸಹಾನುಭೂತಿಯು ತಮ್ಮಮೇಲೆ ಉಂಟಾಗುವದಕ್ಕಾಗಿ ಅಧಿಕಾರಸ್ಥರನ್ನು ಮೋಹಿಸುವ ಪಾನಸುಪಾರಿ ಟೀಪಾರ್ಟಿ ಮುಂತಾದ ವ್ಯಾಪಾರಗಳು ಸ್ಪರ್ಧೆಪ್ರತಿಸ್ಪರ್ದೆಗಳಿಂದ ಬೆಳೆದದ್ದೇ ಸಾಕ್ಷಿ! ಲಿಂಗದೈವವ ಬಿಟ್ಟು, ಜೇಮವ್ವ; ದುರ್ಗವ್ವ, ಹನುಮಪ್ಪ ಕರೆವ್ವ, ಕಂಬೆವ್ವ, ಬರಮಪ್ಪ ಇತ್ಯಾದಿ ದೇವತೆಗಳಿಗೆ ನಡಕೊಳ್ಳುತ್ತಿರುವದೇ ಸಾಕ್ಷಿ! ಬಂಡೀ ಹೂಡಿ ಹಂತುಗಟ್ಟಿಕೊಂಡು ಊರುಸುಜಾತ್ರಿಗಳನ್ನು ಮಾಡುತ್ತಿರುವದೇ ಸಾಕ್ಷಿ! ಊರು ಊರುಗಳ ಕೇರಿ ಕೇರಿಗಳಲ್ಲಿ ಹೊಲೆ ಹದಿನೆಂಟು ಜಾತಿಯವರೊಂದಿಗೆ ಸ್ಪಾತ್ತಲಿನ ದೇವತೆಗಳಿಗೆ ಉಡಿತುಂಬುವ, ನೀರು ನೀಡುವ, ಬಲಿಕೊಡುವ, ಕಾರ್ಯಗಳನು ಮಾಡುತ್ತಿರುವದೇ ಸಾಕ್ಷಿ! ಸ್ಥಾವರಲಿಂಗಗಳ ಪೂಜಾರಿಕೆಗಾಗಿ ಕೋರ್ಟ ಕಚೇರಿಗಳಿಗೆ ನ್ಯಾಯಗಳು ಬರಹತ್ತಿರುವದೇ ಸಾಕ್ಷಿ! ವ್ಯಭಿಚಾರವು ಹೆಚ್ಚಾಗಿ ವಿರಕ್ತ ಮಠಗಳಲ್ಲಿಯೂ ಕೂಡ ತೊಟ್ಟಿಲುಗಳು ತೂಗಹತ್ತಿರುವದೇ ಸಾಕ್ಷಿ! ಹಣದಾಶೆಗಾಗಿ ಕೋರ್ಟ ಕಚೇರಿಗಳಲ್ಲಿ ಸುಳ್ಳು ಸಾಕ್ಷಿಗಳು ಆಗಹತ್ತಿರುವದೇ ಸಾಕ್ಷಿ! ರಂಡಭಾಜಿತನದಲ್ಲಿ ಮುಳುಗಿ ಪಟ್ಟಚರಾಧಿಪರೂ ಕೂಡ ಕಚೇರಿಯ ಕಟ್ಟೀ ಕಂಡದ್ದೇ ಸಾಕ್ಷಿ! ಗೆಣೆಯ ಗೆಣತಿಯರಾಗಿ ಮಠಮಾನ್ಯರೂ ಕೂಡ ಯಾವ ನೂರ ಜಾತ್ರಿಯನ್ನು ಮಾಡುತ್ತಿರುವದೇ ಸಾಕ್ಷಿ! ಗೆಣತಿಯ ನಂಬಿ ಹೆಂಡತಿಯ ಬಿಟ್ಟು ಆಣೆಕಿಸಿ ಕಣಿದಾಡುತ್ತಿರುವದೇ ಸಾಕ್ಷಿ! ಹೆಣ್ಣು ಸಂಗವಮಾಡಿ, ಹುಣ್ಣು ಹತ್ತಿಸಿಕೊಂಡು, ಹುಳಿತು, ಎಣ್ಣೆ ಔಷಧ ಉಣ್ಣದೂಟವನುಂಡುದಕ ಪ್ರತಿಯೊಂದು ದವಾಖಾನೆಯಲ್ಲಿ ಡಾಕ್ಟರಂ ಕೇಸಫಾಯಲುಗಳೇ ಸಾಕ್ಷಿ! ನೂರೆಂಟು ಕುಲ ಒಂದಾಗಿ ಕುಡಿಯುವ ಸೋಡಾ ಚಹಾ, ಕಾಫಿ, ಲೇಮನ್ ಮುಂತಾದ ವ್ಯಾಪಾರದ ಅಂಗಡಿಗಳು ಮಿತಿಮೀರಿ ಬೆಳೆದಿರುವದೇ ಸಾಕ್ಷಿ! ಭಂಗೀಪಾನ, ಚುಟಾ ಸಿಗ್ರೇಟ್ ಇತ್ಯಾದಿಗಳ ವ್ಯಾಪಾರವು ಹೆಚ್ಚಾದುದೇ ಸಾಕ್ಷಿ! ಬಣ ಬಣಗಳಲ್ಲಿ

ಜಗಳ, ಸಂಗ ಸಂಗಡಗಳಲ್ಲಿ ಜಗಳ, ಮನೆ ಮನೆಗಳಲ್ಲಿ ಜಗಳ ಹೆಚ್ಚಾಗಿ ಪೋಲೀಸಖಾತೆಯು ಬೆಳೆದದ್ದೇ ಸಾಕ್ಷಿ! ಸತ್ಯವಂತಿಕೆ ಪ್ರಾಮಾಣಿಕತೆಗಳು ಹಾಳಾಗಿ ಕೊಡಕೊಂಬುವ ವ್ಯವಹಾರದಲ್ಲಿ ಕತಬಿಕರಾರ ಪತ್ರಗಳು ಹೆಚ್ಚಾದದ್ದೇ ಸಾಕ್ಷಿ! ಈ ಕತಬಿಕರಾರ ಪತ್ರಗಳೂ ಖಾತೆ ಖತಾವಣಿಗಳೂ ಕೋರ್ಟಿನಲ್ಲಿ ಸುಳ್ಳಾಗಹತ್ತಿ ಅಪೀಲುಗಳಮೇಲೆ ಅಪೀಲು ಬೆಳೆದು ನ್ಯಾಯಗಳನ್ನು ನಿರ್ಣಯಿಸುವ ಕಾಯದೆಗಳೆಲ್ಲ ಮರೆಮೋಸಗಳ ವ್ಯಾಪಾರಗಳಿಗೆ ಪರಿವರ್ತಿಸಿ, ಒಬ್ಬರ ಗೋಣು ಒಬ್ಬರು ಮುರಿಯುವ ವ್ಯಾಜ್ಯಗಳು ಹೆಚ್ಚಾಗಿ ದಿವಾಣಿಖಾತೆಯು ಬೆಳೆದದ್ದೇ ಸಾಕ್ಷಿ! ಕಚೇರಿಗಳಲ್ಲೆಲ್ಲ ವೀರಶೈವ ಅಪರಾಧಿಗಳೇ ಹೆಚ್ಚಾಗಿ ಸರಕಾರೀ ಅಮಲದಾರರು ಈ ಸಮಾಜಕ್ಕೆ ಗನ್ಹೇಗಾರಜಾತಿ (Criminal Tribe) ಎಂದು ಬಾಯಿಯಿಂದ ಆರೋಪ ಕೊಟ್ಟದ್ದೇ ಸಾಕ್ಷಿ! ಪ್ರತಿಯೊಂದು ಖೂನಿಯ ಖಟ್ಲೆಯಲ್ಲಿ ಈ ಸಮಾಜದವರೇ ಹೆಚ್ಚಾಗಿದ್ದದ್ದೇ ಸಾಕ್ಷಿ! ಕುಡಿಯಬಾರದ್ದು ಕುಡಿಯೋಣ, ತಿನ್ನಬಾರದ್ದು ತಿನ್ನೋಣ ಇತ್ಯಾದಿ ಕದ್ದುಮುಚ್ಚಿ ವ್ಯಾಪಾರಗಳಿಗೆ ಕೈ ಕೆಳಗಿನ ಆಳುಗಳೂ, ಇಟ್ಟುಕೊಂಡ ಸೂಳೆಯರೂ, ಜೀವದಗೆಳೆಯರೂ ಸಾಕ್ಷಿ! ಇತ್ಯಾದಿ ಗೋಡೆಯು ತೋಳೆದಂತೆ ರಾಡಿಯೇ!

(೪) ಕಾಯಕಗಳೆಲ್ಲ ಕೆಟ್ಟು ಕಸಬುಗಳಾಗಿ ಹಳಗೆಟ್ಟು ಹೋಗಿವೆ.

ಶ್ರೀಮದ್ಬಸವಣ್ಣನು ನಿಜದೃಷ್ಟಿಯಿಂದ ಸಮಾಜರಚನೆಯನ್ನು ಮಾಡಿದ್ದನು. ನೋಡಿದರೆ, ಅದು ಸಾಮಾನ್ಯರ ದೃಷ್ಟಿಗೆ ಎಷ್ಟೂ ಹರಿಯದಾಗಿದೆ. ಶಾಸ್ತ್ರೀಯ ಶೋಧದಲ್ಲಿ ಸುಧಾರಣೆಯ ಒಳ್ಳೇ ಶಿಖರಕ್ಕೇರಿದ ಈಗಿನ ಕಾಲದಲ್ಲಿ ಒಳ್ಳೇ ಅನುಭವಿಕರಿಂದ, ಎಂದೂ ಒಡೆಯಲಿಕ್ಕೆ ಬಾರದಂತೆ ರಚಿಸಿದ ಅಂತ್ವರ್ಪ ಕೋಟೆಯು ಸಹಾ ಮೊನ್ನಿನ ಮಹಾಯುದ್ಧದಲ್ಲಿ ನೆಲಸಮವು ಮಾಡಲ್ಪಟ್ಟಿತು. ಅದೇ ಲಿಂಗವಂತ ಸಮಾಜವು ನಿಜಸೂತ್ರವಿಡಿದು ತನ್ನ ತತ್ವಗಳಿಗೆಷ್ಟೂ ಕೊರತೆಯು ಉಂಟಾಗದಂತೆ ಆಚರಿಸುತ್ತಿದ್ದರೆ, ಈ ಕೋಟೆಯು ಹರಿಬ್ರಹ್ಮಾದಿಗಳ ಕಡೆಯಿಂದಲೂ ಒಡೆಯಲಸಾಧ್ಯವಾಗಿರುತ್ತಿತ್ತು. ಆದರೆ ಮಾಡುವದೇನು ಕಲಿಕಾಲಮಹಿಮೆಯು ಸಮಾಜವನ್ನು ಹದ್ದುನರಿನಾಯಿಗಳ ಪಾಲು ಮಾಡಿಬಿಟ್ಟಿರುವದು. ಎಂಥ ಬಲಿಷ್ಠರಾದ ರಾಜರಾಜರುಗಳು ಈ ಕೋಟೆಯನ್ನು ಮುತ್ತಿ ಯುಗಯುಗಾಂತರ ಗಟ್ಟಲೆ ಪ್ರಯತ್ನಿಸಿದರೂ, ಈ ಕೋಟೆಯು ಅವರ ಸ್ವಾಧೀನವಾಗಲಾರದು. ಇದರ ಮೇಲೆ ಯಾರು ಹಲ್ಲಾಮಾಡಿ ಏನು ಗಳಿಸಿಕೊಳ್ಳುವದಿದೆ? ಎಂದೂ ಕಾಳಿಗೆ ಕರಿಯದಂಥ ಬೆಳದಿಂಗಳಕ್ಕೆ ಚಿಗಿಯದಂಥ ವ್ಯವಸೆಯನ್ನು ಬಸವಣ್ಣನು ಮಾಡಿಟ್ಟಿರುವನು. ಇಷ್ಟೇ ಅಲ್ಲ! ಇದರೊಳಗಿನ ಒಂದೊಂದು ಸಂಗತಿಯನ್ನು ಅನುಕರಣಮಾಡಿದ ಮಾತ್ರದಿಂದ ಲೋಕಕ್ಕೆ ಎಷ್ಟೋ ಕಲ್ಯಾಣ ವಾಗುವ ಹಾಗಿರುವದು. ಕಾಯಕಗಳ ವಿಷಯವಾಗಿ ಶ್ರೀಮದ್ಬಸವಣ್ಣನು ಹಾಕಿಕೊಟ್ಟ ನಿಯಮಗಳು ಎಷ್ಟು ಉದಾತ್ತತತ್ವಗಳಿಂದ ಹಾಕಲ್ಪಟ್ಟಿರುವವೆಂಬುದು

ಈಗ ಸ್ವರಾಜ್ಯದ ಸಲುವಾಗಿ ಹೋರಾಡುತ್ತಿರುವ ಮುಂದಾಳುಗಳು ಪಡುತ್ತಿರುವ ಕಷ್ಟಗಳಿಂದ ತಾನೆ ಸ್ಪಷ್ಟವಾಗುತ್ತಿರುವದು. (೧) ಲಿಂಗವಿಲ್ಲದಭವಿಯು ಬಿತ್ತಿ ಬೆಳೆದ ಯಾವ ಕಾಳು ಕಡಿಗಳನ್ನೂ, ಭವಿಯಿಂದ ತಯಾರಾದ ಯಾವ ಒಡವೆಗಳನ್ನೂ ಬಳಿಸಕೂಡದು ಮಾರಕೂಡದು. (೨) ಇಂದಿನ ಕಾಯಕದಿಂದ ಬಂದುದನ್ನೆಲ್ಲ ಇಂದೇ ಗುರುಲಿಂಗಜಂಗಮದ ದಾಸೋಹಕ್ಕೆ ಮಾಡಬೇಕು (೩) ಪ್ರತಿಯೊಬ್ಬ ಲಿಂಗಾಂಗಿಯು ಗುರುಕೊಟ್ಟ ಕಾಯಕದಿಂದಲೇ ದಾಸೋಹದಲ್ಲಿರಬೇಕು (೪) ಬಿಕ್ಷೆಯನ್ನು ಯಾರೂ ಬೇಡಬಾರದು. ಈ ನಾಲ್ಕು ನಿಯಮಗಳನ್ನು ಸಂಪೂರ್ಣವಾಗಿ ನಡಿಸುವದರಿಂದ ಯಾವ ಸಮಾಜಕ್ಕೂ ಯಾವ ಕಾಲಕ್ಕೂ ಅನ್ನ ಅರಿವೆಗಳ ಕೊರತೆಯುಂಟಾಗಲಾರದು. ವಿಲಾಸದ ಒಡವೆಗಳು ಹೆಚ್ಚಿ ಮಾನವನನ್ನು ವಿಕಾರದ ಕಡೆಗೆ ತಿರುಗಿಸಲಾರವು. ಸಮಾಜದೊಳಗಿನ ಪ್ರತಿಯೊಂದು ವ್ಯಕ್ತಿಗೆ ಸಾಕಷ್ಟು ಅನ್ನ ಅರಿವೆಗಳು ಯಾವ ಕಾಲಕ್ಕೂ ಸಿಗುವ ವ್ಯವಸ್ಥೆಯು ಇರುವದರಿಂದ ನಾಳಿನ ಚಿಂತೆಯಿಲ್ಲದೆ, ಆಯಾವ್ಯಕ್ತಿಯ ತನುಕರಣಾದಿಗಳು ಸಹಜವಾಗಿ ಈಶಚಿಂತನೆಯ ಕಡೆಗೆ ತಿರುಗುವವು. ಯಾವ ಕಾಲಕ್ಕೂ ಯಾರಿಂದಲೂ ಏನು ಮಾಡಿದರೂ ಉದ್ಯೋಗ ಕ್ರಾಂತಿಯನ್ನು ಮಾಡಲಿಕ್ಕೆ ಎಷ್ಟೂ ಅನುವು ಸಿಗದಹಾಗೆ ಧಾರ್ಮಿಕ ವ್ಯಾವಹಾರಿಕ ನೈತಿಕ ಸಾಮಾಜಿಕ ದೃಷ್ಟಿಯಿಂದ ಪರ್ಯಾಲೋಚಿಸಿ ಈ ನಿಯಮಗಳನ್ನು ಹಾಕಿ ಕೊಟ್ಟಿರುವದು. ಅಲ್ಲದೆ ಮಾನವನ ಬಾಳ್ವಿಗೆ ಬೇಕಾದ ಯಾವತ್ತೂ ಒಡವೆಗಳನ್ನು ತಯಾರಿಸಲಿಕ್ಕೆ ಬೇಕಾಗುವ ಯಾವತ್ತೂ ಕಾಯಕದವರನ್ನು ಸಮಾಜದಲ್ಲಿ ಒಳಕೊಂಡು, ಆಯಾ ಕಾಯಕದವರ ವಿಷಯವಾಗಿ, ಕಾಯಕದ ಕಡೆಗೇ ದೃಷ್ಟಿಯಿಟ್ಟು, ಅವರ ಅಂತರಂಗದ ಅನುಸಂಧಾನವ್ನು ದುರ್ಲಕ್ಷಿಸಿ, ಉಚ್ಚ ನೀಚಕಲ್ಪನೆಗಳು ಒಲ್ಲೆಸೇರಿ, ಎಲ್ಲರೂ ಸರಿಸಮಾನರೆಂಬ ತತ್ವಕ್ಕೆ ಕುಂದು ತಟ್ಟಬಾರದೆಂದು ಎಷ್ಟೋ ವಚನಗಳನ್ನು ಹಾಡಿಕೊಂಡಿರುವನು ವಾಚಕರ ಅವಲೋಕನಾರ್ಥವಾಗಿ ಅವುಗಳಲ್ಲೊಂದು ಮಾಸಲೆಗಾಗಿ ಕೆಳಗೆ ಕೊಟ್ಟಿರುವದು.

" ದೇವಸಹಿತ ಭಕ್ತನು ಎನ್ನಮನೆಗೆ ಬಂದೊಡೆ ನಿನ್ನ ಕಾಯಕವಾವುದೆಂದು ಬೆಸಗೊಂಡೆನಾದೊಡೆ ನಿಮ್ಮಾಣೆ, ನಿಮ್ಮ ಪ್ರಮಥರಾಣೆ. ತಲೆದಂಡ ತಲೆದಂಡ ಕೂಡಲ ಸಂಗಮದೇವಾ; ಭಕ್ತರಲ್ಲಿ ಕುಲವನರಿಸಿದರೆ ನಿಮ್ಮಾಣೆ ನಿಮರಾಣಿವಾಸದಾಣೆ. "

ಇನ್ನು ಕಲಿಕಾಲಮಹಿಮೆಯಿಂದ ಸಮಾಜವು ಧರ್ಮವ ಬಿಟ್ಟು ವಿಕಾರದ ಹತಿಗೆ ಗುರಿಯಾಗಿ ಕಾಯಕಗಳ ವ್ಯವಸ್ಥೆಯನ್ನು ಕೆಡಿಸಿಕೊಂಡು ಬಳಲುತ್ತಿರುವ ಸ್ಥಿತಿಯ ಕಡೆಗೆ ತಿರುಗುವಾ.

ಮಾನವನ ಉಪಜೀವನಕ್ಕೆ ಅವಶ್ಯವಾದ ಕಾಳುಕಡಿ, ಮತ್ತು ಇವುಗಳ ಸಂಪಾದನೆಗೆ ಹೊಲಗಳನ್ನು ಸಾಗುಮಾಡಲಿಕ್ಕೆ ಸಹಾಯಕಾರಿಯಾದ ದನಗಳ

ಉಪಜೀವನಕ್ಕೆ ಬೇಕಾದ ಹೊಟ್ಟೆ ಮೇವು ಮುಂತಾದ್ದು ಸಾಕಷ್ಟು ಬರುವ ಬೆಳೆಗಳನ್ನು ಬೆಳೆಯದೆ, ಕೇವಲ ನಾಡ್ಡಿನಾಶಿಗಾಗಿ ಹತ್ತಿ ಶೈಮುಂಗ ತಂಬಾಕು ಚಹಾ ಕಾಫಿ ಮುಂತಾದ, ದುಶ್ಚಟಗಳನ್ನು ಹೆಚ್ಚಿಸುವ ದುಷ್ಟಬೆಳೆಗಳಿಗಾಗಿ ಮನಸೋತು ಒಕ್ಕಲಿಗರು ಹಸಗೆಟ್ಟರು. ಈ ಮಾತಿಗೆ ಎಷ್ಟೋ ಜನರು ಹೊಟ್ಟೆಗಿಲ್ಲದೆ ಉಪವಾಸ ಬೀಳುತ್ತಿರುವದೇ ಸಾಕ್ಷಿ! ಮಾಂಸಮಾರಾಟದ ಕಟಿಕರಂಗಡಿಗಳು ಹೆಚ್ಚಿದುದೇ ಸಾಕ್ಷಿ! ಮೇವುಮಿಡಚಿ ಕಡಿಮೆಯಾಗಿ ದನಗಳನ್ನು ಹಿಡಿಯುವದಾಗದೆ ಅವುಗಳನ್ನು ಕಟಗರಿಗೆ ಮಾರಹತ್ತಿದ್ದೇ ಸಾಕ್ಷಿ! ಸಣ್ಣ ಸಣ್ಣ ಮಕ್ಕಳೂ ಕೂಡ ಏನೊಂದು ಹೆದರಿಕೆಯಿಲ್ಲದೆ ಚುಟ್ಟಾ ಸಿಗ್ರೇಟುಗಳನ್ನು ಸೇದಿ ಎದೆ ಗೂಡು ಗಟ್ಟಿಸಿಕೊಂಡು ಅಶಕ್ತರಾಗಹತ್ತಿರುವದೇ ಸಾಕ್ಷಿ! ಒಣರೊಟ್ಟಿಯನ್ನು ಸಹಾ ಹೋಳಿಗೆಗಿಂತ ರುಚಿಯಾಗಿ ತಿನ್ನುವ ಸಾಮರ್ಥ್ಯವುಳ್ಳ ಒಕ್ಕಲಿಗರೂ ಕೂಡ ಚಹಾಕಾಫಿಗಳ ಚಟಕ್ಕೆ ಗುರಿಯಾಗಿರುವದೇ ಸಾಕ್ಷಿ!

ಯಾವತ್ತೂ ಉದ್ಯೋಗಗಳನ್ನೊಳಕೊಂಡು, ಒಕ್ಕಲತನದಲ್ಲಿ ಸೇರಿದವರನ್ನಷ್ಟು ಹೊರತು ಪಡಿಸಿ, ಮಿಕ್ಕುಳಿದ ಜನಸಮೂಹವನ್ನೇ ಉದ್ಯೋಗಕ್ಕೆ ತೊಡಗಿಸುವದಾದ ಮುಖ್ಯೋದ್ಯೋಗವೆನಿಸುವ ನೇಯಕಾರಿಕೆಗೆ ಅರದಾಳ ಹಚ್ಚುವಂತೆ, ಸೆಟ್ಟಿಸಾವುಕಾರರೆಲ್ಲರೂ ಜಂಗಮನದಾದ ಧನವನ್ನು ವಂಚಿಸಿ, ತಮ್ಮದೆಂದೇ ಸೊಕ್ಕಿ, ಸಮಾಜದ ಮೇಲಾಗುವ ದುಷ್ಟಪರಿಣಾಮುವನ್ನೇನೂ ಲಕ್ಷಿಸದೆ, ಪ್ರತಿಯೊಬ್ಬನು ಪ್ರತಿಕುಬೇರನಾಗಲು, ಸ್ವಲ್ಪ ಜನರ ಸಹಾಯದಿಂದ, ಆವರ ನೂರಾರು ಮಡಿ ಜನರ ಕೆಲಸವನ್ನು ಮಾಡುವ ದೆವ್ವಗಳಂತಿದ್ದ ಯಂತ್ರಗಳನ್ನು ತರಿಸಿ, ಅವುಗಳಿಂದಾದ ಸರಕುಗಳನ್ನೇ ಸಮಾಜದ ಪ್ರತಿಯೊಂದು ವ್ಯಕ್ತಿಗೆ ನಿಲುಕುವ ಹಾಗೆ ಕಾರಖಾನೆಗಳನ್ನು ತೆಗೆದು, ನೇಯಕಾರಿಕೆಗೆ ಸಂಬಂಧವಾದ ಕಾಯಕಗಳನ್ನೆಲ್ಲ ಹಸಗೆಡಿಸಿದರು. ಈ ಮಾತಿಗೆ ಎಲ್ಲೆಲ್ಲಿಲ್ಲ ಜಿನ್ನ್, ಪ್ರೆಸ್, ಮಿಲ್ಲು ಇವುಗಳ ಬೊಂಬುಗಳು ತೋರುತ್ತಿದ್ದುದೇ ಸಾಕ್ಷಿ! ನೇಯಕಾರರು, ಬಣಗಾರರು, ಗಾಣಿಗರು, ನೂಲುವವರು, ಹತ್ತೀ ಅರಿಯುವವರು ಮುಂತಾದ ಉದ್ಯೋಗದವರೆಲ್ಲ ಉದ್ಯೋಗವಿಲ್ಲದೆ ಮೂಲಿಗೆ ಬಿದ್ದು, ಉದ್ಯೋಗಕ್ಕಾಗಿ ಊರೂರು ಮನೆ ಮನೆ ತಿರುಗಹತ್ತಿದ್ದೇ ಸಾಕ್ಷಿ! ಭತ್ತದ ಗಿರಣಿಗಳೂ ಹ್ಯಟನ ಗಿರಣಿಗಳೂ ಹೆಚ್ಚಾಗಿ, ಕುಟ್ಟೇ ಬೀಸಿ ಹೊಟ್ಟೇ ಹೊರಕೊಳ್ಳುತ್ತಿದ್ದ ಕೂಲಿಕಾರರು ಪಡುತ್ತಿರುವ ಕಷ್ಟವನ್ನು ಬಣ್ಣಿಸದಾಗಿರುವದೇ ಸಾಕ್ಷಿ! ಈ ನಿರ್ದಯ ಧನಿಕರ ಹಸಗೆಟ್ಟ ಕಾರಖಾನೆಗಳ ಉದ್ಯೋಗದಿಂದ ಅನಂತ ಕಾಯಕಗಳು ಕಟ್ಟಾಗಿ ಹೊಟ್ಟೆಗಿಲ್ಲದೆ ಕಳವು ಹಾದರಗಳು ಹೆಚ್ಚಾದುದೇ ಸಾಕ್ಷಿ!

ಕಾಯಕಕಷ್ಟದ ಸರಕುಗಳ ವ್ಯಾಪಾರದಿಂದಲೇ ಸಾಗಿಸುವದಾದ ವಾಣಿಜ್ಯವು ಯಂತ್ರಗಳಿಂದಾದ ಸರಕುಗಳ ಮತ್ತು ಭವಿಗಳಿಂದಾದ ಸರಕುಗಳ ವ್ಯಾಪಾರದಲ್ಲಿ ತೊಡಗಿ ಹಸಗೆಟ್ಟಿತು. ದೂಷಿತ ಪದಾರ್ಥಗಳಿಂದ ಕೃತ್ರಿಮವಾಗಿ ಮಾಡಿದ ನಾನಾ

ತರಹದ ಸಕ್ಕರೆಯನ್ನು ಉಣಿಸಿ, ಶುದ್ಧ ಪಾಕವನ್ನು ಕೆಡಿಸಿದ್ದೇ ಸಾಕ್ಷಿ! ಯಂತ್ರಗಳಲ್ಲಿ ವಿಕಾರಿಗಳ ಹಸ್ತದಿಂದ ತಯಾರಾದ ಮೋಹಕ ಉಡುಗರೆಗಳಿಂದ ಅಹಂಕಾರವನ್ನು ಜಾಗೃತಪಡಿಸಿ, ಸೋಗಲಾಳತನವನ್ನು ಬೆಳಿಸಿ, ವಿಲಾಸ ವಿಭ್ರಮಗಳನ್ನು ಹೆಚ್ಚಿಸಿ, ದಾಸೋಹವೃತ್ತಿಯನ್ನು ಹಾಳುಮಾಡಿದ್ದೇ ಸಾಕ್ಷಿ! ಪ್ರಾಮುಖ್ಯವಾಗಿ ಕಾಯಕಗಳಿಗೆ ಅರದಾಳ ಹಚ್ಚಿ, ಪುರಾತನರ ಅರವತ್ತು ನಾಲ್ಕುಶೀಲಗಳ ಹೊಲಬುಗೆಡಿಸಿ, ಸಕಲವಿಕಾರಗಳಿಗೆ ಕಾರಣವಾದ ಗೊಂದಲವೆಬ್ಬಿಸಿದ್ದುದೇ ಸಾಕ್ಷಿ!

ಈ ರೀತಿ ಸೆಟ್ಟಿಸಾವುಕಾರರು ಉದ್ಯೋಗಗಳ ಕ್ರಾಂತಿಗೆ ಕಾರಣರಾಗಿ ಸಮಾಜದ ಕಾಯಕಗಳನ್ನೆಲ್ಲ ಹಾಳುಗೆಡವಿ ಉದ್ಯೋಗವಿಲ್ಲದೆ ಬಡವರು ಅನ್ನ ಅರವಿಗಳಿಗ್ಗಾಗಿ ಮನೆ ಮನೆ ತಿರುಗುವಂತೆ ಮಾಡಿದರು.

## (ಜ) ಪಂಚಾಚಾರಗಳು ಹೇಳಹೆಸರಿಲ್ಲವಾಗಿದೆ.

ಇಷ್ಟಲಿಂಗಗಳು ದೇವರ ಜಗಲಿಯಮೇಲೂ, ಅಡಕಲಗಡಿಗೆಗಳಲ್ಲಿಯೂ ಉರುಳಾಡುವದೂ, ಕುದುರೆ ಗೊಂಬೆಗೂ, ಕೆಲವು ನಂಬುಗೆ ಹೀನರ ನಡುವಿನ ಉಡುದಾರದ ಕೆಳಗೂ ಜೋತಾಡುತ್ತಿರುವದೂ, ಕೆಲವರ ಕರಡಿಗೆಯಲ್ಲಿ ಅಡಿಕೆ, ರೊಕ್ಕ, ರೂಪಾಯಿ, ಸಣ್ಣ ಸಣ್ಣ ಆಭರಣಗಳು ಇರುವದೂ ಇವೇ ಮೊದಲಾದವುಗಳು ಈ ಮಾತಿಗೆ ಸಾಕ್ಷಿ! ಲಿಂಗಪೂಜೆಯಿಲ್ಲದೆ ಸಿಕ್ಕ ಸಿಕ್ಕ ಪದಾರ್ಥಗಳನ್ನು ಸಿಕ್ಕಸಿಕ್ಕಲ್ಲಿ ರೀತಿಗೆಟ್ಟು ತಿನ್ನುತ್ತಿರುವದೇ ಸಾಕ್ಷಿ! ಲಿಂಗಧಾರಿಯಾದ ಪ್ರತಿಯೊಬ್ಬ ಭಕ್ತನು ಪ್ರತಿಶಿವನೆಂದು ಕಾಣುವ ಉಜ್ವಲ ಭಾವವು ಹೋಗಿ ಹೀನವಾದ ಕಾಯಕದ ಮೂಲಕವಾಗಲಿ, ಬಡತನದ ಮೂಲಕವಾಗಲಿ, ವ್ಯವಹಾರ ಕುಶಲತೆಯಿಂದ ಲೌಕಿಕ ತಾರತಮ್ಯ ಕೈಕೊಳ್ಳಪಟ್ಟ ಮೂಲಿಗೆ ಬಿದ್ದವನಾದ ಮೂಲಕವಾಗಲಿ ಅವನನ್ನು ಕೀಳನೆಂದು ಕಂಡ ಅವನ ಕೂಡ ದ್ವೈತಭಾವದಿಂದ ವ್ಯವಹಾರಮಾಡುತ್ತಿರುವದೇ ಸಾಕ್ಷಿ! ಕಾಯಕಗಳೊಳಗಿನ ಪ್ರಾಮಾಣಿಕತನವು ತಪ್ಪಿ ಹಲಕೀ ಸರಕುಗಳು ಹೆಚ್ಚು ಬೆಲೆಬಾಳುವ ಹಾಗೆ ಅವುಗಳನ್ನು ತಯಾರಿಸಹತ್ತಿರುವದೇ ಸಾಕ್ಷಿ! ಗಾಂಜಾ, ಅಫು, ಸಿಂದಿ, ಶೆರಿ ಮುಂತಾದ ಅಪೇಯಪಾನಗಳ ಅಂಗಡಿಗಳನ್ನು ಗುತ್ತಿಗೆ ಹಿಡಿದು ಮಾರಹತ್ತಿರುವದೇ ಸಾಕ್ಷಿ! ಶಿವ ಹಾಗು ಶಿವಭಕ್ತ ನಿಂದಕರ ತಂಡದಿಂದ ದೂರಿರುವದೊತಟ್ಟಗಿರಲಿ, ಶ್ರೀಮದ್ಬಸವ ಚನ್ನಬಸವಾಲ್ಲಮರ ನಿಂದೆಗೆ ಸಮಾಜದಲ್ಲಿಯೇ ಪ್ರಾಮುಖ್ಯವಾಗಿ ಗುರುವರ್ಗದಲ್ಲಿಯೇ ಆಸ್ಪದವಿರುವದೇ ಸಾಕ್ಷಿ! ಕೇಳೀ ಕೇಳಿ ಕೆಲವರು ನಮಗೇತಕ್ಕೆಬೇಕೆಂದು ತಟಸ್ಥರಾಗಿದ್ದುದೇ ಸಾಕ್ಷಿ! ಭಕ್ತರಸೇವೆ ಮಾಡುವದೊತ್ತಟ್ಟಗಿರಲಿ, ಗುರುಲಿಂಗಜಂಗಮನಿಂದಕರಾಗಿ ಭಕ್ತರಿಗೊಡೆಯಾದ ಗುರುವರ್ಗವು ಅಂಜದೆ, ಅಳುಕದೆ, ಸೇವೆಗೊಳ್ಳುತ್ತಿರುವದೇ ಸಾಕ್ಷಿ!

## (೬) ಷಟ್‌ಸ್ಥಲದ ದೃಢವು ಎಲ್ಲಿಯೂ ತೋರದಂತಾಗಿದೆ.

ಲಿಂಗಸಾಮರಸ್ಯಯೋಗದಲ್ಲಿ ಲಿಂಗವಾಗಿ ಲಿಂಗದಲ್ಲಿ ಬೆರೆಯುವವರೆಗೆ ಅಂಗರು ತಮ್ಮ ತಮ್ಮ ಅಧಿಕಾರ ತಾರತಮ್ಯದಲ್ಲಿ ಷಟ್‌ಸ್ಥಲವನಾಚರಿಸುವದಿರುವದು. ಆದರೆ ಸ್ಥಾನವಿಶೇಷದಲ್ಲಿ ಜನ್ಮವೆತ್ತಿದ ಮಾತ್ರದಿಂದ ಜನ್ಮತಃ ಆ ಸ್ಥಾನದ ಶುದ್ಧಾಂಗವು ತನಗಿರುವದೆಂದು ಭಾವಿಸುವದು ತಪ್ಪು. ಈ ತಪ್ಪುಭಾವನೆಯಿಂದ ವಂಶಪರಂಪರವಾಗಿ ಆಯಾ ಅಂಗರಿಗೆ ಅಧಿಕಾರವಿರಲಿ ಇಲ್ಲದಿರಲಿ ಸಮಾಜ ಸೂತ್ರಗಳನ್ನು ಯೋಚಿಸತ್ತ ಬಂದುದರಿಂದ ಅನಧಿಕಾರಿಗಳ ಕೈಯಲ್ಲಿ ಸೂತ್ರಾಧಿಕಾರವು ಬಿದ್ದು, ಸಮಾಜವು ಈ ದುರವಸ್ಥೆಗೆ ಬಂದಿರುವದು. ಆದರಿಂದ ಷಟ್‌ಸ್ಥಲದ ದೃಢವು ತಪ್ಪಿರುವದು ಈ ನೀತಿಗೆ ಭಕ್ತಮಾಹೇಶಸ್ಥಲಗಳು ಜಾತಿಸಿದ್ಧ ಜನ್ಮಸಿದ್ಧವೆಂದು ಸಾಧಿಸುತ್ತ ಬಂದಿರುವದೂ ಸಾಧಿಸುತ್ತಿರುವದೂ ಸಾಕ್ಷಿಯಾಗಿವೆ. ಪಟ್ಟಚರಾಧಿಪರಲ್ಲಿಯೂ ವಿರಕ್ತರಲ್ಲಿಯೂ "ನಾ ಗುರು ನೀಗುರು; ನಾ ಹೆಚ್ಚು ನೀ ಹೆಚ್ಚು" ಎಂಬು ಕಲಹವೆದ್ದಿರುವದೇ ಸಾಕ್ಷಿ! ಪ್ರಸಾದಿಕರಲ್ಲಿಯೂ ಕೂಡ ಎಂಜಲಭಾವವು ಅಳಿಯುವದೊತ್ತಟ್ಟಿರಲಿ ಜಾತಿಭಾವವೂ ಕೂಡ ನಾಶವಾಗದಿರುವದೇ ಸಾಕ್ಷಿ! ಪ್ರತ್ಯಕ್ಷ ಕ್ರಿಯಾರೂಪದಿಂದ ತೋರಿಸುವದಾದ ಅದ್ವೈತವು ಲೋಪವಾಗಿ ಸಾಸ್ತ್ರಗಳ ಮುಖದಿಂದ ಹೊಂದಿದ ಮಾತಿನ ಜಾಳದಿಂದ ವಾಗದ್ವೈತದಲ್ಲಿಯೇ ಲಿಂಗತತ್ವಗಳನ್ನು ಪಲ್ಲಟಮಾಡಿ ಮೆರೆಸುತ್ತಿರುವದೇ ಸಾಕ್ಷಿ! ವಿರಕ್ತರು ಮೊದಲುಗೊಂಡು ಭಕ್ತರವರೆಗೆ ಎಲ್ಲರಲ್ಲಿಯೂ ಅಂದಿಗೆ ಬೇಕು; ಇಂದಿಗೆ ಬೇಕು; ಹೆಂಡರಿಗೆ ಬೇಕು; ಮಕ್ಕಳಿಗೆಬೇಕು- ಮೊಮ್ಮಕ್ಕಳಿಗೆ ಬೇಕು; ಮರಿಮಕ್ಕಳಿಗೆ ಬೇಕು; ಇತ್ಯಾದಿ ಬಹುದೂರದ ಆಶೆಯು ಬೆಳೆದು, ಮನೆಮಾಡಿಕೊಂಡು ಎಲ್ಲರೂ ಗುರುಲಿಂಗಜಂಗಮದ ವಂಚಕರಾಗಿರುವದೇ ಸಾಕ್ಷಿ! ಪಾಪದ ಬೀತಿಯು ಎಷ್ಟೂ ಇಲ್ಲದೆ, ಪರಧನ ಪರಸ್ತ್ರೀಯರಿಗೆ ಮನವೆಳಿಸಿ ಸಾಧಿಸಲು ಹರಿದಾಡುವವರು ಹೆಚ್ಚಾಗಿರುವದೇ ಸಾಕ್ಷಿ! ಹಿಂದೆ ಒಂದನೆಯ ಎರಡನೆಯ ಮೂರನೆಯ ತತ್ವಗಳ ಅನುವರ್ತನದಿಂದ ಸಮಾಜವು ದೂರಾದಬಗ್ಗೆ ಕೊಟ್ಟ ಸಾಕ್ಷಿಗಳೆಲ್ಲ ಇಲ್ಲಿಯೂ ಬರುವವು.

## (೭) ಪಂಚಸೂತಕಗಳು ಮನೆಮಾಡಿಕೊಂಡಿವೆ.

ಅಷ್ಟಾವರಣನಿರತರಾದ ಬೇರೆ ಬೇರೆ ಕಾಯಕದವರು ಹೆಣ್ಣುಗಂಡು ಕೊಡತಕ್ಕೊಳ್ಳಂಬುವದೊತ್ತಟ್ಟಿಗಿರಲಿ, ಊಟುಪಚಾರಗಳೂ ಕಟ್ಟಾಗಿ "ನನ್ನ ಜಾತಿ ಹೆಚ್ಚು" "ನನ್ನ ಕುಲಹೆಚ್ಚು" ಎಂದು ಬಡಿದಾಡುತ್ತಿರುವದೇ ಸಾಕ್ಷಿ! ಹಡೆದ ಮನೆಯವರನ್ನು ಮುಟ್ಟಿದರೆ ಮೈಲಿಗೆಯಾದೆವೆಂದು ಮೈತೊಳಕೊಳ್ಳುತ್ತಿರುವದೇ ಸಾಕ್ಷಿ! ಪ್ರತ್ಯಕ್ಷ ಹೆಣವನ್ನೊತ್ತಟ್ಟಿಗಿರಲಿ, ಹೆಣಮುಟ್ಟಿದವರನ್ನು ಮುಟ್ಟಿದರೆ ಮೈಲಿಗೆಯಾದ್ದೆವೆಂದು ಮೈತೊಳಕೊಳ್ಳುತ್ತಿರುವದೇ ಸಾಕ್ಷಿ! ಸ್ಮಶಾನಯಾತ್ರೆಯನ್ನು

ತೀರಿಸಿಕೊಂಡು ತಿರುಗಿ ಬರುವಾಗ ದೊಡ್ಡಮಳೆ ಹೊಡೆದು, ತೊಯ್ಸಿಕೊಂಡು ಬಸಕೊಂಡು ಬಂದರೂ, ಮನೆಗೆ ಬಂದು ಮನೆಯೊಳಗಿನ ನೀರಿನಿಂದ ಸ್ನಾನಮಾಡಿದ ಹೊರತು ವೈಲಿಗೆಯಭಾವವು ಅಳಿಯದಿರುವದೇ ಸಾಕ್ಷಿ! ಹೆಣವನ್ನು ಒಯ್ದ ಬಳಿಕ ವೈಲಿಗೆ ಮನೆಯೆಂದು ಸಾರಿಸಿ ಮಡಿಮಾಡಿಕೊಳ್ಳುತ್ತಿರುವದೇ ಸಾಕ್ಷಿ! ಈಗಿನ ಲಿಂಗಾಯತರು ಕೊರಳಲ್ಲಿ ಲಿಂಗವಧರಿಸಿ, ಕೆಲವೊಂದು ಧರ್ಮದವರಷ್ಟು ಕೂಡ ಶುದ್ಧಭಾವವು ಇಲ್ಲದಿರುವದನ್ನು ಕಂಡು ನಾಚಬೇಕಾಗಿರುವದು. ಪಾದೋದಕ ಪ್ರಸಾದಗಳಲ್ಲಿಯೂ ಕೂಡ ಎಂಜಲದೋಷವು ಕುಂದಿದಂತೆ ತೋರುವದಿಲ್ಲ. ಈಮಾತಿಗೆ ಗುರುವು ತನಗೆ ಮಿಕ್ಕದುದನು ಭಕ್ತನ ಎಡೆಗೆ ಅಂತರಲೆ ನೀಡುತ್ತಿರುವದೇ ಸಾಕ್ಷಿ! ಭಕ್ತಗೆ ಮಿಕ್ಕುದುದನು ಗುರುವು ನೀಡಿಸಿಕೊಳ್ಳದಿರುವದೇ ಸಾಕ್ಷಿ! ಕರಣಪ್ರಸಾದವನ್ನು ತೆಗೆದುಕೊಳ್ಳುವಾಗ ಪರಿಣಾಮೋದಕಕಾಗಿ ಬಟ್ಟಲವೆತ್ತಿ ಕುಡಿಯಗೊಡದಿರುವದೇ ಸಾಕ್ಷಿ! ಗುರುದೀಕ್ಷೆಯಿಂದ ಮಾಂಸಪಿಂಡವನಳಿದು ಮಂತ್ರಪಿಂಡವಾದುದನು ಮರೆತು ಸೃಷ್ಟಿಯ ಸಹಜವ್ಯಾಪಾರದಲ್ಲಿ ಜರಗುತ್ತಿರುವದಾದ ಮುಟ್ಟಿಗೆ ( ರಜಸ್ಸು ) ಹೊಲೆಯೆಂದು ತಿಳಿದು ಮೂರುದಿವಸ ಹೊರಗೆ ಕೂಡ್ರಿಸಬೇಕೆಂದು ಹವಣಿಸಹತ್ತಿರುವದೇ ಸಾಕ್ಷಿ.

(ಲ) ಗುರುತ್ವವು ಇದಲ್ಲ ನರರನ್ನು ಗುರುಗಳೆಂದು ನಂಬಿ ಬಾಹ್ಯ ಅಷ್ಟಾವರಣಗಳನ್ನು ಆಚರಿಸುತ್ತಿರುವದರಿಂದ ಲಿಂಗದ ನೆಲೆಗಾಣದೆ ಎಷ್ಟುಕಾಲನಡೆದುಕೊಂಡರೂ, ಅಂತರಂಗದಲ್ಲಿ ಲಿಂಗಸಾಮರಸ್ಯಕ್ರಿಯೆಯು ಇಲ್ಲದೆ ಹೋಗಿ, ಬಹಿರಂಗದಲ್ಲಿ ಬಳಿಸುತ್ತಿರುವ ಆವರಣಗಳಲ್ಲಿ ಏನೊಂದು ಮಹತ್ವವು ತೋರದಾಗಿರುವದು. ಕಾರಣ ಅವು ಕೇವಲ ಜಡವಸ್ತುಗಳಾಗಿಯೇ ಬಳಿಸಲ್ಪಡುತ್ತಿರುವವು. ಆದುದರಿಂದ ಅಂತರಂಗದಲ್ಲಿ ಅವುಗಳ ಮೇಲಿನ ಶ್ರದ್ಧೆಯು ಉಳಿದಿರುವದಿಲ್ಲ. ಬಹಿರಂಗದಲ್ಲಿ ಕುಲಾಭಿಮಾನಕ್ಕಾಗಿ ಮಾತ್ರ ಆಚರಿಸುತ್ತಿರುವರು ಗುರುವರ್ಗದವರೆಂದು ಟುಮಿಕೀ ಹೊಡೆದುಕೊಳ್ಳುವವರಲ್ಲಿ ನಿರಂಜನಜಂಗಮದ ಸೂತ್ರವು ತಪ್ಪಿದ ಬಳಿಕ ಇವರಲ್ಲಿ ಲಿಂಗಸಂಬಂಧವೆಂತು? ಲಿಂಗಸಂಬಂಧವು ಹರಿದಬಳಿಕ ಗುರುತ್ವವಿಲ್ಲ. ಗುರುಲಿಂಗಜಂಗಮವಿಲ್ಲದೆ ವಿಭೂತಿರುದ್ರಾಕ್ಷಿಮಂತ್ರಗಳು ಸಿದ್ಧಿಸುವವೆಂತು? ಪಾದೋದಕಪ್ರಸಾದಗಳಂತೂ ಜನಿಸುವದೇ ಇಲ್ಲ. ಅಂದಬಳಿಕ ಇವರೆಲ್ಲರೂ ಕೂಡಿಮಾಡುವ ಆಟವು ಲಿಂಗಸಾಮರಸ್ಯವಾಗದೆ ಗೊಂಬೆಯ ಆಟವಾಗಿರುವದು. ಅಥವಾ ಯೋಗ್ಯತೆಯೂ, ತಿಳುವಳಿಕೆಯೂ ಎಷ್ಟೂ ಇಲ್ಲದೆ ಚಿಕ್ಕ ಚಿಕ್ಕ ಮಕ್ಕಳು ಗಂಡಹೆಂಡರಾಗಿ ಆಡುವ ಸಂಸಾರದ ಆಟವಾಗಿರುವದು. ಆ ಸಂಸಾರದಿಂದ ಆ ಮಕ್ಕಳಿಗೆ ಸುಖವಿಲ್ಲ, ಮಕ್ಕಳಫಲವಿಲ್ಲ. ಹಾಗೆಯೇ ಈಗಿನ ಲಿಂಗಾಯತ ಸಮಾಜವು ಪ್ರಯೋಗಿಸುತ್ತಿರುವ ಅಷ್ಟಾವರಣದ ಆಚಾರಗಳು ಆಗಿರುವವು. ಕಾರಣ ಗುರುಜಂಗಮರೊಳಗಿನ ನರಭಾವವೂ, ಲಿಂಗದೊಳಗಿನ ಶಿಲಾಭಾವವೂ, ವಿಭೂತಿಯೊಳಗಿನ ಬೂದಿಯಭಾವವೂ, ರುದ್ರಾಕ್ಷಿಯೊಳಗಿನ

ಬೀಜಭಾವವೂ, ಮಂತ್ರದೊಳಗಿನ ಜಡಭಾವವೂ, ಪಾದೋದಕದೊಳಗಿನ ಜಲ ಭಾವವೂ, ಪ್ರಸಾದದೊಳಗಿನ ಅನ್ನಭಾವವೂ ಹಿಂಗದೆ, ಅವು ಮೂಲವಸ್ತುರೂಪ ದಲ್ಲಿಯೇ (ಇದ್ದಕ್ಕಿದ್ದಹಾಗೆ) ಪರಿಣಮಿಸುತ್ತಿರುವವು. ಆ ವಸ್ತುಗಳ ಶುದ್ಧತ್ವವ ನ್ನು ಈ ವಿಕಾರಿಗಳಾದ ನರರು ಕಾಯ್ದುಕೊಳ್ಳಲು ಇಲ್ಲದ ಶೀಲವನ್ನು ಕಲ್ಪಿಸಿ ಕೊಂಡು ಆಚರಿಸುತ್ತ ಆಡಂಬರದ ಒಣದೊಡ್ಡಿಸ್ತನವನ್ನು ಮೆರೆಯಿಸುತ್ತಿರುವರು.

ವಿರಕ್ತರಿಗೆ ಇನ್ನೂ ತಮ್ಮ ಸಮಯಭೇದವನ್ನು ಮುರಕೊಳ್ಳುವದಾಗದಿದ್ದು ದೇ ಸಾಕ್ಷಿ! ಪಟ್ಟಚರಾಧಿಪರಿಗೆ ದೇವರಮನೆಯೊಳಗಿನ ಸಾಮರಸ್ಯಯೋಗದ ಸಮಯಾಚಾರವನ್ನೂ ಒಳಹೊರಗೆಂಬ ಭೇದವಿಲ್ಲದೆ, ಇಡೀ ಸಮಾಜದ ತುಂಬೆ ಲ್ಲ ಪ್ರಚ ರದಲ್ಲಿ ತರುವದಾಗದೆ ಇದ್ದುದೇ ಸಾಕ್ಷಿ! ಅದನ್ನು ತರುವದೊತ್ತಟ್ಟಿಗಿರಲಿ ತಮ್ಮಲ್ಲಿ ಐಕ್ಯವಿಲ್ಲೆಂದು ಹೇಳುವದಕ್ಕೆ ಅಲ್ಲಲ್ಲಿ ಅವರು ಸಭೆಗೂಡಿಸಿ, ಗುರುವರ್ಗ ದ ಐಕ್ಯತೆಯ ಠರಾವುಗಳನ್ನು ಪಾಸುಮಾಡಿಕೊಳ್ಳುತ್ತಿರುವದೇ ಸಾಕ್ಷಿ! ಯೋನಿ ಯಕೂಟದ ಸುಖವು ಲಿಂಗಾನುಸಂಧಾನದಲ್ಲಿಲ್ಲೆಂದು ಸ್ಥಲಗೂಡಿದ ವಿರಕ್ತರೂ ಕೂಡ, ವ್ಯಭಿಚಾರ ಪ್ರವರ್ತಕರಾದುದೇ ಸಾಕ್ಷಿ! ಅಂತರಂಗದ್ದ ನಿಜಸೂತ್ರವಿಡಿದು ಸಮಾಜದಲ್ಲಿ ನಿಜೈಕ್ಯತೆಯನ್ನು ಸಾಧಿಸುವದೊತ್ತಟ್ಟಿಗಿರಲಿ, ಬಹಿರಂಗದಲ್ಲಿ ಶಿಲಾ ಶಾಸನದಂತಿದ್ದ ಸಮಾಜರಚನೆಯ ಸೂತ್ರವಿಡಿದು ಧರ್ಮವನ್ನಾದರೂ ಕಾಯ್ದು ಕೊಳ್ಳುವದಾಗಲಿಲ್ಲೆಂದು ಸಿದ್ಧಿಸಲಿಕ್ಕೆ ಆಳುವ ಪರಕೀಯ ಸರಕಾರವೇ ಸಾಕ್ಷಿ!

೯ ವೀರಶೈವರಾದರೂ ಇಷ್ಟಲಿಂಗದ ಆಚರಣೆಯಿಂದ ಇಷ್ಟವ ಸಾಧಿಸಿ, ಶ್ರೀ ಸದ್ಗುರುವಿನ ಕರುಣವ ಪಡೆದು, ನಿಜಸೂತ್ರವ ಹೊಂದಿ ಅದಕ್ಕೆ ಒಳಪಟ್ಟ ವರಾಗಿ ಶ್ರೀಗುರು ಸಶೀಲವನಾಚರಿಸುವದೇ ಅವರ ಬಾಳುವೆಯು. ಇದೇ ಕ ಲ್ಯಾಣವು. ಇದು ನಿಜಸೂತ್ರಕ್ಕೆ ಒಳಪಟ್ಟ ಹೊರತು, ಆರಿಗೂ ಸಾಧ್ಯವಲ್ಲವು. ನಿಜಸೂತ್ರಕ್ಕೆಸಂಬಂಧಿಸಿಕೊಳ್ಳುವದೇ ಕಲ್ಯಾಣಕಟ್ಟುವದಾಗಿರುವದು. ಇದೇ ನಾ ಮಶೇಷವಾಗಿರುವದು. ಈ ಮಾತಿಗೆ ಗುರುವರ್ಗದವರು, ವಿರಕ್ತರು ಜಗದ್ಗುರು ಗಳಲ್ಲೆಂದು ಸಾರಿದುದೇಸಾಕ್ಷಿ! ಶ್ರೀಮದ್ಬಸವನಿಂದಕ ಪ್ರಕರಣದಲ್ಲಿ ಅಲ್ಲಮಸಾಂಪ್ರ ದಾಯಕರೆಂದು ಹೇಳಿಕೊಳ್ಳುವ ವಿರಕ್ತರು ಆದ ಠರಾವನ್ನು ಕೇಳಿ ಸುಮ್ಮನೆ ಕೂ ಡುದಕೆ, ನಾವು ಶ್ರೀಮದ್ಬಸವ ಚನ್ನಬಸವಾಲ್ಲಮರ ಸಂತತಿಯವರಲ್ಲೆಂದು ಒಪ್ಪಿ ಕೊಂಡಂತಾಗಿರುವದೇ! ಸಾಕ್ಷಿ ಯಾತಕ್ಕೂ ಹತ್ತದ ಗುರುವರ್ಗದವರು ನಾವೇ ಜಗದ್ಗುರುಗಳೆಂದು ಸಾರಿ ಆ ಶ್ರೀಮದಲ್ಲಮಸೂತ್ರಕ್ಕೆ ಹೊರತಾದುದೇ ಸಾಕ್ಷಿ. ಶ್ರೀಮದ್ಬಸವಾಲ್ಲಮರ ಪಕ್ಷದವರೆಂದು ವಿರಕ್ತರ ಪಕ್ಷದವರು ಅಂದುಕೊಂಡರೂ, ಇನ್ನೂವರೆಗೆ ಶರಣಮಾರ್ಗವನ್ನು ಪ್ರಚಾರದಲ್ಲಿ ತರುವದಾಗದೆ ತಣ್ಣಗೆ ಕುಳಿತು, ಪ್ರತ್ಯಕ್ಷನಡೆಯಿಂದ ಹೋಗಲಾಡಿಸುವದಾದ, ಈ ಹಬ್ಬಿದ ನಿಂದೆಯನ್ನು ಉಳಿಯ ಗೊಟ್ಟುದುದಕೆ, ಶ್ರೀಮದ್ಬಸವಾದಿ ಪ್ರಮಥರ ಮಾರ್ಗನಿಂದಕರೆಂದು ವ್ಯಕ್ತಪಡಿ

ಸುತ್ತಿರುವದೇ ಸಾಕ್ಷಿ. ಅಕಿತೂ ಗುರುವರ್ಗದವರಿಗೂ, ಅವರ ಪಕ್ಷದವರೂ ಬಾಯಿಂದ ಬೈದು (ವಾಚಾನಿಂದಕರಾಗಿ) ನಡೆಯ ನಿಂದಕರೂ, ವಿರಕ್ತರೂ, ವಿರಕ್ತಪಕ್ಷದವರೂ ಬಾಯಿಂದ ಕೊಂಡಾಡಿದವರಂತೆ ನಟಿಸಿ ಮುಖಸ್ತುತಿಮಾಡಿ ನಡೆಯುನಿಂದಕರೂ ಆಗಿರುವರು. ಈ ರೀತಿ ಇಡೀ ಗುರುವರ್ಗವು ಶರಣಮಾರ್ಗ ನಡೆಯ ನಿಂದಕರಾಗಿ ಬಸವಸಾಂಪ್ರದಾಯಕರಲ್ಲವೆಂದು ತಮ್ಮ ನಡೆಯಿಂದ ವ್ಯಕ್ತಪಡಿಸುತ್ತಿರುವದೇ ಸಾಕ್ಷಿ.

ಪಂಚಸೂತಕಗಳು ನಾಶವಾಗದೆ, ಸಮಾಜದಲ್ಲಿ ಪಂಗಡಗಳೂ, ಜಾತಿಗಳೂ, ಹೆಚ್ಚಾಗಿ, ಎಲ್ಲರೂ ಹಣ್ಣುಮುದ್ದೆಯಹಾಗೆ ಒಂದೆಯಾಗಿರುವದರ ಬದಲು, ತಲೆಗೊಂದೊಂದು ಭೇದವಾಗಿ ಮಳಲಿನ ರಾಶಿಯಾಗಿರುವದೇ ಸಾಕ್ಷಿ. ಪಂಚಾಚಾರಗಳು ನಷ್ಟವಾಗಿ ಬರೇ ಕೂಳು ನೀರಿನ ಶೀಲ ಬಳಿಕೆಯು ಹೆಚ್ಚಾಗಿರುವದೇ ಸಾಕ್ಷಿ. ಅಷ್ಟಾವರಣಗಳು ಹೇಳ ಹೆಸರಿಲ್ಲವಾಗಿ ಎಲ್ಲರೂ ಲಿಂಗಭವಿಗಳಾಗಿರುವದೇ ಸಾಕ್ಷಿ. ಗುರುಲಿಂಗಜಂಗಮದ ಅರಿವು ತಪ್ಪಿ ಕಾಯಕಗಳಿಲ್ಲ ಕಸಬುಗಳಾಗಿರುವದೇ ಸಾಕ್ಷಿ. ಹೆಣ್ಣು ಹೊನ್ನು ಮಣ್ಣುಗಳೇ ಗುರುಲಿಂಗಜಂಗಮವಾಗಿ ಪಂಚಮಹಾಪಾತಕಗಳು ಮನೆಮಾಡಿಕೊಂಡಿರುವದೇ ಸಾಕ್ಷಿ. ಅನಾಚಾರದಿಂದ ಅನೇಕ ಕಷ್ಟಗಳು ಸಂಭವಿಸಿ, ಆ ಕಷ್ಟಪರಿಹಾರಕ್ಕಾಗಿ ಅನಂತದೇವತೆಗಳ ಉಪಾಸನೆಯು ಒಳಸೇರಿದುದೇ ಸಾಕ್ಷಿ. ಭಕ್ತಿಯು ಕೆಟ್ಟು ಷಟುಸ್ಥಳದ ದೃಢವು ತಪ್ಪಿ ಉದ್ದಾಮತನವು ಹೆಚ್ಚಾಗಿರುವದೇ ಸಾಕ್ಷಿ. ನಂಬುಗೆಪ್ರಾಮಾಣಿಕತೆಗಳು ಹಾಳಾಗಿ ಗಂಟುಗಳ್ಳತನ, ಮನೆಮುರಕತನ, ಮರೆಮೋಸತನಗಳು ಹೆಚ್ಚಾದುದೇ ಸಾಕ್ಷಿ. ಸ್ವಾರ್ಥವು ಹೆಚ್ಚಾಗಿ "ಆದಿ ಪೋಟೋಬಾ ನಂತರ ವಿಠೋಬಾ" ಎನ್ನುವ ತತ್ವವು ಬಳಿಕೆಯಲ್ಲಿ ಬಂದುದೇ ಸಾಕ್ಷಿ. ಹೆಂಡರುಮಕ್ಕಳು ಇಲ್ಲದೆ ಹುಟ್ಟಾದಿಕ್ಕೇಡಿಯಾದವರಂತಿದ್ದ ವಿರಕ್ತರೂ ಕೂಡ ಹಸಿದು ಬಂದ ಅಥಿತಿಗೆ ಇಳಕೊಳ್ಳಲು ಅನುವು ಸಹ ಕೊಡಲಾರದವರಾಗಿರುವದೇ ಸಾಕ್ಷಿ. ಪಟ್ಟಚರಾಧಿಪರಂತೂ ಹೇಳಿಕೇಳಿ ಸಂಸ್ಥಾನಿಕರು. ಅವರ ಲಕ್ಷವೆಲ್ಲ ವಿಲಾಸವಿಭ್ರಮದ ಮೇಲೆ. ತಮ್ಮ ವೈಭವದೊಳಗೆ ಇಂತಹ ಅಥಿತಿಗಳ ದಾಕ್ಷಿಣ್ಯವೆಲ್ಲಿ? ಅವರು ಬಂದುದು ದಾದುಹತ್ತದೆ ಹೋಗುತ್ತಿರುವದೇ ಸಾಕ್ಷಿ. ಸಹಜದಾನಧರ್ಮಗಳು ಕಲ್ಯಾಣದಲ್ಲಿಯೇ ಉಳಿದು, ಒತ್ತಾಯದ ಹಾಗು ಮುರವತ್ತಿದ ದಾನಧರ್ಮಗಳಾಗಿರುವದೇ ಸಾಕ್ಷಿ.

೧೦ ಆತ್ಮದೃಷ್ಟಿಯಿಂದ ಸ್ತ್ರೀಯರಿಗೆ ಪುರುಷರಿಗಿಂತ ಹೆಚ್ಚು ಅಧಿಕಾರವು ಲಿಂಗಾನುಸಂಧಾನದ ವಿಷಯದಲ್ಲಿ ಇರುವದೆಂದರೂ ಸಲ್ಲುವದು. ಏಕಂದರೆ ಅಂತಃಕರಣದವ್ಯಾಪಾರದಲ್ಲಿ ಮುಂದರಿದವರು; ಮತ್ತು ಲಿಂಗಾಂಗಿಯ ಧರ್ಮದ ಯಥಾರ್ಥವಾದ ತತ್ವಾನುವರ್ತನವೆಲ್ಲ ಪರಿಪೂರ್ಣವಾದ ಅಂತಃಕರಣಗಳ ವ್ಯಾಪಾರದ ತಳಹದಿಯ ಮೇಲೆ ಇರುವದು. ಇದನ್ನು ಕಂಡುಹಿಡಿದು ನಮ್ಮ

ರು ಧರ್ಮದಲ್ಲಿ ಸ್ತ್ರೀಯರಿಗೆ ಸಮಾನ ಅಧಿಕಾರವನ್ನು ಕೊಟ್ಟಿರುವದೂ, ಅದನ್ನು ಸಮಾಜವು ನಡಿಸುತ್ತಬಂದಿರುವದೂ ಸ್ತುತ್ಯವಾದಾಗ್ಯೂ, ಬಹಿರ್ಮುಖವಾದ ಜನತೆಗೆ ಈ ಸಂಸಾರದ ಸುಖಕ್ಕೆ ಸ್ತ್ರೀಯರೇ ದೊಡ್ಡಸಾಧನವಾಗಿರುವದರಿಂದ, ಸ್ತ್ರೀಯರೆಲ್ಲರೂ ಇಡತೊಡುವ ವಿಲಾಸ ವಿಭ್ರಮಕೆ ಹೆಚ್ಚಾಗಿ ಬಲಿಬಿದ್ದಿರುವದು. ಆದರೂ ಸಮಾಜದಲ್ಲಿ ತುಸುಧರ್ಮದಂಶವು ಸ್ತ್ರೀಯರಿಂದಲೇ ಉಳಿಯುವ ಸಂಭವವುಂಟು. ಏಕಂದರೆ ಸ್ವಾಭಾವಿಕವಾಗಿ ಸ್ತ್ರೀಯರು ಪುರುಷರಂತೆ ಸ್ವಾತಂತ್ರತೆಯಿಂದ ಏಕಾಕಿಯಾಗಿಕಂಡಲ್ಲಿ ತಿರುಗಾಡಲಿಕ್ಕೆ ಬಾರದ ಹಾಗೆ ಶರೀರರಚನೆಯುಳ್ಳವರು; ಮತ್ತು ಈ ರಚನೆಯು ಪುರುಷರ ಹಾಗೆ ವ್ಯಭಿಚಾರವನ್ನು ಅಟ್ಟಿಸಿಕೊಳ್ಳಲಿಕ್ಕೆ ಬಾರದಷ್ಟು. ಅಲ್ಲದೆ ಸ್ತ್ರೀಯರಲ್ಲಿ ಸತೀತ್ವವನ್ನುಕಾಯ್ದುಕೊಳ್ಳಲಿಕ್ಕೆ ಪರಮಾತ್ಮನು ನಾಚಿಕೆಯ ಕೋಟೆಯನ್ನು ಕಟ್ಟಿರುವನು. ಇವೆಲ್ಲ ಸ್ವಾಭಾವಿಕಕಾರಣಗಳನ್ನು ಮೀರಿ ನಲೆಯುವ ಸಾಹಸವು, ವಿಕಾರದಿಂದ ಮತ್ತರಾದಹೊರತು ಬರಲಾರದು. ಇವೆಲ್ಲವುಗಳನ್ನು ಮೀರಿನಿಂತ ನಿರ್ಲಜ್ಜೆಯಾದ ಸ್ತ್ರೀಯು ಲೋಕವನ್ನೇ ನುಂಗಲು ಹೇಸಳು; ಹೆದರಳು. ವ್ಯಭಿಚಾರಕ್ಕೊಳಪಟ್ಟ ಪುರುಷರೆಲ್ಲರೂ ಇಂಥಪ್ಪ ಸ್ತ್ರೀಯರ ಮೋಹಕ್ಕೆಬಿದ್ದು ರೀತಿಗೆಟ್ಟಿರುವರು. ಒಟ್ಟಿನಮೇಲೆ ರೀತಿಗೆಟ್ಟ ಪುರುಷರ ಪ್ರಮಾಣವು ಸ್ತ್ರೀಯರಿಗಿಂತ ದೊಡ್ಡದು. ಹೊರಗಿನಿಂದ ತರಬರುವ ಜವಾಬದಾರಿಯುಳ್ಳ ಪುರುಷರ ಹರಿದಾಟದಷ್ಟು ಹರಿಬಾಟವು ಒಳಗಿನ ಜವಾಬದಾರಿಯನ್ನು ಹೊತ್ತ ಸ್ತ್ರೀಯರಿಗಿರದ್ದರಿಂದ, ಕೆಟ್ಟರೆ ಬಹುಶಃ ವ್ಯಭಿಚಾರದಿಂದ ಮಾತ್ರ ಕೆಡಬೇಕಲ್ಲದೆ, ಉಳಿದ ವಿಕಾರಗಳಿಂದ ಕೆಡುವದು ಕಡಿಮೆಯಾಗಿರುವಂತೆ ನಮ್ಮಜನತೆಯಲ್ಲಿ ವ್ಯವಸ್ಥೆಯು ಮಾಡಲ್ಪಟ್ಟಿರುವದು; ಆದರೆ ಈಗಿನ ಪರಿಸ್ಥಿತಿಯು ನಮ್ಮ ಒಳಗಿನ ಸ್ತ್ರೀಯರನ್ನು ನಾಚಿಕೆಯ ಮುಸುಕಿನಿಂದ ಹೊರತರಹತ್ತಿದೆ. ಸ್ತ್ರೀಯರಲ್ಲಿ ಸ್ವಾಭಾವಿಕವಾಗಿ ಹೆಚ್ಚುಪ್ರಮಾಣದಿಂದಿರುತ್ತಿದ್ದ ಕಾಮವಿಕಾರಕ್ಕೆ ವಿಲಾಸವಿಭ್ರಮವೂ, ನಾಚಿಕೆಯು ಕಣ್ಣೀಹರಿಯುತ್ತಿರುವ ಪರಿಸ್ಥಿತಿಯೂ ಜೊತೆಯಾದ ಬಳಿಕ ಕೇಳುವದೇನು ? ಧರ್ಮದೇವಿಯು ಕೈಯಲ್ಲಿ ಹಡ್ಡಲಿಗೆಯನ್ನು ಹಿಡಿಯಬೇಕಾಯಿತು. ಘೋಷಾ (ಬುರಿಕಿ) ಮುಂತಾದ ಎಷ್ಟು ಪ್ರತಿಬಂಧದ ಉಪಾಯಗಳಲ್ಲಿ ಕಾಯ್ದುಕೊಂಡರೂ, ಅಸಕೊಳ್ಳದೆ ಹೊರಬರಹತ್ತಿರುವದು. ಇದೆಲ್ಲ ಲಿಂಗಬಾಹ್ಯವಾದ ದೃಷ್ಟಿಯಮೂಲಕ ಉಂಟಾದ ಪರಿಣಾಮವು. ಈ ಮಾತಿಗೆ ಲಿಂಗದಲ್ಲಿಯೇ ನೆಟ್ಟದೃಷ್ಟಿಯುಳ್ಳವಳಾಗಿ, ಶರೀರದ ಮೇಲಿನ ಎಳ್ಳಷ್ಟೂ ಪರಿವೆಯಿಲ್ಲದೆ ಬತ್ತಲೆಯಾಗಿ ತಿರುಗಿ, ಸಹಜವಾಗಿ ಸತೀತ್ವವನ್ನು ಕಾಯ್ದುಕೊಂಡ, ಭುವನಸುಂದರಿಯಾದ, ನಮ್ಮಉಡುತಡಿಯ ಮಹಾದೇವಿಯಕ್ಕನ ಉದಾಹರಣೆಯು ಬಲವಾದ ಸಾಕ್ಷಿಯಾಗಿರುವದು. ಸಮಾಜದೊಳಗಿನ ಲಿಂಗಕಳೆಯು ಹೊರಟಿದ್ದು ಹೋಗಿರುವ ಈಗಿನ ಕಾಲದಲ್ಲಿ ಅಂತರ್ಮುಖತೆಯು ಯಾರಿಗೂ ಸಾಧ್ಯವಿಲ್ಲ ! ಈಮಾತಿಗೆ ಜಿತೇಂದ್ರಿಯತ್ವವನ್ನು ಕಾಯ್ದುಕೊಳ್ಳಲು ತ್ರಿಕರಣಪೂರ್ವಕವಾಗಿ ಪ್ರಯತ್ನ

ಸುತ್ತಿರುವ ಕೆಲವು ಬ್ರಹ್ಮಚಾರಿಗಳು ಸ್ತ್ರೀಯರು ಕಣ್ಣಿಗೆಬೀಳದ ಹಾಗೆ ಏಕಾಂತವನ್ನು ಸಾಧಿಸುತ್ತಿರುವವೇ ಸಾಕ್ಷಿ! ಇಂತಹ ಸ್ಥಿತಿಯಲ್ಲಿ ವಿಕಾರದಿಂದ ಮತ್ತರಾದ ಗುರುವರ್ಗದವರನ್ನು ಮನೆ ತೀರಿಸುವ ನೆವದಿಂದ ಒಳಗೆಬರಮಾಡಿಕೊಂಡು,ಅವರಲ್ಲಿ ಹುಟ್ಟಿದ ಕರಣವನ್ನು ಪಡಕೊಳ್ಳುವ ಆಡಂಬರಕ್ಕೆ ಬಿದ್ದು, ನಮ್ಮ ಹೆಣ್ಣುಮಕ್ಕಳನ್ನು ಅವರ ಸಮೀಪಕ್ಕೆ ಕಳಿಸುವದು ಸಾವಾಗಿಯೇ ಕೆಡಕುಹಾದಿಗೆ ಹಚ್ಚಿದಂತಾಗುವದು. ಗಂಡುಳ್ಳವರ ಹಾದರವು ಬಚ್ಚುವದೆಂಬ ಅನುಭವೋಕ್ತಿಯುಂಟು. ಇದನ್ನು ಲಕ್ಷ್ಯಕ್ಕೆ ತಂದು ಸಮಾಜಕ್ಕೆ ಈಗಿರುವ ದುರವಸ್ಥೆಯನ್ನು ಕಂಡು ಎಚ್ಚರಗೊಂಡಲ್ಲಿ ಸುಧಾರಣೆಯು. ಹಾಗೆಯೇ ಅಂದಶ್ರದ್ಧೆಯಿಂದ ಮುಂದಡಿಯನಿಟ್ಟರೇನಾಗುವದೆಂಬದನ್ನು ಕೆಳಗಿನ ಸಾಕ್ಷಿಗಳಿಂದ ಕಂಡುಕೊಳ್ಳುವದು.

ಷಂಡರ ಹೆಂಡರು ಮಿಂಡಜಂಗಮರ ಪಾಲಾಗಿ ಅಯ್ಯಾಮನೆತನದ ದೀಪ ನಿಲಿಸಲು ಕಾರಣರಾದುದೇ ಸಾಕ್ಷಿ! ಎಷ್ಟೋ ಗಂಡಸತ್ತರಂಡೆಯರು, ಮನೆಮನೆ ಉಂಡುಂಡುಗುಂಡರಗೂಳಿಯಾದ ತುಂಡಜಂಗಮರ ಪಾಲಾಗಿ ಗರ್ಭವತಿಯರಾಗಲು, ಭ್ರೂಣಹತ್ಯಾ ( ಹಲಿವುಳಿದು ಹಾಕೋಣ ), ಶಿಶುಹತ್ಯಾ ( ಕೂಸುಗಳಕುತಿಗಿಹಿಚಿಕಿಹಾಕೋಣ ) ಇತ್ಯಾದಿ ಪಂಚಮಹಾಪಾತಕಗಳು ಹೆಚ್ಚಾದುದೇ ಸಾಕ್ಷಿ! ಜಾರಿಣಿಯರಕಿಂತಲು ಮೀರಿನಿಂತ ನಾರಿಯರ ಗೌರವವು ಸೀರಿಯಬಳಿಕೆಯಿಂದ ಮೆರೆಯುತ್ತಿರರುವದೇ ಸಾಕ್ಷಿ. ದುಡಿಯಲಾರದವರ ಪುಡದಿಯರು ಪಡದಪ್ಪಗಳಪಾಲಾಗಿ ಅವರಿಂದ ಮನೆತನಗಳು ನಡೆಯಹತ್ತಿರುವದೇ ಸಾಕ್ಷಿ. ನಾರಿಯೇರ ಈ ಚೋರಜಾರತನದಿಂದ ಎಷ್ಟೋ ಮನೆತನಗಳು ಮುಂದಕ್ಕೆ ಬಂದಿರುವದೇ ಸಾಕ್ಷಿ. ವಿಷಯಲಂಪಟರಾದ ವಿಟಜಂಗಮರ ಬಲಿಗೆ ಬಿದ್ದು ಕೆಲವು ಕುಟಿಲ ಹೆಂಗಳೆಯರು, ಮದ್ದುಮಾಟಗಳಿಂದ ತಮ್ಮಗಂಡದಿರನ್ನು ಮರುಳಮಾಡಹೋಗಿ, ಹುಚ್ಚುಹಿಡಿಸಿ, ಇಲ್ಲವೆ ಜೀವಕ್ಕೆ ಮುನಿದು, ಆ ಜಂಗಮರ ಪದರಿನಲ್ಲುಳಿದುಕೊಂಡಿರುವದೇ ಸಾಕ್ಷಿ. ನಿತ್ಯ ಕರಣವಿಲ್ಲದೆ ಬಾಳುವ ಪ್ರಾಸಾದಿಕರ ಸತ್ಯವ್ರತಕೆ ವಿಷವೆರೆದು, ವೇಷಧಾರಿಯಾದ ಜಂಗಮರ ದೋಷಗಳು ಸೂಸಿ ಹೊರಚಲ್ಲಹತ್ತಿರುವದೇ ಸಾಕ್ಷಿ. ಕೂಟರೋಗವೆನಿಸುವ ಉಷ್ಣರೋಗವು ಸಮಾಜವನ್ನು ವ್ಯಾಪಿಸಿ ಸೀರದೇವರ ಗುರುವಾರವ್ರತವನ್ನು ಮಾಡಹಚ್ಚಿರುವದೇ ಸಾಕ್ಷಿ!

೧೧ ಲಿಂಗಾಯತರಿಗೆ ಲಿಂಗಪಾತಿವ್ರತ್ಯವೇ ಪ್ರಾಮುಖ್ಯವಾದುದು, ಸತ್ಯಮಾರ್ಗದಲ್ಲಿ ಇಂತಹವರ ಅಡಿಯೇ ಯಾವಾಗಲು ಮುಂದಿರಬೇಕೆಂದು ಕಟ್ಟುಮಾಡಲಾಗದು. ಎಲ್ಲರೂ ಕೂಡಿಕೊಂಡು ಹೋಗುವ ಹಾಗೆ ಹೋಗುವದು; ಮುಂದೆ ಆದವರು ಆಗೇ ಆದರು. ಐಕ್ಯಸ್ಥಳವನ್ನು ಅಡರಿದ ಮಹಾದೇವಿಯಕ್ಕನನ್ನು ಅಪಾವಶರಣನು ತಡೆದನು ? ಹೆಜ್ಜೆಗಳು ಆತ್ಮರ ಅಧಿಕಾರತಾರತಮ್ಯವನ್ನನುಲಕ್ಷಿಸಿ ಹಿಂದುಮುಂದಾಗುವದು ಸ್ವಾಭಾವಿಕವು. ಗಂಡಹೆಂಡರಿಬ್ಬರಿಗೂ ನಿಜಗಂಡನು ಲಿಂಗವೇ! ಲಿಂಗದೇವರ ಸತಿಯರಾದ ಇವರಿಬ್ಬರೂ ಏಕಭಾವನದಿಂದ

ಕೂಡಿ ಸೇವೆ ಮಾಡುವದಿರುವದು. ಕಾರಣ ಹೆಂಡತಿಯು ಗಂಡನಲ್ಲಿದ್ದ ಲಿಂಗಸಂಗವನ್ನು ಕಂಡು ಸೇವಿಸುವದಿರುವದಲ್ಲದೆ, ಲಿಂಗಸಂಗಿಯಲ್ಲದವನನ್ನು ಮುಟ್ಟಕೂಡದು. ಇಲ್ಲಿ ಲೌಕಿಕಪಾತಿವ್ರತ್ಯವನ್ನನುಲಕ್ಷಿಸಿ ಆ ಲಿಂಗನಿರತಳಮೇಲೆ ಒತ್ತಾಯಮಾಡುವದು ಲಿಂಗವಂತರ ಧರ್ಮವಲ್ಲವು. ವ್ಯಭಿಚಾರಿಯಾದ ಅಧರ್ಮಿಯನ್ನು ಬಡಿದೂ ಹೊಡೆದೂ ಹಾದಿಗೆಹಚ್ಚುವದೇನು ತಪ್ಪಲ್ಲ! ಸತ್ಯಧರ್ಮದಲ್ಲಿ ನಿಷ್ಕಾಪರಳಾದವಳನ್ನು ಬಲಾತ್ಕರಿಸುವದು ಮುಂದಿಟ್ಟಹೆಜ್ಜೆಯನ್ನು ಹಿಂದಿಡಿಸುವದಲ್ಲವೇ? ಆ ತಾಯಿಯು ಆ ನಿಷ್ಠೆಯನ್ನು ತೊಟ್ಟದ್ದು ತನ್ನಗಂಡನನ್ನು ಇಷ್ಟಮೂರ್ತಿಯನ್ನಾಗ ಮಾಡುವದಕ್ಕಾಗಿಯೇ ಹೊರತು, ಆ ಗಂಡನ ಆಜ್ಞೆಯನ್ನು ಮೀರಿ ಲಂಡತನದಿಂದ ಚಂಡಿಯಾಗಲಿಕ್ಕಲ್ಲ! ನಿಜವಾಗಿ ಲಿಂಗಮಾರ್ಗದಲ್ಲಿದ್ದವರಿಗೇ ಈಮಾತು ರುಚಿಸುವದು. ಸಮಾಜವು ಧರ್ಮತತ್ವವರಿಯದ ಲಂಡರೂ ಭಂಡರೂ ಆದವರಿಂದ ತುಂಬಿದುದಾದರೆ, ಪಾಪ, ಸತ್ಯಧರ್ಮದ ಬಡಪ್ರಾಣಿಗಳನ್ನು ಕೇಳುವವರಾರು! ಎಲ್ಲರೂ ಹೊಡಿ ಬಡಿ ಅನ್ನುವವರೇ! ಆತ್ಮರ ಗಂಡು ಹೆಣ್ಣು ದೇಹಗಳು, ಇನ್ನುಳಿದ ಆತ್ಮರಿಗೆ ಪವಿತ್ರವಾದ ಹೊಸದೇಹಗಳನ್ನು ಉಂಟುಮಾಡುವದಕ್ಕಾಗಿ ನಿರ್ಮಿಸಲ್ಪಟ್ಟಿರುವವೇ ಹೊರತು, ಬರೇ ತಿಂಡಿಗಾಗಿ ತಿಕ್ಕಿಮುಕ್ಕ್ಯಾಡಲಿಕ್ಕಲ್ಲ! ಸಂಸಾರದಲ್ಲಿ ಈ ತಿಕ್ಕಿಮುಕ್ಕ್ಯಾಟವೇ ಸ್ವರ್ಗಸುಖವಾದಬಳಿಕ ಎಲ್ಲಿಯ ಧರ್ಮ ಎಲ್ಲಿಯ ಹತ್ತಿಕಾಳು! ವೀರಶೈವ ಧರ್ಮವು ಎಲ್ಲಿಯೋ ಉಳಿದು, ಸಮಾಜವು ರಸಾತಲಗಂಡಿತು. ಆದರಿಂದ ಲಿಂಗಪಾತಿವ್ರತ್ಯವು ಹಾಳಾಗಿ ಸಮಾಜದ ಪ್ರತಿಯೊಂದು ವ್ಯಕ್ತಿಯು ಗಂಡನ ಗುರ್ತಿಲ್ಲದೆ ಸಂಸಾರಮಾಡಲಾರಂಭಿಸಿತು. ಅಂದರೆ ಎಲ್ಲರೂ ಹಾದರದವರಾಗಿರುವರು. ಈ ಮಾತಿಗೆ ಘಟಸ್ಫೋಟಗಳೂ (ಸೋಡಚೀಟಿಗಳೂ), ವಿಷಮವಿವಾಹಗಳೂ, ಉಡಿಕೆಯ ಬಳಿಕೆಯೂ ಮೇರೆಮಿಪ್ಪಿರುವದೇ ಸಾಕ್ಷಿ!

---

# ೨ನೆಯ ಭಾಗವು

## ಮೇಲ್ಕಂಡ ದೋಷಗಳ ಐತಿಹ್ಯವು

ಪರಮಾತ್ಮನು ತನ್ನಯಾವ ಸಹಜವಾದ ಧರ್ಮದಿಂದ ಈ ಸೃಷ್ಟಿಯನ್ನು ನಿರ್ಮಿಸಿ ಲೀಲೆಯನಾಡಲು ನಿಂತಿರುವನೋ, ಅದು ಅನಾದಿ ಸಂಸಿದ್ಧವಾದುದು. ಇದು ಪ್ರತಿಯೊಂದು ಜೀವಾತ್ಮರಲ್ಲಿ, ಅವರ ನಿಜಸ್ವರೂಪವೂ ಹೇಗೋ ಹಾಗೆ, ತಿಳಿದೂ ತಿಳಿಯದ ಪರಿಯಲಿ ಇರುವದು. ಯಾಕಂದರೆ ಪರಮಾತ್ಮನು ಅನಾದಿ

ಮಲಮಾಯಾಕರ್ಮಗಳನ್ನು ಪರಿಹರಿಸುವ ಕುರಿತು, ತಾನೇ ತನ್ನ ನಿಗೂಹನ
ಶಕ್ತಿಯಿಂದ (ತನ್ನ ಇರುವಿಕೆಗೆ ಏನೊಂದು ಕುಂದುತಟ್ಟದಂತೆ ತನ್ನ ಸರ್ವಕರ್ತೃ
ತ್ವ, ಸರ್ವಜ್ಞತ್ವಾದಿ ಶಕ್ತಿಗಳ ಆಕುಂಚನ ಯೋಗದಿಂದ) ಮಲವ ಪ್ರವೇಶಿಸಿದು
ವದರಿಂದ, ಅಸಂಖ್ಯಾತ ಜೀವರುಗಳ ಸೃಷ್ಟಿಯು ಉಂಟಾಗಿರುವದು. ಅದುಕ
[illegible] ಜ್ಞಾನ[illegible] ವ[illegible] ಮಾನವನ ಸೃಷ್ಟಿಯಲ್ಲಿ ತಲೆಯೆತ್ತುತ್ತಿರುವ [illegible]
[illegible] ಧರ್ಮದ ಮೆಟ್ಟಿಗೆ ಹೋಗಿ [illegible] ನಿಜಸ್ವರೂಪದಲ್ಲಿ ನಿಶ್ಚಿಂತರಾಗ
ಬೇಕೆಂಬ ಸ[illegible]ಪ್ರ[illegible]ವರಾಗಿರುವರು; ಮತ್ತು [illegible]ವು [illegible]ತ್ತಿರುವ
ಪರಿಸ್ಥಿತಿಯಲ್ಲಿ ತನಗೆ ಹೊಳಿದ ಮೇರೆಗೆ ಅನುಕೂಲತೆಗಳನ್ನು ಕಂಡುಕೊಂಡು
ನಡಯುತ್ತಿರುವರು. ಆದರಿಂದ ಲೋಕದಲ್ಲಿ ಮಾನವಸೃಷ್ಟಿಯು ನಿರ್ಮಿತವಾಗಿ
ಅವನ ಜ್ಞಾನಕಲೆಯು ವಿಕಾಸಹೊಂದಿ ತಿಳುವಳಿಕೆಯು ತಲೆದೋರಿದಂದಿನಿಂದ
ಅನಂತಧರ್ಮಗಳು ತೋರಿ, ಅವು ತಮ್ಮ ಸ್ವಾಭಾವಿಕಕ್ರಮದಲ್ಲಿ ಸುಧಾರಣೆಯನ್ನು
ಹೊಂದಿ ಬದಲಾಗುತ್ತ ಬಂದಿರುವವು. ನಮ್ಮೀ ಹಿಂದುಸ್ತಾನವು ಒಳ್ಳೇ ಬೆಳೆಯುಳ್ಳ
ಭೂಮಿಯುಳ್ಳದ್ದಾಗಿಯೂ ಪ್ರಾಕೃತಿಕ ಸ್ವರೂಪದಿಂದ ಇಡೀ ಭೂಮಂಡಲದ ಅ
ನುಕೂಲತೆಗಳನ್ನೆಲ್ಲ ಹೊಂದಿದುದಾಗಿಯೂ ಇರುವದರಿಂದ, ಇಲ್ಲಿಯ ಜನತೆಗೆ
ಧರ್ಮಸುಧಾರಣೆಯಲ್ಲಿ ತ್ವರಿತಗತಿಯುಂಟಾಗಿ, ಧರ್ಮಭೂಮಿಯೆಂದು ಅನೇ
ಕಕಾಲದಿಂದ ಹೆಸರುಪಡೆದು ಅದನ್ನು ಕಾಯ್ದುಕೊಂಡಿರುವದು. ಅದರೊಳಗೆ
ಕರ್ನಾಟಕವಂತೂ ಮೀರಿದ ಅನುಕೂಲಪರಿಸ್ಥಿತಿಯುಳ್ಳದ್ದಾದುದರಿಂದ ಲೋಕ
ದಲ್ಲಿ ತಾನೇ ಮುಂದರಿದು ಸಹಜಧರ್ಮದ ನೆಲೆಗೆ ಹಾರಿ ಅದನ್ನು ಕೂಡಿಕೊಂಡು
ಇಂದಿಗೆ ಸುಮಾರು ಎಂಟು ಶತಮಾನಗಳಾದವು. ವೇದರಚನೆಯಾಗಿ ವೇದಾಂ
ತವನ್ನು ಕಂಡುಕೊಂಡು, ಅದನ್ನು ಸಾಧಿಸಲು ಷಣ್ಮತಗಳುಂಟಾಗಿ, ವೇದಕ್ಕೆ
ಭಾಷ್ಯಗಳು ಬರೆಯಲ್ಪಟ್ಟು, ಆಗಮಗಳರಚನೆಯಾಗಿ, ನಿಜಧರ್ಮದ ನೆಲೆಗೆ ಹಾ
ರಲು, ಎಲ್ಲಿಯವರೆಗೆ ಅನುವರ್ತನವು ಇದ್ದಿಲ್ಲವೋ, ಅಲ್ಲಿಯವರೆಗೆ ಆ ಪರಮಾತ್ಮ
ನಲ್ಲಿ ಅನಾದಿ ಸಂಸಿದ್ಧವಾಗಿರುತ್ತಿದ್ದ ಶಿವಧರ್ಮವು ಯೋಗಿಗಳ ದೃಷ್ಟಸ್ವರೂಪದ
ಲ್ಲಿದ್ದುಕೊಂಡು, ಅನುಭವಕ್ಕೆ ಎಷ್ಟೂ ಸಿಲುಕದಾಗಿ, ವಾಚಾಮಾತ್ರದಿಂದ ಬೋ
ಧಕ್ಕೆ ಕಾರಣವಾಗಿದ್ದುಕೊಂಡಿತ್ತು. ಅದನ್ನು ಸಾಧಿಸಲು ಅನುವರ್ತನವು ಎಂದಿ
ನಿಂದ ಆರಂಭವಾಯಿತೋ,ಅಂದಿನಿಂದ ವೀರಶೈವಧರ್ಮವು ಪ್ರಚಾರದಲ್ಲಿ ಬಂದು
ಶ್ರೀಮದ್ಬಸವಣ್ಣನಕಾಲಕ್ಕೆ ತನ್ನ ಪೂರ್ಣಸ್ವರೂಪಗೊಂಡುದರಿಂದ, ಬಸವಣ್ಣನೇ
ಲಿಂಗವಂತಧರ್ಮದ ಪ್ರಸ್ಥಾಪಕನೂ, ಪ್ರಚಾರಕನೂ''ಎಂದು ಲೋಕಪ್ರಸಿದ್ಧವಾ
ಗಿರುವದು. ಶ್ರೀಮದ್ಬಸವಣ್ಣನು ವೀರಶೈವಧರ್ಮದ ಪ್ರಸ್ಥಾಪಕನಲ್ಲದಿದ್ದರೂ
ವೀರಶೈವ ಸ್ಥಾಪನಾಚಾರ್ಯರಿಂದ, ಶಿವಯೋಗಕ್ಕೆ ಅಡ್ಡಬರುವ ಸಾತ್ವಿಕ ಅಹಂ
ಕಾರವನ್ನು ಕುಂದಿಸಿಕೊಳ್ಳುವದಾಗದೆ, ಬಹುದಿವಸಗಳಿಂದ ನಿರರ್ಥಕವಾಗಿ ಹೋ
ಗಹತ್ತಿರುವ ಅದರ ಆಚಾರವಿಚಾರಗಳು ಪರಮಾತ್ಮನಲ್ಲಿ ಸಾರ್ಥಕವಾಗುವಂತೆ

ಗೆ, ಆ ಸಾತ್ವಿಕ ಅಹಂಕಾರವನ್ನು ಎಷ್ಟು ತಲೆಯೆತ್ತಗೊಡದೆ, ಕಡೆಗೆ ಅದನ್ನೇ ನಿರ್ಮೂಲವಮಾಡುವದಾದ, ಷಟುಸ್ಥಳದ ಗುರುಲಿಂಗಜಂಗಮದ ದಾಸೋಹವನ್ನು ಏರ್ಪಡಿಸಿ, ಲಿಂಗವಂತಧರ್ಮವನ್ನುಂಟುಮಾಡಿ, ಪ್ರಚುರಗೊಳಿಸಿದುದರಿಂದ ಇವನಿಗೇ ಪ್ರಸ್ಥಾಪಕನೂ, ಪ್ರಚಾರಕನೂ ಎಂದು ಅನ್ನುವದು ಪರಿಪೂರ್ಣವಾಗಿ ಸಲ್ಲುವದು. ಶ್ರೀಮದ್ಬಸವಣ್ಣನು ಆ ಸಾತ್ವಿಕ ಅಹಂಕಾರವನ್ನು ಹೇಗೆ ಮುರಿಯಬೇಕೆಂಬುದನ್ನೇ ಲೋಕಕ್ಕೆ ಪ್ರಯೋಗಪೂರ್ವಕವಾಗಿ ಕಲಿಸಿ ತೋರಿಸಲು, ಪ್ರಯೋಗಪಾರ್ಟದಲ್ಲಿ ಆ ಸಾತ್ವಿಕ ಅಹಂಕಾರನೆಂಬ ಬಿಜ್ಜಳರಾಯನ ಮಂತ್ರಿಯಾಗಿ ಒಳಗೂ ಹೊರಗೂ ಆಚರಿಸಿದನು. ಬಿಜ್ಜಳನ ವಧೆಯಾಗಲು ತಾನು ಕಪ್ಪಡಿಸಂಗಮನಲ್ಲಿ ಐಕ್ಯವಾದನು. (ಸಂಪೂರ್ಣವಾಗಿ ಸಾತ್ವಿಕ ಅಹಂಕಾರವು ಲಯವಾಗಲು, ನಿಜಜ್ಞಾನವು ಬೆಳಗಿ, ಮೂಲಾಹಂಕಾರಮಾತ್ರವೇ ಉಳಿವನಾಗಿ, ಸಹಜ ಶಿವಸಾಯುಜ್ಯವನ್ನು ಹೊಂದಿದ ಅಂಗನು, ಎಂದೂ ಅಗಲದ ಸಹಜವಾದ ನಿಜ ಮಹಾಘನಲಿಂಗದಲ್ಲಿ ಕೂಡಿಕೊಂಡು, ಮಹಾಘನಶಿವಯೋಗಿಯಾಗಿ, ಸಹಜದಲ್ಲಿ ಬೆರೆಯಲು, ನಿಜ ಸಾಮರಸ್ಯಯೋಗದ ಬೈಲ ಸಮಾಧಿಯನಾಚರಿಸುತ್ತ ಶಿವತತ್ವದಲ್ಲಿ ಬೆರೆತನು.) ಆದುದರಿಂದ ಬಸವಣ್ಣನ ಚರಿತ್ರವೆಲ್ಲ ಸಾತ್ವಿಕ ಅಹಂಕಾರವನ್ನು ನಾಶಮಾಡಿಕೊಳ್ಳುವ, ಅಂತರಂಗದ ಸಕೀಲಾನುವರ್ತನದ ದೃಷ್ಟಪ್ರಯೋಗವಾಗಿರುವದು. ಅದನ್ನು ನಿಜಾನುಭವದೃಷ್ಟಿಯಿಂದನೋಡಬೇಕಲ್ಲದೆ ಬಾಹ್ಯನೋಟದಿಂದ ನೋಡಲಾಗದು.

ಶ್ರೀಮದ್ಬಸವಣ್ಣನ ನಿಜಾನುವರ್ತನದ ಪ್ರತ್ಯಕ್ಷಪ್ರಯೋಗವನ್ನೂ, ಲಿಂಗಾಂಗಿಯ ಧರ್ಮದ ಉದಾತ್ತವಾದ ತತ್ವಗಳನ್ನೂ ನೋಡುತ್ತಿರಲು, ಈ ಸಮಾಜವು ಎಂ[illegible] ಅವನತಿಯನ್ನು ಹೊಂದಬಾರದು ಹೀಗಿ[illegible] ಕಳ್ಳರ [illegible] ಗಿನಕಿಂತಲ ಕಡೆಯಾಗಿ (Criminal Tribe) ಗುನ್ಹೆಗಾರಜಾತಿ[illegible] ದು[illegible] ಸಿಗು [illegible] ಪ್ರಪಂತ[illegible] ಸ್ಥಿ[illegible] ಯ [illegible] ದಗಬೇಕಾದರೆ, ಅದ[illegible] ವ [illegible] ಸ್ಥಿತಿಯಿಂದ [illegible] ಸ್ಥಿತಿಯವ[illegible] ಗೆ ಬಹಳ ಸೂಕ್ಷ್ಮದೃಷ್ಟಿಯಿಂದ ಶೋಧಿಸಿ, [illegible] ಣ [illegible] ನ್ನು ಬೈಲಿಗಡಬೇಕಾಗಿರುವದು. [illegible] ಕಂಡರೆ [illegible] ದೋಷ[illegible] ಕಾರಣ [illegible] ತವಾಗಿ ಕಿತ್ತುಹಾಕದಿದ್ದರೆ, ನಟ್ಟು ಕಡಸುವದಾಗವೆ ಬರೆ ರೆಂಟೆಕುಂಟೆಗಳಿಂದ ಬಿತ್ತುವ ಪೂರ್ತೆ ಹಸನುಮಾಡಿಕೊಂಡ ಕರಿಕೆಹತ್ತಿದ ಹೊಲಗಳಂತೆ [illegible] ದರಿಂದ ಒಳ್ಳೇ ಪರಿಣಾಮವೂ ಆಗಲಾರದು; ಮತ್ತು ಪುನಃ ಅಂತಹ ದೋಷಗಳು ಚಿಗಿಯದೆ ಇರಲಾರವು. ನಿರ್ವಿಕಾರದ ನಿಜಾನುಭವದೃಷ್ಟಿಯಿಂದ ನೋಡುತ್ತಿರಲು ಅಂತಹ ಕಾರಣಗಳು ಮೂರು ಕಂಡುಬರುವವು.

(೧) ನಿಜಭಕ್ತಿಯೋಗವಿಲ್ಲದೆ ಲಿಂಗದ ಪವಿತ್ರವಾದ ನಡೆಯನ್ನು ಆಚರಿಸೋಣ.

(೨) ಸೃಷ್ಟಿಯ ಸ್ವಾಭಾವಿಕಧರ್ಮದಲ್ಲಿ ಜರಗುತ್ತಿರುವ ದೈಹಿಕ (ಶರೀರ ಸಂಬಂಧವಾದ) ಕಾರ್ಯಗಳು ನಿಜಧರ್ಮಕ್ಕೆ ಅಡ್ಡಬರುವವೆಂಬ ಭ್ರಾಂತಿಯು ಹಿಂಗದಿರೋಣ.

(೩) ಲಿಂಗಾನುಸಂಧಾನದ ಯೋಗವಿಲ್ಲದೆ, ಲೋಕದ ಬಳಕೆಯಲ್ಲಿ ಕಾಯ್ದುಕೊಳ್ಳಲಿಕ್ಕೆ ಎಂದೂ ಆಗದ ಶುದ್ಧರಕ್ತದ ಪವಿತ್ರತೆಗಾಗಿಯೇ ಧರ್ಮದ ನೇಮಗಳಲ್ಲಿರೋಣ.

ಭಕ್ತಿಜ್ಞಾನವೈರಾಗ್ಯಗಳು ನಿಜೈಕ್ಯತೆಗೆ ಕಾರಣವೆಂದು ಸಕಲಶಾಸ್ತ್ರಗಳೂ ಕೂಗುತ್ತಿದ್ದಾಗ್ಯೂ, ಆ ಮೆಟ್ಟಿನಲ್ಲಿ ಜನರ ಅಡಿಯು ಬೀಳದೆ ದರ್ಮಾನುವರ್ತನವಿರುವದರಿಂದ, ಅವೆಲ್ಲ ವರ್ತನಗಳು ಲೌಕಿಕಧರ್ಮವಾಗಿ ಪರಿವರ್ತಿಸುತ್ತಿರುವವು. ಒಮ್ಮೊಮ್ಮೆ ಮಾನವನ ವಿವೇಕದೃಷ್ಟಿಗೆ ನಿಜಧರ್ಮವು ಹೊಳೆದಾಗ್ಯೂ, ಅದು ತನಗೆ ಅಸಾಧ್ಯವೆಂದು ಕೈಬಿಟ್ಟು ಆಚರಿಸುತ್ತಿರುವನು. ಪರಮಾತ್ಮನು ಮಾನವನ ವಿವೇಕಕ್ಕೆ ಹೊಳೆದುದನು ಅಳವಡಿಸಿಕೊಳ್ಳಲು ಬೇಕಾದ ಸಾಧನಗಳನ್ನು ದಯಪಾಲಿಸಿಯೇ ಮಾನವಸೃಷ್ಟಿಯನ್ನು ನಿರ್ಮಿಸಿರುವನು. ಆ ಸಾಧನಗಳಿಂದ ವಿವೇಕಕ್ಕೆ ಹೊಳೆದುದನು ಅರ್ಧ ನಿಮಿಷವಾದರೂ ಬಿಡದಂತೆ ಹಿಡಿದು ಆಚರಿಸುವದೇ ಭಕ್ತಿ. ದೃಷ್ಟಿಯು ದೋಷಗಳನ್ನು ಹೊಡೆದೋಡಿಸುವದೇ ಜ್ಞಾನ. ಆ ಜ್ಞಾನವು ಅಳವಟ್ಟನೇರೆಗೆ ವಿರಕ್ತಿ. ಇವು ಒಂದಕ್ಕೊಂದು ಕಾರ್ಯಕಾರಣರೂಪದಲ್ಲಿ ಕೂಡಿಕೊಂಡು ಒಂದೇಯಾಗಿರುವವು. ಪರಮಾತ್ಮ, ಜೀವಾತ್ಮ, ಸಂಸಾರ ಇವುಗಳನ್ನು ಭಿನ್ನ ಭಿನ್ನವಾಗಿ ವಿಚಾರಿಸುವಾಗ್ಗೆ, ಆ ಏಕರೂಪವಾದುದು ಬೇರೆ ಬೇರೆ ಮೂರು ಸ್ವರೂಪಗಳಿಂದ ವ್ಯಕ್ತವಾಗುವದು. ಪರಮಾತ್ಮನ ವಿಚಾರದಲ್ಲಿ ಭಕ್ತಿಸ್ವರೂಪವಾಗಿಯೂ, ಜೀವಾತ್ಮನವಿಚಾರದಲ್ಲಿ ಜ್ಞಾನಸ್ವರೂಪವಾಗಿಯೂ, ಸಂಸಾರದವಿಚಾರದಲ್ಲಿ ವೈರಾಗ್ಯಸ್ವರೂಪವಾಗಿಯೂ ವ್ಯಕ್ತವಾಗುವದು. ಅದುದರಿಂದ ಬಲ್ಲವರು ಭಕ್ತಿಗೆ ಅಸ್ಪೃಷ್ಟವಿಷಯಸ್ನೇಹವು [ಜ್ಞಾನದಿಂದ ಪರಮಾತ್ಮ, ಪ್ರಪಂಚ ಇವುಗಳೊಳಗಿನ ಸುಖದುಃಖಗಳನ್ನು ಅರಿತು, ಸಂಸಾರವು ಎಷ್ಟೂ ಹೊದ್ದದಂತೆ ಪರಮಾತ್ಮನಲ್ಲಿಟ್ಟ ಅಚ್ಯುತವೂ (ಎಂದೂ ಕೆಡದ್ದು) ಪರಿಪೂರ್ಣವೂ (ಎಷ್ಟೂ ವಂಚನೆಯಿಲ್ಲದ್ದೂ) ಆದ ಅಂತಃಕರಣವೃತ್ತಿಯು] ಎಂದು ಹೇಳುವದುಂಟು. ಅಂತಪ್ಪ ಭಕ್ತಿಯೇ ಪರಮಾತ್ಮನಲ್ಲಿದ್ದ ಸಹಜಧರ್ಮದ ಸಾಮರಸ್ಯಯೋಗವು. ಈ ಸಹಜಧರ್ಮವೇ ಸಂಸಾರದಿಂದ ಬೆಂದು, ಆದರಿಂದ ಬಿಡುಗಡೆಯನ್ನು ಹೊಂದಲು ಯತ್ನಿಸುತ್ತಿರುವ ಆತ್ಮರ ದೃಷ್ಟಿಗೆ ಇಷ್ಟವಾಗಿ ತೋರುವದು. ಈ ಇಷ್ಟವನ್ನು ಹೊಂದಲು ತತ್ಸಾಮರಸ್ಯಯೋಗವೇ ಸಾಧನವಾದುದರಿಂದ, ಈ ಯೋಗಸಂಪನ್ನರನ್ನಾಶ್ರಯಿಸಿಯೇ ತೀರಬೇಕಾಗುವದು ಏಕಂದರೆ ವಿಷಯುಗಳಿಗೆ ಕಾರಣವಾದ ಇಂದ್ರಿಯುಗಳು ಸ್ವಾಭಾವಿಕವಾಗಿ ಹೊರಮುಖವಾಗಿರುವದರಿಂದ, ಅಂತಃಕರಣವೃತ್ತಿಯು ಆ ವಿಷಯುಗಳನ್ನೊಳಕೊಂಡ

ಸ್ಥೂಲಪದಾರ್ಥಗಳಲ್ಲಿ ತೊಡಗಿಕೊಂಡಿರುವದು. ಕಾರಣ ಆ ವಿಷಯಗಳಿಂದ ಅವುಗಳನ್ನು ತಿರುಗಿಸಿ ಇಷ್ಟದಲ್ಲಿ ತೊಡಗಿಸಲು, ಆ ಇಷ್ಟವೇ ಅಂಗವಾಗಿ ಸ್ಥೂಲ ದಲ್ಲಿ ದೃಷ್ಟವಾದ ವ್ಯಕ್ತಿಯು ಬೇಕಾಗುವದು. ಇಂತಹ ವಸ್ತುಗಳ ಸನ್ನಿಧಿಯಲ್ಲಿ ದರ್ಶನಸ್ಪರ್ಶನಾದಿಕಾರ್ಯಗಳಿಂದ ಅಂತರಂಗದ ಯೋಗವನ್ನು ಸೃಷ್ಟಿಯ ಸ್ವಾ ಭಾವಿಕ ಧರ್ಮದಲ್ಲಿ ಹಡಕೊಂಡು, ವಿಷಯ ನಿವೃತ್ತಿಯಲ್ಲಿ ಸಹಜವಾಗಿ ಧೀರತ ನವನ್ನು ಸಾಧಿಸಿಕೊಳ್ಳುವ ವೀರ ಆತ್ಮರುಗಳೇ ವೀರಶೈವರು. ಈ ವೀರಶೈವರಿಗೆ ಮೇಲಿನ ಮೂರು ನಿಯಮಗಳು ಬಾಧಕವಾಗಿರುವವು.

ಆತ್ಮರಿಗೆ ತಾವು ತೊಟ್ಟ ದೇಹವು ತಾವಲ್ಲವೆಂದು ಗೊತ್ತಿದ್ದರೂ, ವ್ಯವಹಾರ ದಲ್ಲಿ ಪರಿವಿಗೆಟ್ಟು ದೇಹರೂಪಿಯಾಗಿಯೇ ನಡಿಯುತ್ತಿರುವರು. ಪಂಚವಿಷಯ ಗಳನ್ನೊಳಕೊಂಡ ಪದಾರ್ಥಗಳನ್ನೆಲ್ಲ ತಮ್ಮದೇಹದ ಸುಖಕ್ಕಾಗಿಯೇ ಅಪೇಕ್ಷಿಸಿ ಹರಿದಾಡುತ್ತಿರುವರು. ಎಲ್ಲಿಯವರೆಗೆ ನಾವು ಈ ದೇಹದಿಂದ ಭಿನ್ನವಿದ್ದೇವೆಂಬ ಅರುಹಿನ ವ್ಯವಹಾರದಲ್ಲಿ ಸಹಜವಾಗಿ ಉಳಿಯುವದಿಲ್ಲವೋ, ಅಲ್ಲಿಯವರಿಗೆ ದೈಹಿ ಕ ಕಾರ್ಯಗಳ, ಹಾಗು ಶುದ್ಧಾಶುದ್ಧ ಧಾತುಗಳ ( ರಕ್ತ, ಮಾಂಸ, ಎಲವು, ತೊಗಲು, ಮಜ್ಜಾ, ಮಿದುಳು ರೇತಸ್ಸು ಈ ಸಪ್ತಧಾತುಗಳ) ಭ್ರಾಂತಿಯು ತೊಲಗುವ ಯೋಗವು ಉಂಟಾಗಲಾರದು. ಆದುದರಿಂದ ಶ್ರೀಮದ್ಬಸವಣ್ಣನು ದೈಹಿಕ (ಶರೀರಸಂಬಂಧವಾದ) ಸುಖದ ಭ್ರಾಂತಿಯಿಂದ ಆತ್ಮರನು ಬಿಡುಗಡೆ ಯ ಮಾಡಲೋಸುಗ, ಸಹಜದ ನಿಜಾಂಗದಲ್ಲಿ ಅವ್ಯಕ್ತವಾಗಿದ್ದ ಕ್ರಿಯಾ ಜ್ಞಾನ ವೈರಾಗ್ಯಸ್ವರೂಪಗಳ ವ್ಯಕ್ತವಾದ ಗುರುಲಿಂಗಜಂಗಮವನು, ಕರ ಮನ ಭಾವ ಗಳಿಗೆ ತಂದು, ಬಾಹ್ಯದಲ್ಲಿ ಆಚರಿಸಲು, ತ್ಯಾಗಾಂಗದ ಭಕ್ತಮಾಹೇಶ ಸ್ಥಲಗಳ ನ್ನೂ, ಆತ್ಮನ ದೋಷಗಳನ್ನು ಕಳೆದುಕೊಳ್ಳಲು ಭೋಗಾಂಗದ ಪ್ರಸಾದಿಪ್ರಾಣ ಲಿಂಗಿಸ್ಥಲಗಳನ್ನೂ, ಸಹಜಾಂಗಸಾಮರಸ್ಯವನ್ನು ಹೊಂದಿ ನಿಜದಲ್ಲಿ ಬೆರೆಯ ಲು, ಯೋಗಾಂಗದ ಶರಣಐಕ್ಯ ಸ್ಥಲಗಳನ್ನೂ ಏರ್ಪಡಿಸಿ, ಲಿಂಗಾಗಿಯ ಧರ್ಮದ ಯಥಾರ್ಥ ಪ್ರಯೋಗವನ್ನು ಲೋಕದ ಮುಂದಿಟ್ಟನು. ಈ ಷಟುಸ್ಥಲಗಳು ಸದಾ ಪಡಕೊಳ್ಳುವದಕ್ಕಾಗಿಯೇ ಇರುವದರಿಂದ, ಲಿಂಗಾಂಗಿಯ ಧರ್ಮವೆಲ್ಲ ಕ್ರಿಯಾಜ್ಞಾನಪ್ರಸಾದಗಳನ್ನು ಪಡಕೊಂಬುವ ಆಚರಣೆಯ ಮೇಲೆಯೇ ನಿಂತಿರು ವದು. ಹಡೆಯುವ ಹಡಕೊಂಬುವ ಯೋಗ್ಯತೆಯಿಲ್ಲದ ನರರು ( ದೇಹದಾಶೆ ಯೂ, ದೇಹಸುಖಕ್ಕೆ ಸಾಧನವಾದ ವಿಷಯಗಳನ್ನೊಳಕೊಂಡ ಪದಾರ್ಥಗಳ ಆಶೆ ಯೂ, ಶುದ್ಧಾಶುದ್ಧರಕ್ತದ ಭ್ರಮೆಯೂ ತೊಲಗದವರು) ಪಡಕೊಂಬುವದರಿಂ ದೇನಾಗುತ್ತದೆಂಬದನ್ನು ಮೂರನೆಯ ಪುಷ್ಪದಲ್ಲಿ ವಿವರಿಸಿರುವದು. ಅಲ್ಲದೆ ಮುಂ ದೆ ಐತಿಹ್ಯದಲ್ಲಿಯೂ ಸ್ವಲ್ಪದರ ಮಟ್ಟಿಗೆ ಹೇಳಿರುವದು. ಆದರೆ ಇಲ್ಲಿ ಲಿಂಗಸೂ ತ್ರಕ್ಕೆ ಹೊರಗಾದ ನರರು ಈ ಪಡಕೊಂಬುವ ಆಚರಣೆಯನ್ನು ಆಚರಿಸುವದರಿಂದ ಏನಾಗುವದೆಂಬದನ್ನು ಸೃಷ್ಟಿಯ ಸಹಜ ವ್ಯಾಪಾರದಲ್ಲಿ ದಿಗ್ದರ್ಶನ ಮಾಡುವಾ.

ತೋರುವ ತೋರಿಕೆಯೆಲ್ಲವೂ ಪಂಚಮಹಾಭೂತಗಳಿಂದಾದುದು ನೆಲಕ್ಕೆ ಬೇರೆ ಬೇರೆಯಾಗಿ ತೋರುವ ನೆಲ, ನೀರು, ಬೆಂಕಿ, ಗಾಳಿ, ಮುಗಿಲು ಇವಾದರೂ ತನ್ನ ತನ್ನ ಸ್ಥಿತಿಯಲ್ಲಿ ಉಳಿದ ನಾಲ್ಕು ಭೂತಗಳಿಂದ ಕೂಡಿದಂತಹವೇ! ಉದಾಹರಣಾರ್ಥವಾಗಿ ನಮ್ಮ ಕಣ್ಣಿಗೆ ತೋರುವ ಮುಗಿಲು, ತನ್ನ ಸ್ವರೂಪದಲ್ಲಿದ್ದ ನೆಲ ನೀರು ಬೆಂಕಿ ಗಾಳಿಗಳಿಂದ ಕೂಡಿದಂತಹದ್ದು. ಏನೊಂದು ಕೂಡದ ಪರಿಶುದ್ಧವಾದ ಭೂತಗಳನ್ನು ಕಾಣುವದು ಸಹಜವಾಗಿ ಶಕ್ಯವಿಲ್ಲವು. ಆಕಾಶವಾದರೂ ತನ್ನ ಸುತ್ತಲು ತಿರುಗುತ್ತಿರುವ ಅಸಂಖ್ಯಾತ ಪರಮಾಣುಗಳಿಂದ ಎಷ್ಟೊ ಬಿಡದೆ ವ್ಯಾಪಿಸಿಕೊಂಡಿರುವದೆಂದು ಅಧುನಿಕ ಶಾಸ್ತ್ರಜ್ಞರೂ ಒಪ್ಪುವರು. ಅಂತಹ ಅಸಂಖ್ಯಾತ ಪರಮಾಣುಗಳಿರುವದರಿಂದಲೇ ಎಲ್ಲವೂ ಆಕಾಶದಲ್ಲಿ ತೋರಿ ಆಕಾಶದಲ್ಲಿಯೇ ಅಡಗುತ್ತಿರುವದು. ಈ ತೋರಿ ಅಡಗುವ ಚಕ್ರದಲ್ಲಿ ಪರಮಾತ್ಮನು ಆತ್ಮರನು ಸಂಬಂಧಿಸಿ, ಜಗದೋದ್ಧಾರಮಾಡಲು, ಅವರ ಚಿದ್ಧರ್ಮದಲ್ಲಿ ಪಾಶಾನುಗ್ರಹಗಳ ರೂಪದಿಂದ ಲೀಲೆಯನಾಡುತ್ತಿರುವನು. ಆತ್ಮರು ಎಲ್ಲಿಯವರೆಗೆ ಈ ಹಂಗು ಹರಿದು ನಿಸ್ಸಂಗಿಗಳಾಗಿ ಕೇವಲ ಪರಮಾತ್ಮನ ಹಂಗಿನಲ್ಲಿ ಬೆಳೆಯಲು ಉಪಕ್ರಮಿಸಲಾರರೋ, ಅಲ್ಲಿಯವರೆಗೆ ಪ್ರತಿಯೊಂದು ಆತ್ಮನ ಇಚ್ಛೆಯ ಮೇರೆಗೆ ಅವನಲ್ಲಿದ್ದ ಶಕ್ತ್ಯಾನುಸಾರ ಅವನ ಅಂಗದ ಸ್ವಭಾವಗುಣಧರ್ಮಾದಿಗಳ ಪ್ರಭಾವವು, ಪ್ರತಿಯೊಂದು ಭೂತದಲ್ಲಿ ಆಯಾಭೂತಗಳ ಗುಣಧರ್ಮಾನುಸಾರವಾಗಿ ಹಬ್ಬುತ್ತಿರುವವು. ಕಾರಣ ಪ್ರತಿಯೊಂದು ವ್ಯಕ್ತಿಯು ಸ್ಪರ್ಶಸನ್ನಿಧಿಗಳಿಂದ ನೆಲ ನೀರು ವಾಯುಗಳಿಂದಲೂ, ಸನ್ನಿಧಿಯಿಂದ ವಾಯುವಿನಿಂದಲೂ ಒಬ್ಬರ ಗುಣಸ್ವಭಾವಾದಿಗಳು ಇನ್ನೊಬ್ಬರಲ್ಲಿ ಬೆಳೆಯುತ್ತಿರುವವು. ಇದಕ್ಕೆ ಪುರಾಣವೈರಾಗ್ಯ, ಸ್ಮಶಾನವೈರಾಗ್ಯ ಪ್ರಸೂತವೈರಾಗ್ಯ ಇವೇ ಸಾಕ್ಷಿ, ಅಲ್ಲದೆ ಸಬಲನ ಪ್ರಭಾವದಲ್ಲಿ ದುರ್ಬಲನ ಪ್ರಭಾವವು ಸಹಜವಾಗಿ, ಸೂರ್ಯಪ್ರಕಾಶದಲ್ಲಿ ಚಂದ್ರನ ಕಾಂತಿಯು ಹೇಗೋ, ಹಾಗೆ, ಅಥವಾ ಚಂದ್ರನ ಪ್ರಭೆಯಲ್ಲಿ ಚಿಕ್ಕೆಗಳ ಹೊಳಪು ಹೇಗೋ ಹಾಗೆ, ಕಳೆಗುಂದುತ್ತಿರುವದು. ಇದರಿಂದ ಅವನೊಬ್ಬನು ಅವುದೊಂದು ಗುಣಸ್ವಭಾವದಲ್ಲಿ ಹೆಚ್ಚಾಗಿದುಡಿದುಕೊಂಡವನಾಗಿದ್ದರೆ, ಅಂತಹ ದುರ್ಬಲವಾದ ಅನಂತಗುಣಸ್ವಭಾವದವರು ಅವನ ಪ್ರಭಾವದ ಬಲೆಯಲ್ಲಿ ಸಹಜವಾಗಿ ಬಿದ್ದು, ಉಂಟಾದ ಸಾಮೂಹಿಕ ಶಕ್ತಿಯು ಒಂದೊಂದು ಕಾರ್ಯವನ್ನು ಮಾಡಲು ಸಮರ್ಥವಾಗುತ್ತಿರುವದು. ಆದುದರಿಂದ ಆಯಾಕಾಲಕ್ಕೆ ಇಂತಹ ಅನಂತಪ್ರಯೋಗಗಳು ಅಲ್ಲಲ್ಲಿ ತೋರಿ, ತಮ್ಮ ವಿರುದ್ಧವಾದ ಪ್ರಬಲ ಪ್ರಯೋಗಗಳಲ್ಲಿ ಲಯಹೋದುತ್ತಿರುವವು.

ನಮ್ಮ ಅಯ್ಯಗಳು ನಿಜಲಿಂಗಸೂತ್ರಕ್ಕೆ ಹೊರತಾಗಿ ಇಂತಹ ಗುಣಾತ್ಮಕ ಕಾರ್ಯದಲ್ಲಿ ಭದ್ರವಾದ ಸಮಾಜದ ಘಟನೆಯು (ವ್ಯವಸ್ಥೆಯು) ಯೋಗದಿಂದ

ಸೃಷ್ಟಿಯ ಸ್ವಾಭಾವಿಕ ಧರ್ಮಕ್ಕನುಸರಿಸಿ, ಕಾಲಕಾಲಕ್ಕೆ ಉಂಟಾದ ಸಾಮೂಹಿಕ ಶಕ್ತಿಯ ದುರುಪಯೋಗದಿಂದ ಹೊಂದಿದ ಅನಿಷ್ಟ ಪರಿಣಾಮಗಳು ನಮ್ಮ ಇತಿಹಾಸದಲ್ಲಿ ಅಲ್ಲಲ್ಲಿ ಕಂಡು ಬರುವವು.

ಹದಿನಾಲ್ಕನೆಯ ಶತಮಾನದಲ್ಲಿ ವಿಜಯನಗರವನ್ನು ಸ್ಥಾಪಿಸಿದ ಹುಕ್ಕ ಬುಕ್ಕ ದೊರೆಗಳೂ, ಮಹಾದೇವ (ಮಾಧವ) ನೆಂಬ ಮತ್ತೊಬ್ಬ ಮಂತ್ರಿಯೂ, ಅವರ ತರುವಾಯದ ಕೆಲವು ತಲೆಯವರೂ ಲಿಂಗವಂತರಾದರೂ, ಅವರ ರಾಜ್ಯವು ಹೇಳಹೆಸರಿಲ್ಲವಾಯಿತು.

ಹದಿನಾರನೆಯ ಶತಮಾನದಲ್ಲಿ ಮೈಸೂರದ ಲಿಂಗವಂತ ದೊರೆಯಾದ ಚಿಕ್ಕದೇವರಾಯನು ಅಯ್ಯಗಳುಎಬ್ಬಿಸಿದ ಹಾವಳಿಯನ್ನು ತಡೆಯಲಾರದೆ, ಸುಮಾರು ಏಳುನೂರು ಅಯ್ಯಗಳತಲೆಹೊಡಿಸಿ, ಉಳಿದ ಅಯ್ಯಗಳನ್ನು ಕಂಡಲ್ಲಿ ಕೊಲ್ಲಿರೆಂದು ಆಜ್ಞಾಪಿಸಿ, ತಾನು ವೀರವೈಷ್ಣವ ದೀಕ್ಷೆಯನ್ನು ಹೊಂದಿದನು.

ಕೆಳದಿಯ ಅಥವಾ ಇಕ್ಕೇರಿಯ ರಾಜ್ಯವು ಲಿಂಗವಂತರದಾದಾಗ್ಯೂ ಕಡೆಗೆ ಹದಿನೆಂಟನೆಯ ಶತಮಾನದಲ್ಲಿ ವೀರಮ್ಮಾಜಿಯ ದುರ್ವ್ಯಾಪಾರದ ಮೂಲಕ, ದತ್ತಕ ಪ್ರಕರಣದಲ್ಲಿ ಹೈದರನನ್ನು ಬಲಮಾಡಿಕೊಂಡು, ಅನಂತಕೊಲೆಗೆ ಕಾರಣವಾಗಿ, ಅವನ ಸ್ವಾಧೀನವಾಯಿತು.

ಇಪ್ಪತ್ತನೆಯ ಶತಮಾನದಲ್ಲಿ ಲಿಂಗಾಯತರು ಶೂದ್ರರೆಂಬ ದುಂದುಭಿಯು ಮೊಳಗುತ್ತಿರುವದು.

ಇನ್ನು ಮಾನವನು ಒಂದು ಬುಡಮೇಲಾಗಿ ಬೆಳೆದ ವೃಕ್ಷವು. ಕಣ್ಣಿಗೆ ಕಾಣದಂತಹ,ಅವನ ಗುಣಸ್ವಾಭಾವಾದಿಗಳ ಅತಿಸೂಕ್ಷ್ಮವಾದ ಫಲಗಳು,ಅವನ ಕಾಲಿನ ಹಾಗು ಕೈಯ ತುದಿಬೆರಳುಗಳಲ್ಲಿ ಹಾರುತ್ತಿರುವವು. ನೀರಲ್ಲಿ ಅವುದೊಂದನ್ನು ಹೀರಿ ತನ್ನಲ್ಲಿ ಆವರಿಸಿಕೊಂಡು ಹಿಡಿದಿಡುವ ಧರ್ಮವಿರುವದು. ಕಾರಣ ಮಹಾನುಭಾವಿಯೂ, ಗುರುಲಿಂಗಜಂಗಮಸ್ವರೂಪಿಯೂ, ಆದ ವ್ಯಕ್ತಿಯ ಪಾದಾಂಗುಷ್ಠಾಗ್ರವ (ಕಾಲಹೆಬ್ಬರಳಿನ ತುದಿಗಗಳನ್ನು) ಎರೆದ ಉದಕದಲ್ಲಿ ಪಾದೋದಕವೂ, ಕರಾಂಗುಲಿಗಳ ಸ್ಪರ್ಶದಿಂದ ಅನ್ನದ ಪೂರ್ವಾಶ್ರಯವು ಅಳಿದು ಪ್ರಸಾದವೂ ಸೃಷ್ಟಿಯ ಸ್ವಾಭಾವಿಕ ಧರ್ಮದಲ್ಲಿ ಜನಿಸುತ್ತಿರುವವೆಂಬದನ್ನು ಸಿದ್ಧಪಡಿಸಿ,ನಖಶಿಖಾಂತವಾಗಿ ಜಂಗಮನನ್ನು ಆಗಮಗಳಲ್ಲಿ ವರ್ಣಿಸಿರುವದು. ಮಹಿಮರಿಂದ ಕರುಣಜ್ಞಾನಪ್ರಸಾದಗಳನ್ನು ಪಡಕೊಂಡುವ ಕ್ರಿಯೆಯು ಈ ಸಿದ್ಧಾಂತಕ್ಕನುಸರಿಸಿ ಬಳಿಕೆಯಲ್ಲಿ ಬಂದಿರುವದು. ಗುರುಲಿಂಗಜಂಗಮವಲ್ಲದ ವ್ಯಕ್ತಿಯನ್ನು ಈ ಕಾರ್ಯಕ್ಕೆ ಉಪಯೋಗಿಸುವದರಿಂದ ಏನಾದೀತೆಂಬದನ್ನು ವಾಚಕರೇ ಮುಂದಿನ ವಿವರದಿಂದ ಊಹಿಸಲಿ. ಹಡೆಯುವವನು ಅಧಿಕಾರಿಯಾಗಿದ್ದು, ಪಡಕೊಳ್ಳುವವನು ವಿಕಾರಿಯಾಗಿದ್ದಲ್ಲಿಯೂ, ಹಡೆಯುವವನು ವಿಕಾರಿ

ಯಾಗಿ ಹಡಕೆೊಳ್ಳುವವನು ಅಧಿಕಾರಿಯಾಗಿದ್ದಲ್ಲಿಯೂ ಪಾದೋದಕ ಪ್ರಸಾದ ಗಳು ಜನಿಸಲಾರವು. ಅಲ್ಲಿ ಪಾದೋದಕಪ್ರಸಾದಗಳೆಂದು ಬಳಸುವವೆಲ್ಲ ವಿಕಾರವೆಂಬ ವಿಷದಿಂದ ಕೂಡಿದ, ಮತ್ತು ಇಷ್ಟ ಜಡಾಂಗವನ್ನಾಗಿಸುವ ನೀರುಕೂಳುಗಳಾಗಿರುವವು. ಈ ರೀತಿ ಈ ಕ್ರಿಯೆಯನ್ನು ಆಚರಿಸದಿರುವದೇ ಹಿತಕರವು. ಕೇವಲ ಪಡಕೊಂಬುವ ಕ್ರಿಯೆಯು ಮೇಲೆಯೇ ನಿಂತಿರುವದಾದ ನಮ್ಮ ಸಮಾಜವು, ಅನಧಿಕಾರಿಗಳಾದ ವಿಕಾರಿಗಳಿಂದ ಪಡಕೊಂಡು ಪಡಕೊಂಡು ಈ ಮನೆಗೆ ಬಂದಿರುವದು. ಪತಿವ್ರತಾಶಿರೋಮಣಿಯಾದ ಒಬ್ಬಳೊಬ್ಬ ಸ್ತ್ರೀಯು, ಹುಣ್ಣು ಹತ್ತಿಸಿಕೊಂಡು ತುಂಬಾ ಹುಳಿತ ತನ್ನ ದುಷ್ಟ ಗಂಡನ ಸಂಗದಿಂದ ತನ್ನ ಶರೀರವನ್ನೂ ಕೆಡಿಸಿಕೊಂಡಂತೆ, ವಿಕಾರಿಗಳಾದ ಗುರುವರ್ಗದಿಂದ ಭಕ್ತವರ್ಗವೂ ಕೆಟ್ಟಿರುವದು. ಕಾರಣ ಸಮಾಜವು ಹೀನ ದೆಶೆಗೆ ಬಂದುದರ ದೋಷಕ್ಕೆ ಭಕ್ತವರ್ಗವು ಎಷ್ಟೂ ಪಾತ್ರವಾಗಲಾರದು. ಆ ದೋಷವೆಲ್ಲ ಗುರುವರ್ಗದ್ದೇ! ಹೇಗೆಂಬುದು ಮುಂದಿನ ವಿವರದಿಂದ ತಾನೇ ಗೊತ್ತಾಗುವದು.

ಈಗಿನ ಸಮಾಜದ ಅವನತಿಗೆ ಗುರುವರ್ಗವೇ ಕಾರಣವಾದುದರಿಂದ, ಗುರುವರ್ಗದೊಳಗಿನ ಬೇರೆ ಬೇರೆ ಸ್ಥಲಕಟ್ಟಿನವರು ಲಿಂಗಾಂಗಿಯ ಧರ್ಮದೃಷ್ಟ್ಯಾ ಹೇಗಿರಬೇಕಾದದ್ದು. ಈಗ ಹೇಗಿರುವರು. ಎಂಬುದು ಸ್ಪಷ್ಟವಾಗಿ ದೃಷ್ಟಿಗೆ ಕಟ್ಟಿದಹಾಗೆ ಆದ ಹೊರತು, ಅವರ ದೋಷಗಳು ಒಡೆದುಕಾಣಲಾರವಾದುದರಿಂದ, ಕೆಳಗೆ ಕ್ರಮವಾಗಿ ವಿವರಿಸಬೇಕಾಯಿತು.

## ಗುರುಸ್ಥಲದ ಮಠಪಯ್ಯಗಳು.

ಆಚಾರವನ್ನು ಆಳವಡಿಸಿಕೊಳ್ಳುವದರಲ್ಲಿ ನಿರತರಾಗಿರಬೇಕು. ಪರಧನ ಪರಸ್ತ್ರೀಯರಿಗೆ ಎಷ್ಟೂ ಎಳಸಬಾರದು. ಯಾವಾಗಲೂ ಲಿಂಗದಲ್ಲಿಯೇ ಮನವನ್ನು ಕಟ್ಟಿ ಸಕಲವ್ಯವಹಾರವನ್ನು ಸಾಗಿಸುತ್ತಿರಬೇಕು. ಪ್ರಾಣಹೋದರೂ ಆಚಾರಕ್ಕೆ ಭಂಗತರಬಾರದು; ಮತ್ತು ತಮ್ಮಲ್ಲಿ ನಂಬುಗೆಯನಿಟ್ಟು ನಡಕೊಳ್ಳುವದರಲ್ಲಿಯೂ ತರಗೊಡಬಾರದು. ಮಠಗಳು ಸಾಲೆಯಮನೆಗಳೂ, ಬೋಧದ ಮನೆಗಳೂ ಆಗಿರಲಿಕ್ಕೆಬೇಕು. ಮಠದ ಸೊತ್ತಿಗೆ ಅವರು ಅಧಿಕಾರಿಗಳಲ್ಲ. ಎಲ್ಲಿಯವರೆಗೆ ಲಿಂಗೋಪಭೋಗದಲ್ಲಿ ಮಾಹೇಶಸ್ಥಲವನ್ನು ಕಾಯ್ದುಕೊಂಡು ಹೋಗುವರೋ, ಅಲ್ಲಿಯವರೆಗೆ ಅವರಿಗಾಗಲಿ, ಅವರವಂಶಜರಿಗಾಗಲಿ ನಡಿಸಬಹುದು. ಮಾಹೇಶ್ವರವೃತ್ತಿಯು ಕೆಡಲು, ಭಕ್ತಿಯ ಯೋಗದಲ್ಲಿ ಬಲ್ಲಿದರಾದ ದಂಪತಿಗಳನ್ನು ಆಯ್ದು ನಿಯಮಿಸುವದಿರುವದು. ಇವರ ಉಪಜೀವನದ ಸರ್ವ ಭಾರವನ್ನು ಭಕ್ತರು ವಹಿಸಿರುವದರಿಂದ ನಾಳಿನ ಚಿಂತೆಯು ಎಷ್ಟೂ ಇಲ್ಲದೆ. ಈ ಹೊತ್ತು ಬಂದುದನೆಲ್ಲ ಈ ಹೊತ್ತೇ ದಾಸೋಹಕ್ಕಾಗಿ ಉಪಯೋಗಿಸಬೇಕು. ಅತಿಥಿಯಾಗಿ ಬಂದ ಭಕ್ತರ ಶಿವಾರ್ಚನಾದಿವಿಷಯಗಳಿಗೆ ಎಷ್ಟೂಕೊರತೆಯು ಉಂಟಾಗದಂತೆ ಮಠದಲ್ಲಿ ದಾಸೋಹವನ್ನು ನಡಿಸತಕ್ಕದ್ದು.

ಅದೇ ಈಗಿನ ಸ್ಥಿತಿಯನ್ನು ನೋಡಿರಿ. ಅಯ್ಯನವರದು ಒಂದುಜಾತಿಯೆಂದು ವೈಯುಂಡು, ಆ ಅಭಿಮಾನವು ಕುಂದದೇ ಆಚರಿಸುವದರಿಂದ, ಗುರುಲಿಂಗಜಂಗಮದ ದಾಸೋಹವಿಲ್ಲದೆ ಹೋಗಿ, ಬಾಹ್ಯದಲ್ಲಿ ಬಳಿಸುವ ಆಚಾರಗಳೆಲ್ಲ ಕೇವಲ ಡಂಭಾಚಾರಗಳಾಗಿವೆ. ಬಹುಶಃ ಇವರ ಚಿತ್ತವೃತ್ತಿಯೆಲ್ಲ ಪರಧನ ಪರಸ್ತ್ರೀಯರ ಲಂಪಟದಲ್ಲಿ ತೊಡಗಿಕೊಂಡಿರುವದು. ಭಕ್ತರು ಇವರ ಆಚಾರ ವಿಚಾರಗಳನ್ನೇನು ಎದ್ದೆಣಿಸಿದೆ, ಇವರ ಉಪಜೀವನಭಾರವನ್ನು ಹೊತ್ತವರಾದುದರಿಂದ ಇವರ ಚರಿತಾರ್ಥವು ಸಹಜ ಸಾಗಿ, ಹೆಚ್ಚಿನ ಉತ್ಪನ್ನವೆಲ್ಲ ಸೂಳೆಯರ ಮನೆಯ ಪಾಲು ಆಗುತ್ತಿರುವದು. ಇಟ್ಟುಕೊಂಡ .ಸೂಳೆಯೇ ಬಹುಶಃ ಇವರ ಇಷ್ಟದೇವತೆಯಾಗಿರುವದರಿಂದ ಆಕೆಯ ಊಟ ಬಟ್ಟೆಯ ಹಾಗು ಇಡ ತೊಡುವ ಸಾಹಿತ್ಯಗಳನ್ನು ಸಂಗ್ರಹಿಸುವದೇ ಅವರ ಪ್ರಾಮುಖ್ಯವಾದ ಉಪಚಾರವಾಗಿರುವದು. ಮಠಗಳಲ್ಲಿಯ ಅಯ್ಯನವರ ಸಾಲೆಗಳೆಲ್ಲ ಹಾಳಾಗಿ ಹೋದವು. ಮೊದಲು ತಮಗೇ ಓದುಬರಹ ಬರುತ್ತಿರುವದಿಲ್ಲ. ಕೆಲವರಿಗೆ ಬರುತ್ತಿದ್ದರೂ, "ಕ" "ಮ" ಓದುವ ಪೂರ್ತೆ. ಇಂತಹ ಪಂಡಿತರು ಶಾಸ್ತ್ರಓದಿ ಭಕ್ತರಿಗೆ ಬೋಧಿಸುವದೆಂದರೆ ಆಕಾಶದ ಫಲವೇ! ಮಠದೊಳಗೆ ಹಿಂದಿನವರು ಬರೆದಿಟ್ಟ ಕೋರೀಕಾಗದದ ಹೊತ್ತಿಗೆಗಳಿರುತ್ತಿದ್ದರೆ, ಅವು ತುಂಬಾ ತಪ್ಪು ತಡಿ! ಅಶುದ್ಧ!! ಆಚಾರಹೀನರು ಅನುಭವಗ್ರಂಥಗಳನ್ನು ಅರಿಯುವದು ಅಸಾಧ್ಯ. ಇತ್ತಿತ್ತ ಕೆಲವು ಸಂಸ್ಕೃತ ಅಧ್ಯಯನ ಮಾಡಿದ ಪಂಡಿತರು ಮೋಡಮುಸುಕಿದ ಆಕಾಶದೊಳಗಿನ ಚಿಕ್ಕೆಗಳಂತೆ ಹೊಳೆಯುತ್ತಿರುವರು. ಇವರಿಗೆ, "ನಾವು ವಿದ್ಯಾವಂತರು" ಎಂಬ ಮತ್ತೊಂದು ಅಭಿಮಾನವು ಆ ಕುಲಾಭಿಮಾನಕ್ಕೆ ಜೊತೆಯಾಗಿರುವದು. ವಿದ್ಯಾವಿಹೀನರ ಲಿಂಗವು ಬೋರೆಯ ಬೀಜದಷ್ಟಾದರೆ, ಇವರದು ಮಾವಿನ ಗೊರಟದಷ್ಟು! ಲಿಂಗಾನುಭವವು ಎಷ್ಟೂ ಇಲ್ಲದೆ ತಮ್ಮನ್ನು ನಂಬಿನಡೆಯುವ ಭಕ್ತರನ್ನು ಯಾವದೋ ಒಂದು ಕಲ್ಪನಾಸೃಷ್ಟಿಗೆ ಒಯ್ಯುತ್ತಿರುವರು. ಭಕ್ತರ ಅನಾಚಾರವನ್ನು ಕಂಡು ಅದನ್ನು ಎತ್ತಿ ಆಡುವ ಧೈರ್ಯವು ಇವರಲ್ಲಿಲ್ಲವೇ ಇಲ್ಲ! ಭಕ್ತರದು ತೆಗೆದರೆ ತಮ್ಮದು ಹುಳುಕು ಹೊರಬೀಳುವದು. ಅಯ್ಯಗಳಿಗೆ ಭಕ್ತರು ಹೀಗೆ ದುರ್ಮಾರ್ಗಿಯಾಗಿರುವದೇ ಬೇಕು. ಇನ್ನು ಕೆಲವು ಮಠಗಳು ತೀರ ಬುನಾದಿಯವು ಕೆಲವು ಇತ್ತಿತ್ತ ಭಕ್ತರಿಂದ ಆದವುಗಳು ಆಗಿರುವವು. ಬುನಾದಿಯ ಮಠಗಳು ಪೂರ್ವಜರ ತಪಶ್ಚ ಪಾಂಡಿತ್ಯ ಮುಂತಾದವುಗಳಿಂದ ಹೊಂದಿದಂತಹವು. ಶ್ರೀ ಮದ್ಬಸವಣ್ಣನ ಭಕ್ತಿಯೋಗಕ್ಕೆ ಒಳಪಟ್ಟು ಮಾಹೇಶಸ್ಥಲದ ಪರಿಪಾಲಕರಾದಮೇಲೆ ಲಿಂಗಾಂಗಿಧರ್ಮತತ್ವದೃಷ್ಟ್ಯಾ ಅವುಗಳ ಸ್ವಾಮಿತ್ವವು ಉಳಿಯಲಿಲ್ಲ. ಇದನ್ನು ಮರೆತು "ನಾವು ಸನದಸೀರ ಮಠದವರು; ನಮ್ಮನ್ನು ಕಿತ್ತುಹಾಕುವರಾರು" ಎಂದು ಉದ್ದಾಮವೃತ್ತಿಯುಳ್ಳವರಾಗಿರುವರು. ಸರಕಾರಿಯ ಸನದಸೀರವಾಗಿರುವ ಮಠಮಾನೆಗಳಿಗೆ ಕಾಯದೇ ಸೀರ ಸಮಾಜವು ತನ್ನ

ಅಧಿಕಾರ ನಡಿಸಲು ಬಂದೇಬರುವದು. ಆದರೆ ಸಮಾಜದಲ್ಲಿ ಅಂತಹ ಐಕ್ಯವೆಲ್ಲಿ? ಇನ್ನು ಮಠದೊಳಗಿನ ದಾಸೋಹಗಳೆಲ್ಲ ಮುರಿದು ಖಾನಾವಳಿಗಳಾಗಿವೆ. ಧನದಾಶೆಗಾಗಿ ಹೇಸದೆ ಹೆದರದೆ ಗಾಳಿಗೆ ಹಾರುವಂತಹ ರೊಟ್ಟೀ ಮಾಡಿ ಮಾರುತ್ತಿರುವರು. ಗಂಡಸರು ಹೊರಗಿನ ಹೆಂಗಸರ ರುಚಿಯುಳ್ಳವರಾದರೆ, ಮಠದೊಳಗಿನ ಹೆಂಗಸರು ಖಾನಾವಳಿಯ ನೆವದಿಂದ ಮಠಕ್ಕೆ ಊಟಕ್ಕೆ ಬಂದ ಪುರುಷರ ರುಚಿಯವರಾಗಿರುವರು. ಇವರಿಗೆ ಉಡಿಕಿಯ ಸೆರಗು ಹತ್ತಬಾರದೆಂಬದೆನೋ ಒಂದು ದೊಡ್ಡ ಅಭಿಮಾನ. ಆ ಮೂಲಕ ಗಂಡಸತ್ತ ರಂಡೆಮುಂಡೆಯರನ್ನು ಮನೆಯಲ್ಲಿಯೇ ತಪ ತೆಗೆಯಲಿಕ್ಕೆ ಇಟ್ಟುಕೊಂಡಿರುವರು. ಅದರಿಂದ ಅವರಲ್ಲಿ ಶಿಶುಹತ್ಯಾ ಭ್ರೂಣಹತ್ಯಾಕೆಲಸಗಳು ಹೆಚ್ಚು. ಕೆಲವು ತಿಂಡಿಬಡಕ ಗಂಡಸರು ಸೀರೀ ಉಡಿಸಿಕೊಂಡರೆ ಅಯ್ಯಾಚಾರವು ಹೋಗುವದೆಂದು ಹೊಸದೊಂದು ಕಾಗದಾ ಬರಿಸಿ ಇಟ್ಟುಕೊಳ್ಳುವ ದಾರಿಯನ್ನು ತೆಗೆದಿರುವರು. ಇಷ್ಟು ದುರಾಚಾರ ಸಂಪನ್ನರಾದರೂ ಮೇಲೆ "ಮೆಣಸು ಹುಳಿತರೆ ಜೋಳಾಗಬಲ್ಲುದೇ" ಎಂಬ ಮಂತ್ರವನೋದಿ ಮತ್ತೂ ತಮ್ಮ ಜಾತಿಯ ಅಭಿಮಾನವನ್ನೇ ಮೆರೆಯಿಸುತ್ತಿರುವರು. ಅನಾಚಾರವೆಂಬ ನಾಯಿಯು ಕಚ್ಚಿದ್ದನ್ನು ಮರೆತರು.

## ಪಟ್ಟಚರಾಧಿಪರು.

ಇವರು ಬಾಲಬ್ರಹ್ಮಚಾರಿಗಳಾಗಿರಬೇಕು. ಲಿಂಗಾನುಸಂಧಾನ ಧುರೀಣರಾಗಿ ಆಚಾರವೇ ಅಂಗ, ಲಿಂಗವೇ ಪ್ರಾಣವಾದವರಿರಬೇಕು. ಶಿವಯೋಗಸಂಪನ್ನತೆಯಲ್ಲಿ ಲಿಂಗವಾಗಿ ಲಿಂಗದಲ್ಲಿ ಬೆರೆಯುವದಾದ ಮೂಲಾಹಂಕಾರದಿಂದ ನಿಜಲಿಂಗ ಸೂತ್ರವನ್ನು ಭಕ್ತರಿಗೆ ಸಂಬಂಧಿಸಿ ಕಾರ್ಯಮಾಡುವ ದಲುಲರಾಗಿರಬೇಕು. ಸ್ಥಲಗೂಡಿ ಶೂನ್ಯಲಿಂಗವಾದ ನಿರಂಜನ ಜಂಗಮದಿಂದ ಈ ಸೂತ್ರವನು ಹೊಂದಿದವರಾಗಿರಬೇಕು. ನಿಜಬೋಧೆಯಿಂದ ಹೊಂದಿದ ಸೂತ್ರಸಂಬಂಧಿಕರ ಕೂಡ ಇವರ ಬಳಿಕೆಯಿರಬೇಕಲ್ಲದೆ, ಸೂತ್ರ ಸಂಬಂಧಿಕರಲ್ಲದವರನ್ನು ತಮ್ಮ ಕ್ಷೇತ್ರದಲ್ಲಿ ಬರಗೊಡಕೂಡದು. ತಾವು ಆಚಾರಪರವಶರಾಗಿ ಲಿಂಗದಲ್ಲಿ ಮನವನ್ನು ಲಯಿಸಿದ ಬಳಿಕ ಹೊನ್ನು ಹೆಣ್ಣು ಮಣ್ಣಿನಾಶೆಯು ಕನಸುಮನಸಿನಲ್ಲಿಯೂ ಸುಳಿಯಬಾರದು. ಲಿಂಗಾನುಭವದಲ್ಲಿ ಧುರಿಣರೂ, ಭಕ್ತರ ಸಂಶಯಗಳನ್ನೆಲ್ಲ ದೂರಮಾಡುವದರಲ್ಲಿ ಬಲ್ಲಿದರೂ ಆಗಿರಬೇಕು. ಯಾವ ಭಕ್ತರಿಂದಲೂ ಕಾಣಿಕಾದಿಗಳನ್ನು ಒತ್ತಾಯದಿಂದ ಎತ್ತಕೂಡದು. ಬಯಸದೆ ತಾನಾಗಿಯೇ ಬಂದ ಕಾಣಿಕಾರೂಪ ಧನವನ್ನೆಲ್ಲ ಗುರುಲಿಂಗ ಜಂಗಮದ ದಾಸೋಹಕ್ಕೆ ಸಲ್ಲುವ ಹಾಗೆ ಮಠಗಳಲ್ಲಿ ವಿದ್ಯಾರ್ಥಿಗಳಿಗಾಗಿ, ಅತಿಥಿ ಅಭ್ಯಾಗತರಿಗಾಗಿ ಸದಾದಾಸೋಹದ ವ್ಯವಸ್ಥೆಯು ಇರಬೇಕು.

ಅದೇ ಈಗಿನ ಸ್ಥಿತಿಯನ್ನು ನೋಡಿರಿ. ಗುರುಸ್ಥಲದ ಅಯ್ಯಗಳಮೇಲೆ ಇವರ ತಾನವಿರುವದರಿಂದ, ಅವರು ಗುಡಿಕಟ್ಟಿದರೆ, ಇವರು ಕಳಸ ಇಡುವರು. ಗುರುಸ್ಥಾನದವರ ಯಾವವಿಷಯದಲ್ಲಿಯೂ ಇವರ ಹೆಜ್ಜೆಯು ಹಿಂದೆ ಇರುವದಿಲ್ಲ. ಬೇಕಾದಷ್ಟು ಶೋಧಮಾಡಿದರೂ ಒಂದು ಹೆಜ್ಜೆಯು ಮುಂದಿರುವದೇ. ತಮ್ಮ ಅಣ್ಣತಮ್ಮಂದಿರ ಹೆಂಡರುಮಕ್ಕಳನ್ನೆಲ್ಲ ತಂದು ಮಠದಲ್ಲಿಟ್ಟುಕೊಂಡಿರುವರು. ಎಷ್ಟೋ ಪಟ್ಟಚರಾಧಿಪರು ತಮ್ಮತಮ್ಮ ಮಠಗಳಲ್ಲಿ ತಮಗಾಗಿ ಇಟ್ಟುಕೊಂಡ ರಂಡೆಯರು ಸಾಲದೆ, ಲೌಕಿಕಧರ್ಮವನ್ನುಸಹ ಅತಿಕ್ರಮಿಸಿ, ಆ ಅಣ್ಣತಮ್ಮಂದಿರ ಹೆಂಡರನ್ನು ಸಹ ಬಿಡದೆ, ಅವರಸಂಗದೊಳಗಿದ್ದು ತಮಗೆ ಅವರಿಂದ ಹುಟ್ಟಿದ ಮಕ್ಕಳನ್ನು ಪುತ್ರವರ್ಗದ ನೆವದಿಂದ ಪಟ್ಟಕ್ಕೆ ಬಿಡುತ್ತಿರುವರು ಈರೀತಿ ಭಂಡರಾದ ವ್ಯಕ್ತಿ ವ್ಯಕ್ತಿಯ ದೋಷಗಳನ್ನು ತೋಡುವದನ್ನು ಬಿಟ್ಟು, ಇವರು ಒಂದಾಗಿ ಸಮಾಜದಲ್ಲಿ ನಡಿಸಿರುವ ಹಾವಳಿಯಕಡೆಗೆ ತಿರುಗುವಾ. ಬ್ರಹ್ಮದ ನೆಲೆಗಂಡರಷ್ಟೇ ಬ್ರಹ್ಮಚಾರಿಯಾಗಿರುವದು? ಬಹುಶಃ ಎಲ್ಲರೂ ವಿಲಾಸವಿಭ್ರಮಗಳಲ್ಲಿ ಮುಳುಗಿದವರಾಗಿ ವಿಷಯಲಂಪಟರೂ, ಅಂಗವೇ ಲಿಂಗವಾಗಿಯುಳ್ಳವರೂ, ರಂಜನಭಕ್ತರೂ ಊದಿಸುತ್ತ ಬಾರಿಸುತ್ತ ಪಲ್ಲಕ್ಕಿಯಲ್ಲಿ ಕೂತು ಹೋಗುವದೇ ಇವರ ಅಂತಿಮ ಧ್ಯೇಯವು ಹುಲಿಯಾಗಿಮಾಡಲ್ಪಟ್ಟ ಇಲಿಗೆ ತನ್ನಹಿಂದಿನ ಇಲಿತನದ ಸುದ್ದಿಯಿಂದ ಕೆಡಕು ಅನಿಸಲಿಕ್ಕೆ ಹತ್ತಿ, ಆ ಸುದ್ದಿಗೆ ಕಾರಣವಾದ, ತನ್ನನ್ನು ಹುಲಿಯಾಗಿ ಮಾಡಿದವನನ್ನೇ ಮುರಕೊಂಡು ತಿನ್ನ ಹೋದಂತೆ, ಈ ಪಟ್ಟಚರಾಧಿಪರ ಆಟವು ನಡೆದಿರುವದು. ಶ್ರೀಮದ್ಬಸವಣ್ಣನಿಂದಲೇ ಸಮಾಜವು ಬೆಳೆದು, ಇವರ ಶಿಷ್ಯಮನೆತನದವರ ಸಂಖ್ಯೆಗಳು ದೊಡ್ಡವ ಗಿರುವವು. ಇವರಿಗೆ ಲಿಂಗಕಳೆಯು ವೇಧಿಸಿ, ಪ್ರತಿಲಿಂಗಮೂರ್ತಿಗಳಾಗಿ, ಇವರ ಮುಖಾಂತರದಿಂದ ನಿಜಸೂತ್ರವು ಸಮಾಜಕ್ಕೆ ಸಂಬಧಿಸಿದುದಾಗಿ ಕಾಯಲ್ಪಡಲೆಂದು, ಬಸವಣ್ಣನು ಸ್ಥಾಪಿಸಿದ ಶೂನ್ಯಸಿಂಹಾಸನವನ್ನೇ ಕಿತ್ತುಹಾಕಿ, ತಾವೇ ಜಗದ್ಗುರುಗಳಾಗಬೇಕೆಂಬ ಸಾಹಸವು, ಇವರನ್ನು ಶ್ರೀಮದ್ಬಸವ ಚನ್ನಬಸವಾಲ್ಲಮರ ನಿಂದಕಪ್ರಕರಣಕ್ಕೆ ಹುರಿಮಾಡಿತು. ಇದಕ್ಕೆ "ಬಸವನಿಜತತ್ವದರ್ಪಣ" ವೆಂಬ ಪುಸ್ತಕವೇ ಸಾಕ್ಷಿ! ಕುಂದಗೋಳ, ನವಲಗುಂದ, ಕಲಾದಗಿ, ಸತ್ತಿಗೇರಿ, ಬಳ್ಳಾರಿ ಮುಂತಾದ ಸ್ಥಳಗಳಲ್ಲಿ ಇವರಿಂದ ನೆರೆಯಿಸಲ್ಪಟ್ಟ ಸಭೆಗಳೇ ಸಾಕ್ಷಿ! ಆದಾಂದ ಸಮಾಜಕ್ಕೂ ತಮಗೂ ಏನು ಪರಿಣಾಮವಾದೀತೆಂಬದು ಇವರ ತಲೆಯಲ್ಲಿಯೇ ಬರಲಿಲ್ಲ. ಈ ವಾದವು ಮೊದಲು ಕಾಶಿಯಲ್ಲಿ ಹುಟ್ಟಿ, ಹಾಗೆ ಕೆಳಗೆ ಇಳಿಯುತ್ತ ಕರ್ನಾಟಕವನ್ನು ಹೊಕ್ಕಿತು. ಇವರು ಅಲ್ಲಲ್ಲಿ ನೆರೆಯಿಸಿದ ಸಭೆಗಳಲ್ಲಾದ ಠರಾವುಗಳು, ಇವರಲ್ಲಿ ಆರಂಭದಿಂದ ಇದ್ದು ಬೆಳೆಯುತ್ತಬಂದಿರುವ ಹುಳುಕನ್ನೆಲ್ಲ ಹೊರಗಿಡುವವು. ಲಿಂಗದೃಷ್ಟಿಯಿಂದ ಸಮಾಜವನ್ನು ಒಳಹೊಕ್ಕು ನೋಡಿದರೆ, ಅಂತರಂಗದ ನಿಜಸೂತ್ರಸಂಬಂಧವು ಎಲ್ಲಿಯೂ ಉಳಿದಿರುವದಿಲ್ಲ. ಇವರಮೇಲಿಟ್ಟ ಮೂಢಭಕ್ತರ ಅಂಧಶ್ರದ್ಧೆಯು ಕಾ

ರ್ಯವು, ಒಳಿತಾಗಿ ಸುಣ್ಣಬಣ್ಣದ ಗೋಡೆಗೆ ಅಂಟಿಸಿಂದ ಕಾಗದವನ್ನು ಹಚ್ಚುವ ಪ್ರಯತ್ನದಂತೆ ಆಗಿದೆ. ಅಂದರೆ ನಂಬುಗೆಯನ್ನು ಕಾಯ್ದುಕೊಳ್ಳುವ ಸಹಜಪ್ರಾದ ಅಂತಃಕರಣದ ವೃತ್ತಿಯು ಗುರುವರ್ಗದೊಳಗಿನ ಯಾರಲ್ಲಿಯೂ ಇಲ್ಲ. ಹೊರಗಿನ ಸಮಾಜ ಘಟನೆಯ (ವ್ಯವಸ್ಥೆಯು) ಸಂಬಂಧದಿಂದ ಇದ್ದ ಸೂತ್ರಾಧಿಕಾರವನ್ನು ಕಾಯ್ದುಕೊಳ್ಳುವ ಶಕ್ತಿಯು, ಸಮಾಜದ ಐಕ್ಯತೆಯಲ್ಲಿ ಶಿಥಿಲವಾಗಿ ಸರಕಾರದ ಸ್ವಾಧೀನವಾಗಿ ಬಿಟ್ಟಿರುವದು. ಏನುಮಾಡಿಸುವದನ್ನೆಲ್ಲ ತಂತ್ರೋಪಾಯಗಳಿಂದ ಸರಕಾರದಿಂದಲೇ ಮಾಡಿಸಬೇಕಾಗಿರುವದು. ಹೀಗಾಗಿ ಇವರ ಹಾಡು ತಾನಾಗಿಯೇ ತೊಗಲಬಾವಲಿಯಂತೆ ಆಗಿರುವದು. ಅದಕ್ಕಾಗಿಯೇ ಪ್ರತಿಯೊಂದು ಸಭೆಯಲ್ಲಿ ಗುರುವರ್ಗದವರ ಐಕ್ಯತೆಯನ್ನೇ ಪ್ರಲಾಪಿಸುತ್ತಿರುವರು. ಶಿಷ್ಯವರ್ಗದ ಮಠಗಳನ್ನೆಲ್ಲ ಮುರಿದು, ಪುತ್ರವರ್ಗದ ಮಠಗಳನ್ನಾಗಿಮಾಡಿಕೊಳ್ಳುವ ಪ್ರಯತ್ನವು ಬಹುದಿವಸಗಳಿಂದ ಇವರಲ್ಲಿರುವದು. ಈ ಅವಧಿಯಲ್ಲಿ ಬಹುಶಃ ಎಲ್ಲವನ್ನೂ ಸಾಧಿಸಿಕೊಂಡು ಬಿಟ್ಟರು, ತೋರಿಕೆಗೆ ಎಲ್ಲೆಲ್ಲಿಯೋ ಒಂದೆರಡು ಮಾತ್ರ ಉಳಿದಿರುವವು. ಅವನ್ನೂ ಕೂಡ ಬಡಿದು ಬಾಯಲ್ಲಿ ಹಾಕಿಕೊಳ್ಳುವ ಠರಾವುಗಳು ಆಗಹತ್ತಿರುವವು. ಒಟ್ಟಿಗೆ ಕೇವಲ ಒತ್ತಾಯದಿಂದ ಕಾಣಿಕಾರೂಪವಾಗಿ ಎತ್ತಿದ ಧನವನ್ನು ವಿಲಾಸವಿಭ್ರಮಗಳಿಗಾಗಿಯೂ, ವಿಷಯೋಪಭೋಗಕ್ಕಾಗಿಯೂ, ಮಿಕ್ಕುಳಿದುದನು ಭಕ್ತ ಭಕ್ತರಲ್ಲಿ ಭೇದವ ಹುಟ್ಟಿಸಿ ಕದನ ಬೆಳಿಸುವದಕ್ಕಾಗಿಯೂ ಉಪಯೋಗಿಸುತ್ತಿರುವರು. ನೋಡಿದಿರಾ ಭಕ್ತಬಾಂಧವರಿರಾ, ಇವರು ನಿಮ್ಮ ಬೊಟ್ಟನ್ನು ನಿಮ್ಮ ಕಣ್ಣಲ್ಲಿಯೇ ಚುಚ್ಚಿರುವದನ್ನು !

ತಾವು ಪವಿತ್ರರೂ, ಶ್ರೇಷ್ಠಜಾತಿಯವರೂ, ಅನಾದಿಯಕಾಲದಿಂದ ಪರಿಶುದ್ಧವಾದ ವೀರಶೈವರಕ್ತವನ್ನು ಕಾಯ್ದುಕೊಂಡವರೂ ಇರುವದರಿಂದ, ತಮ್ಮ ಚರಪಟ್ಟಾಧಿಕಾರಗಳಿಗೆ ಭಕ್ತರ ಮಕ್ಕಳನ್ನು ತೆಗೆದುಕೊಳ್ಳುವ ಸಾಂಪ್ರದಾಯದಿಂದ, ರಕ್ತದ ಪರಿಶುದ್ಧತ್ವವು ಕೆಟ್ಟು, ಪವಿತ್ರತೆಯು ಕುಂದಿ, ಕುಲಕ್ಕೆ ಕಲಂಕವು ಹತ್ತುವದೆಂಬ ಭ್ರಮೆಯುಳ್ಳವರಾಗಿರುವರು. ಏಕಂದರೆ ಭಕ್ತರಲ್ಲಿ ಉಡಿಕೆಯು ಸೆರಗು ಹತ್ತದ ಮನೆಗಳು ಬಹಳ ಕಡಿಮೆ. ಅರ್ಥಾತ್ ದೊರೆಯುವದಿಲ್ಲೆಂದರೂ ಸಲ್ಲುವದು. ಒಂದುವೇಳೆ ದೊರೆತರೂ ಅವರಲ್ಲಿ ಅನಾದಿಯಿಂದ ನಮ್ಮಹಾಗೆ ಶುದ್ಧ ವೀರಶೈವರಕ್ತವು ಉಳಿದಿರುವದಿಲ್ಲ. ಬಸವಣ್ಣನ ಸಂಕರಕಾರ್ಯದಿಂದ ಎಲ್ಲವೂ ಕಸರಾಮುಸರಿಯಾಗಿರುವದು. ಇದಲ್ಲದೆ ಬಣಜಿಗರ ಹಾಗು ಪಂಚಮಸಾಲಿಯವರ ಮಕ್ಕಳನ್ನು ಮಠಕ್ಕೆ ಬಿಡುವ ಸಾಂಪ್ರದಾಯದಂತೆ ಮುಂದೆ ನಡೆದಲ್ಲಿ, ಲಿಂಗವಂತರಲ್ಲಿ ಕಡಿಮೆಯ ಪ್ರತಿಯವರೆಂದು ಗಣಿಸಲ್ಪಟ್ಟಿರುವ ಕಮ್ಮಾರ, ಕುಂಬಾರ, ನೇಯುಕಾರ, ಬಣಗಾರ, ಭಟ್ಟ್ಯಾರ, ಹೂಗಾರ ಗಾಣಿಗಾರ ಮುಂತಾದ ಹೀನ ಕಸಬಿನವರು ಇತ್ತಿತ್ತ ಜಾಣರಾಗಹತ್ತಿದುದರಿಂದ, ಅವರೂ ತಮ್ಮ ಮಕ್ಕಳನ್ನು ಮಠಕ್ಕೆ ಮಾಡಿಕೊಳ್ಳಿರೆಂದು ಹಚ್ಚುವಬಾಧ ಪೀಡೆಯಿಂದ ದೂರಿರುವದು ಕಷ್ಟ,

ಇತ್ಯಾದಿ ಲಿಂಗಕ್ಷೇತ್ರ ಬಾಹ್ಯವೂ, ಶಾಸ್ತ್ರಬಾಹ್ಯವೂ ಆದ ದುಷ್ಟ ಉದ್ದೇಶಗಳನ್ನು ಕಟ್ಟಿಕೊಂಡು ಹವಣಿಸುತ್ತಿರುವರು. ಈ ಹವಣಿಕೆಯಿಂದ, ಪ್ರತಿಯೊಬ್ಬ ವೀರಶೈವನು ತನ್ನ ಶಿವಾಚಾರಸಂಪನ್ನತೆಯಿಂದ ಶಾಸ್ತ್ರಾನುಸಾರ ಸಾಂಪ್ರದಾಯಾನುಸಾರ ಗುರುಪಟ್ಟಚರಪಟ್ಟಾಧಿಕಾರಕ್ಕೂ, ನಿರಾಭಾರಿವಿರಕ್ತಾಶ್ರಮಕ್ಕೂ ಅರ್ಹನಿದ್ದ ಹಕ್ಕನ್ನು ಅಪಹರಿಸುವವರಾಗಿ ಭಕ್ತದ್ರೋಹಮಾಡುತ್ತಿರುವರು. ಇದಕ್ಕೆ ಶಿವಯೋಗಮಂದಿರವೂ ಮೂರ್ತಿಮಂತ ಉದಾಹರಣೆಯಾಗಿರುವದು. ಅಲ್ಲಿಗೆ ಹೋಗಿ ನಡೆದ ಸಂಗತಿಗಳನ್ನು ಕಣ್ಣಾರೆಕಂಡುಕೊಂಡು, ನಿಮ್ಮೊಳಗೆ ನೀವು ವಿಚಾರಿಸಿದರೆ ತಾನೇಗೊತ್ತಾಗುವದು. ಸಮಾಜದಲ್ಲಿ ಒಡಕುಹುಟ್ಟಿಸಿ, ತಮ್ಮ ಬೆನ್ನುಗಟ್ಟಿದವರನ್ನು ಮುಂದೆಮಾಡಿ ಅವರ ಸಹಾಯದಿಂದ ಶೂನ್ಯಸಿಂಹಾಸನಾಧಿಪತಿಗಳ ಜಗದ್ಗುರುತ್ವವನ್ನೇ ಕಿತ್ತುಹಾಕಬೇಕೆನ್ನುವ, ಆದಕ್ಕೆ ಕಾರಣವಾದ ಶ್ರೀಮದ್ಬಸವ ಚನ್ನಬಸವಾಲ್ಲಮರ ನಿಂದೆಯನ್ನು ಯಥೇಷ್ಟವಾಗಿ ಮಾಡಿ, ಅವರ ವಿಷಯವಾಗಿ ಭಕ್ತರಲ್ಲಿದ್ದ ಪೂಜ್ಯಭಾವವನ್ನು ಅಳುಕಿಸಿ, ತಮ್ಮದನ್ನೇ ಬೇರುಗೊಳಿಸಬೇಕೆನ್ನುವ ಇವರ ಪ್ರಯತ್ನವು ಗುರುಲಿಂಗಜಂಗಮದ ದ್ರೋಹಕ್ಕೆ ಒಳಪಡಿಸಿತು. ನಾವೇ ಗುರುಗಳು, ನಮ್ಮ ಹೊರತು ಇನ್ನಾರಿರುವರೆಂದು ಇವರಿಗೆ ಅನಿಸೀತು. ಮಾನವನಿಗೆ ಗುರುತ್ವವು ಸುಮ್ಮನೆ ಬರುವದಿಲ್ಲ! ಶ್ರೀಮದ್ಬಸವಣ್ಣನ ಭಕ್ತಿಯೋಗವು ಅಳವಡದೆ ಗುರುತ್ವವಿಲ್ಲ! ಹಾಗೆ ಹೇಳಿಕೊಳ್ಳುವವರೆಲ್ಲರೂ ನರರು! ಶ್ರೀಮಚ್ಚೆನ್ನಬಸವಣ್ಣನ ಪ್ರಸಾದೋಪಭೋಗವು ಅಂಗವಿಸದೆ ಲಿಂಗವಿಲ್ಲ; ಹಾಗಿಲ್ಲದವರೆಲ್ಲರೂ ಲಿಂಗಭವಿಗಳು! ಶ್ರೀಮದಲ್ಲಮನ ಸಾಮರಸ್ಯಯೋಗವಿಲ್ಲದೆ ಶಿವಯೋಗ ಸಂಪನ್ನತೆಯಿಲ್ಲ; ಹಾಗಿಲ್ಲದವರು ಕುಯೋಗಿಗಳಾದರಂಜನರು! ಇಂತಹ ಮಹತ್ವಾಕಾಂಕ್ಷೆಯಿಂದ ಅಂಧರಾದ ಭಕ್ತ ಗುರುಲಿಂಗಜಂಗಮದ ದ್ರೋಹಿಗಳು ಗಣಾಚಾರದೃಷ್ಟಿಯಿಂದ, ಸಮಾಜದಿಂದ ಬಹಿಷ್ಕಾರ ಶಿಕ್ಷೆಗೆ ಪಾತ್ರರಾದವರು. ಇವರನ್ನು ಬಹಿಷ್ಕರಿಸದೆ ಸುಮ್ಮನೆ ಸಮಾಜಲ್ಲಿರಗೊಡುವದು ಗಣಾಚಾರಕ್ಕೆ ವಿರುದ್ಧವಾಗಿ ಇಡೀ ಸಮಾಜವೇ ಭಕ್ತಗುರುಲಿಂಗಜಂಗಮದ ದ್ರೋಹ ಬಗೆದಂತಾಗುವದು. ಅಂದಬಳಿಕ ಇಂತಹ ದ್ರೋಹಿಗಳನ್ನು ಗೌರವಿಸಿ, ಪೂಜಾಸ್ಥಾನವನ್ನಡರಗೊಡುವದು, ಪ್ರಕಟನಾಗಿ ಲೀಲೆಯನಾಡಲು ನಿಂತ ಪ್ರಭುವಿನ ಪ್ರತ್ಯಕ್ಷತೆಯಲ್ಲಿ ಎಂತಹ ದ್ರೋಹವಾಗಿರುವದೆಂಬದನ್ನು ಮನದಂದು, ಈ ರಾಡಿಯನ್ನು ಕಿತ್ತುಹಾಕಲು ಕಂಕಣಬದ್ಧರಾಗಿ ತೀವ್ರ ಪ್ರಯತ್ನಿಸದಿದ್ದರೆ, ಲೋಕದೊಳಗೆ ನಡೆದಿರುವ ಈ ಕ್ರಾಂತಿಯ ಕಾಲದಲ್ಲಿ ನಮ್ಮ ಸಮಾಜವು ಯಾವ ಮೆಟ್ಟಿಗೆ ಇಳಿದೀತೆಂಬದನ್ನು ತಿಳಿದು, ಅತಿ ತೀವ್ರ ಎಚ್ಚರಪಡಬೇಕಾಗಿದೆ. ಅಂಧ ಶ್ರದ್ಧೆಯನ್ನು ಬಿಡಿರಿ! ಕಣ್ದೆರೆಯಿರಿ! ಈ ನಡೆಯೂ, ಔದಾಸೀನ್ಯವೂ ಶಿವನಿಂದಕ, ಶಿವಭಕ್ತನಿಂದಕ! ಲಿಂಗನಿಂದಕ!! ಜಂಗಮ ನಿಂದಕ!! ಆಗಿರುವವು ಎಚ್ಚರಿಕೆ! ಎಚ್ಚರಿಕೆ!! ಎಚ್ಚರಿಕೆ!!!

ಇನ್ನು ಕೆಳಗಿನ ಠರಾವುಗಳು ಮೇಲಿನ ಸಂಗತಿಗಳಿಗೆ ಸಾಕ್ಷಿಭೂತವಾಗಿರುವದನ್ನು ನೋಡಿರಿ!

## ಕುಂದಗೋಳದ ಠರಾವುಗಳು.

(೧) ಗುರುವರ್ಗದ ಪಟ್ಟಚರಮೂರ್ತಿಗಳು ಮೊದಲಿನಂತೆ ಭಿನ್ನವಾಗಿರದೆ, ಐಕ್ಯತೆಯಿಂದರತಕ್ಕದ್ದು.

(೨) ವಿರಕ್ತರು ಪಟ್ಟಚರಾಧಿಪರಿಗೆ ಅನುಗ್ರಹಮಾಡಲು ಅನಧಿಕಾರಿಗಳಾಗಿದ್ದರಿಂದ ಮೂಲಪೀಠಾಚಾರ್ಯರಿಂದ ಉಪದೇಶವನ್ನು ಪಡೆದು ಮುಕ್ತರಾಗಬೇಕು.

(೩) ಭಕ್ತವರ್ಗದ ಮಕ್ಕಳಿಗೆ ತಮ್ಮ ತಮ್ಮ ಅಧಿಕಾರಗಳನ್ನು ಅಂದರೆ ಪಟ್ಟಚರಾಧಿಕಾರಗಳನ್ನು ಕೊಡುವದನ್ನು ಅತ್ಯಂತವಾಗಿ ದೂರೀಕರಿಸತಕ್ಕದ್ದು.

(೪) ವೀರಶೈವರ ಶಾಸ್ತ್ರಾನುಸಾರವಾಗಿ ವಿರಕ್ತಗುರುತ್ವವನ್ನು ಕಲ್ಪಿಸಿ, ಪಟ್ಟಚರಾಧಿಪರು ಭಕ್ತಿಯಿಂದ ನಡೆಯತಕ್ಕದ್ದನ್ನು ನಿಷೇಧಿಸತಕ್ಕದ್ದು.

(೫) ಯಾವತ್ತೂ ವೀರಶೈವ ಶಿಷ್ಯಮಂಡಳಿಯಲ್ಲಿ ವಿರಕ್ತರೂ ಮಹಾಗುರುಗಳೆಂದು ಬಲವಾಗಿ ಸ್ಥಿರಪಟ್ಟಿರುವ ಅಭಿಪ್ರಾಯವನ್ನು ದೂರಮಾಡುತ್ತ, ಸರ್ವತಂದ ವೀರಶೈವರಿಗೆ ವೀರಶೈವಧರ್ಮಶಾಸ್ತ್ರಾನುಸಾರವಾಗಿ ಮಠಸ್ಥಾಪನಾಚಾರ್ಯರೇ ಮುಖ್ಯಗುರುಗಳೆಂದು ತಿಳಿಸತಕ್ಕದ್ದು.

ಮೇಲಿನ ಠರಾವುಗಳಿಗೆ ಹೋಲುವ ಠರಾವುಗಳ ಬಿಟ್ಟು ನವಲಗುಂದಲ್ಲಾದ ಹೆಚ್ಚಿನ ಠರಾವು.

(೮) ಪಂಚಾಚಾರ್ಯರ ಪುಣ್ಯತಿಥಿಯನ್ನೂ ಅವರ ಜಯಂತ್ಯುತ್ಸವವನ್ನೂ ಮಾಡತಕ್ಕದ್ದು. ಇದರಲ್ಲಿ ಬಸವಜಯಂತ್ಯುತ್ಸವದ ಸುದ್ಧಿಯೇ ಇಲ್ಲ!

## ವಿರಕ್ತರು.

ವಿರಕ್ತಮಠಗಳಿಗೆ ಯಾವ ಮರಿಗಳನ್ನೂ ಯಾರೂ ಎಂದೂ ನಿಯಮಿಸಿಕೊಳ್ಳುವದಿರುವದಿಲ್ಲ. ಐಕ್ಯಸ್ಥಲಸಂಪನ್ನರಾದ ನಿರಂಜನರು ಹಳ್ಳಿಗೋ ದು, ಪಟ್ಟಣಕ್ಕೆ ಪಂಚರಾತ್ರಿಯಂತೆ ಭಕ್ತೋದ್ಧಾರಾರ್ಥವಾಗಿ ಮಾಡುತ್ತಿರುವ ಸಂಚಾರದಲ್ಲಿ, ತ್ರಿಕಾಲಲಿಂಗಪೂಜೆಗೆ ಏನೂ ಕೊರತೆಯುಂಟಾಗದಂತೆ, ಸರ್ವ ವ್ಯವಸ್ಥೆಯನ್ನು ಕಾಯ್ದುಕೊಳ್ಳುವ, ಹೆಂಡರಿಲ್ಲದ ಸೇವಕರನ್ನು ಮಾತ್ರ ನಿಯಮಿಸಿ ಅವರ ಮುಖದಿಂದ ಆಯಾ ಮಠಗಳ ವ್ಯವಸ್ಥೆಯನ್ನು ದೈವದವರು ಕಾಯ್ದುಕೊಳ್ಳುವದಿರುವದು. ಒಂದುವೇಳೆ ಆಯಾಮಠಗಳಲ್ಲಿ ವಿರಕ್ತಸ್ವಾಮಿಗಳು ಸ್ಥಿರವಾಗಿ ವಾಸಿಸುವದಾದರೆ, ಮುಖ್ಯವಿಂದ ಸಂಚಾರಮಾಡ

ಲಾರದ ಸ್ವಾಮಿಗಳು ಮಾತ್ರ ತಮಗೆ ಸರಿಗಂಡ ಸ್ಥಾನದಲ್ಲಿರಬಹುದು. ಆಯಾ ಊರವರು ಅಂತಹ ಮುಪ್ಪಿನ ಸ್ವಾಮಿಗಳ ಸೇವೆಯನ್ನು ಅವರು ದೇಹಗಳಿಡುವ ವರೆಗೆ ಮಾಡಬೇಕಾಗುವದು. ಉತ್ಪನ್ನವು ಹೆಚ್ಚಿರುತ್ತಿದ್ದ ಪ್ರತಿಯೊಂದು ಮಠದಲ್ಲಿ, ಕಾಲೇಜಗಳಂತಹ ಉಚ್ಚಪ್ರತಿಯ ಧಾರ್ಮಿಕ ಶಿಕ್ಷಣದ ಸಂಸ್ಥೆಗಳಿರತಕ್ಕದ್ದು.

ಆದೇ ಈಗಿನ ಸ್ಥಿತಿಯನ್ನು ನೋಡಿರಿ. ಬಹುಶಃ ಇವರು ಗೃಹಸ್ಥರಿಗಿಂತಲೂ ಜಡವಾಗಿರುವರು. ಸಂಚಾರದ ಸುದ್ದಿಯು ಇವರ ಕನಸುಮನಸಿನಲ್ಲಿಯೂ ಸಹ ಇರುವದಿಲ್ಲ. ಒಬ್ಬೊಬ್ಬರು ಒಂದೊಂದು ಮಠಗಳನ್ನು ಹಿಡಕೊಂಡು ಭಕ್ತರ ಹೆಂಡರಲ್ಲಿ ಕಳವಿನಿಂದ ಸಂಗಮಾಡಿ, ತಮ್ಮಿಂದ ಹುಟ್ಟಿದ ಮಕ್ಕಳನ್ನು ಮಾರಿಮಾಡಿಕೊಳ್ಳುತ್ತ ನಡೆದಿರುವರು. ಇವರು ವಿಕಾರಿಗಳಾದ ಹೆಂಗಳೆಯರ ತಂಡಕ್ಕೆ ಗುಂಡರಗೂಳಿಗಳಾಗಿರುವರು. ಬಹುಶಃ ವಿರಕ್ತರುಮೊದಲುಗೊಂಡು ಆಯ್ಯಗಳೆಲ್ಲರೂ ನೆಗರಿಯ ಬೊಜ್ಜಿಯ ಸೇವಕರಾಗಿರುವರು. ವೈದ್ಯರಿಗೂ ಇವರಿಗೂ ಅತಿ ಸಲುಗೆಯ ಗುಪ್ತವ್ಯವಹಾರವಿರುವದು. ಇವರಿಗೆ ಒಳಗಿನದೊಂದು (ಮನೋಹರವಾದ ಗುಪ್ತ) ಪೋಷಾಕವು ಒಳ್ಳೇವಿಟಗಾರರನ್ನು ನಾಚಿಸುವಂತಹದ್ದಿರುವದು. ಹೊರಗಿನ ಪೋಷಾಕವೆಂದರೆ ಕೇವಿಯ ಕಪನೆಯ ಮೇಲೆ ಕೇವಿಯ ಎದ್ದಿದ ಕರವತಕಾಟಿಯ ಧೋತರವು; ತಲೆಯಮೇಲೆ ಜರಕಾಟಿಯ ರೇಶ್ಮಿಯ ಮದರಿಯ ರುಮಾಲವು; ಕಾಲಲ್ಲಿ ಅಂದವಾದ ಕಡಾವಿಗೆಗಳ ಜೋಡು; ಕೈಯಲ್ಲಿ ಮಿನುಗುವ ಬೆತ್ತದಕೋಲು; ಹಣೆಯಮೇಲೆ ಪೂಸಿದ ಢಾಳವಾದ ವಿಭೂತಿಯು, ಕೊರಳಲ್ಲಿ ದೊಡ್ಡ ದೊಡ್ಡ ಮಣಿಗಳನ್ನು ಆರಿಸಿ ಮಾಡಿದ ರುದ್ರಾಕ್ಷಮಾಲಾ; " ಶಿವ ಶಿವಾ " ಎಂದು ಕೋಲು ಊರುತ್ತ, ಅಂಧಭಕ್ತರ ಎದೆಯು ಇಬ್ಬಾಗವಾಗುವಂತೆ ಅಬ್ಬರಿಸುತ್ತ ನಡಿದರೆ, ತೋರುವ ಬೀದಿಯ ಚಲ್ವಿಕೆಯನ್ನು ಬಣ್ಣಿಸಲಳವಲ್ಲ! ಇನ್ನು ಕೆಲವರು ಹೆಣ್ಣುಮಕ್ಕಳ ಮೋರೆಯನ್ನು ನೋಡಬಾರದೆಂದು ಘೋಷಾ (ಬುರುಕಿ) ದ ಹೆಣ್ಣುಮಕ್ಕಳಂತೆ ಪರದೆಯಲ್ಲಿರುವರು. ಇದು ಪಂಜರದಲ್ಲಿಟ್ಟ ಹುಲಿಯ ಸಾಧುತನವಲ್ಲವೇ! ಇಂತಹ ಅಪಕ್ವಸಾಧಕದೆಸೆಯಲ್ಲಿ ಮಠ ವಿಡಿದು ಅಧಿಕಾರಸಂಪನ್ನರಾಗುವದೇ ತಪ್ಪು! .ಸಂಚಾರಕಷ್ಟಕ್ಕೆ ಹೆದರಿ, ಇಂತಹ ಗುಪ್ತಕಳ್ಳವೃತವನಾಚರಿಸುವದೇ ತಪ್ಪು! ಲೋಕವನ್ನು ಉದ್ಧರಿಸಲು ಒಂದೇ ಒಂದು ಸಹಜ ಶೂನ್ಯಲಿಂಗಸಿದ್ಧವಾದ ಮೂರ್ತಿಯು ಸಾಲದೇ? ಮಠಕೊಬ್ಬ ವಿರಕ್ತನು ಇರಬೇಕೆಂಬ ನಿಯಮವೆಲ್ಲಿಯದು! ಇದ್ದರೂ ಅಂತಹ ಸಹಜ ಶೂನ್ಯಲಿಂಗ ಸಂಪಾದನ ಸ್ಥಳವು ಅಳವಡುವವರೆಗೆ ಶಿವಯೋಗಧುರಂಧರರಾಗಿ ಸಂಚಾರದಲ್ಲಿರತಕ್ಕದ್ದು.

## ಇತರ ಅಯ್ಯಗಳು

ಮೇಲೆ ವಿವರಿಸಿದ ಆಯ್ಯಗಳೆಲ್ಲರೂ ಅಧಿಕಾರವುಳ್ಳವರಾಗಿ ಧರ್ಮಸರಕಾರದ ಅಂಗದಲ್ಲಿ ಬರುವರು. ಗುರುಸ್ಥಳದ ಅಯ್ಯಗಳಲ್ಲಿ ಅಧಿಕಾರವಿಲ್ಲದೆ ಕೆಲವು

ಗಂಡುಜೋಳಿಗೆಯುವರಿರುವರು. ಇವರಿಗೆ ಹಕ್ಕುಬಾಬುಗಳೇನು ಇರತಿರುವದಿಲ್ಲ. ಇಪ್ಪರೆ ಊರೊಳಗೆ ಒಂದೆರಡು ಮುಗಿಸುವ ಮನೆಗಳು ಇರುತ್ತಿರುವವು. ಇಲ್ಲದಿದ್ದರೆ ಅವೂ ಇಲ್ಲ. ಆದರಿಂದ ಇವರ ಗೌರವವು ಹೆಚ್ಚಿಗಿರುತಿರುವದಿಲ್ಲ. ಕೇವಲ ಭಿಕ್ಷಾಟನೆಯ ಮೇಲೆಯೇ ಇವರ ಉಪಜೀವನವಿರುವದು. ಆದರಿಂದ ಇವರು ಹಕ್ಕು ಬಾಬುಗಳುಳ್ಳ ಅಯ್ಯಗಳಷ್ಟು ಊರ್ಮಠರಲ್ಲ. ಇದ್ದರೆ ಇವರೊಳಗೇ ತಮ್ಮ ನೆರಳಗೆ ಅಂಜಿ ಬಾಳ್ವೆಮಾಡುವವರು ಹೆಚ್ಚಿಗೆ ದೊರೆಯುವ ಸಂಭವವುಂಟು. ಗೌರವವುಳ್ಳ ಮಠಪಯ್ಯಗಳು ಪ್ರಸಂಗಬಿದ್ದಲ್ಲಿ ಇವರ ಹೆಣ್ಣುಗಳನ್ನು ತೆಗೆದುಕೊಳ್ಳುತ್ತಿರುವರು. ಬಹುಶಃ ತಮ್ಮ ಹೆಣ್ಣುಗಳನ್ನು ಕೊಡುತ್ತಿರುವದಿಲ್ಲ. ಇಷ್ಟೇ ಅಲ್ಲ. "ನಾವೇಕೆ ಗಂಡುಜೋಳಿಗೆಯ ಅಯ್ಯಗಳಿಗೆ ಕೊಡೋಣ" ವೆಂದು ಅನ್ನುತ್ತಿರುವರು. ಸಾಮಾನ್ಯವಾಗಿ ಇಡೀ ಸಮಾಜದಲ್ಲಿದ್ದ ಧಿಕ್ಕಾರದ ಆಘಾತವು ಇವರ ಮೇಲೆಯೂ ಆಗಿರುವದು.

ಇನ್ನು ಕಾಯಕದವರೆಂಬ ಮತ್ತೊಂದು ವರ್ಗವಿರುವದು. ಅವರಿಗೆ ಅಯ್ಯಗಳೆಂದೆನ್ನುತ್ತಿದ್ದರೂ, ಪೂಜಾಪುನಸ್ಕಾರಾದಿಗಳೇನೂ ಇರುತಿರುವದಿಲ್ಲ. ಇವರನ್ನೂ, ಮಠಪತಿ ಗಣಾಚಾರಿ ಪೂಜಾರಿಗಳನ್ನೂ ಸಮಾಜದವರು ಕಡಿಮೆಯ ಪ್ರತಿಯವರೆಂದು ಬಗೆಯುತ್ತಿರುವರು. ಬಹುಶಃ ಈ ತಂಡವು ಗುರುಸ್ಥಲದ ಮನೆತನದಲ್ಲಿ ರೀತಿಗೆಟ್ಟ ಗಂಡುಹೆಣ್ಣಿನ ರಕ್ತರೇತಸ್ಸಿನಿಂದ ಉಂಟಾಗಿರುವದು. ಇವರಲ್ಲಿ ಉಡಿಕೆಯ ಬಳಿಕೆಯು ಹೆಚ್ಚು. ಗುರುಸ್ಥಲದವರಲ್ಲಿ ದೂಷಿತವಾದ ರಕ್ತರೇತಸ್ಸಿನವರಾಗಬಾರದೆಂದು ಈ ವರ್ಗದ ವ್ಯವಸ್ಥೆಯಿರುವದು. ಗುರುಸ್ಥಲದವರು ರಂಡೆಯರಾದ (ಬಹುಶಃ ಕೆಟ್ಟು ಮುರಾಬಟ್ಟೆಯಾದ ಬಳಿಕ ಹಿಡಿಯುವದಾಗದೆ,) ತಮ್ಮ ಹೆಣ್ಣುಗಳನ್ನು ಇವರಿಗೆ ಸೀರೆ ಉಡಿಸಿಕೊಡುತ್ತಿರುವರು. ಪಂಚಮಹಾಪಾತಕಗಳಿಗೊಳಪಟ್ಟು ಪೂಜೆಯನ್ನು ಕಳಕೊಂಡ ಬಳಿಕ ಗಂಡಸರಾದರೂ ಈ ವರ್ಗದಲ್ಲಿ ಗಣಿಸಲ್ಪಡುವರು. ಆದುದರಿಂದ ಈ ವರ್ಗದ ಜನರಲ್ಲಿ ಅತ್ಯಾಚಾರಗಳು ಹೆಚ್ಚುಪ್ರಮಾಣದಿಂದ ಆಗುತ್ತಿರುವವು. ಇವುಗಳನ್ನು ಬಣ್ಣಿಸಲು ಈ ಚಿಕ್ಕಪುಸ್ತಕದಲ್ಲಿ ಅನುವು ದೊರೆಯಲಾರದು. ಆದರೂ ಇವರಸ್ಥಿತಿಯು ಗೊತ್ತಾಗಲೆಂದು ಕೆಳಗೆ ಸಾಕ್ಷಿಗಳನ್ನು ಕೊಟ್ಟಿರುವದು.

ಕಾಯಕದಯ್ಯಗಳನ್ನು ಮನೆಗೆ ಊಟಕ್ಕೆ ಕರೆದರೆ, ಅವರು ಉಂಡು ಹೋಗುವ ವರೆಗೆ ಒಂದಾಳು ಕಾಯುತ್ತಿರುವದೇ ಸಾಕ್ಷಿ. ಎಷ್ಟೋ ಜೋಳ್ಯಾ ಭಕ್ತರು ಅವರನ್ನು ಊಟಕ್ಕೆ ಕರೆದು ತಮ್ಮ ಮನೆಯೊಳಗಿನ ಎಷ್ಟೆಷ್ಟೋ ಸಾಮಾನುಗಳನ್ನು ಕಳಕೊಳ್ಳುತ್ತಿರುವದೇ ಸಾಕ್ಷಿ. ಪ್ರಸಂಗವು ದೊರೆತಲ್ಲಿ ಎಷ್ಟೋ ಸ್ತ್ರೀಯರು ಇವರಿಂದ ಮಾನಭಂಗಿತರಾದುದೇ ಸಾಕ್ಷಿ. ಎಷ್ಟೋ ಜನರು ಇವರಿಂದ ಜೀವಕ್ಕೂ ಸಹಾ ಎರವಾದುದೇ ಸಾಕ್ಷಿ. ಈ ಜನರ ಸಂಪನ್ನಗಿರಿಗಾಗಿ ಶ್ರೀ ಉಳವಿಯ ಚಾ

ತ್ರೆಯಲ್ಲಿ ವರ್ಷಾವರ್ಷಾ ಮಾಡುತ್ತಿರುವ ಪೋಲೀಸರಖವಾಲೆಯೇ ಸಾಕ್ಷಿ. ಊರಮೇಲಿನ ಊಟ ನೀರಮೇಲಿನ ಚಲ್ಲಾಟವಾಗಿ ಸಹಜ ಹೊಟ್ಟೆಯು ಹೊರಗೆ ಹೋಗುತ್ತಿರುವದರಿಂದ, ಕಾಯಕದಿಂದ ಬಂದ ಹೆಚ್ಚಿನ ದುಡ್ಡಿನ ದುರ್ವ್ಯಯಕ್ಕೆ ಅವರ ಭಂಗಿಪಾನ ರಂಡಭಾಜಿತನ ಇತ್ಯಾದಿ ದುರ್ವ್ಯಾಪಾರಗಳೇ ಸಾ,,!

ಅಯ್ಯಗಳ ವಿಷಯವಾಗಿ ಮೇಲೆ ಬೇರೆಬೇರೆಯಾಗಿ ಹೇಳಿದ ಸಂಗತಿಗಳ ಸಿಂಹಾವಲೋಕನವ ಮಾಡಿ ಮುಂದೆ ಸಾಗುವಾ. ಲೋಕದಲ್ಲಿ ಇಷ್ಟು ಬೆಳೆದು ನಿಂತ ವಿಕಾರಕ್ಕೆ ಕಾರಣವಾವುದೆಂದು ವಿಚಾರಿಸಿದರೆ, ಹೊನ್ನು ಹೆಣ್ಣು ಮಣ್ಣುಗಳೆಂದು ತಟ್ಟನೆ ಉತ್ತರವು ದೊರೆಯುವದು. ಶ್ರೀಮದ್ಬಸವಣ್ಣನು ಹೊನ್ನಿನ ವಿಕಾರಕ್ಕೆ ಸಮಾಜವು ಒಳಪಡದ ಹಾಗೆ ಕಾಯಕಗಳ ವ್ಯವಸ್ಥೆಯನ್ನು ಏರ್ಪಡಿಸಿ, ಪರಧನ–ಪರಸ್ತ್ರೀಯರಿಗೆಳೆಸಬಾರದೆಂಬದನ್ನು ಮುಂದೆಮಾಡಿ ಕಟ್ಟುಮಾಡಿಕೊಟ್ಟನು. ದೇಶದಲ್ಲಿ ಸಾಮಾನ್ಯವಾಗಿ ಆಗಿದ್ದ ಉದ್ಯೋಗಕ್ರಾಂತಿಯು, ರೀತಿಗೆಟ್ಟು ವಿಕಾರಕ್ಕೊಳಪಟ್ಟ ಈ ಸಮಾಜದ ಮೇಲೆಯೂ ತನ್ನ ಛಾಪವನ್ನು ಹಾಕಿತು. ಅದರಿಂದ ಕಾಯಕಗಳು ಕೆಟ್ಟು ಕಸಬುಗಳಾಗಿ ಉದ್ಯೋಗವಿಲ್ಲದೆ ಜನರು ಅನ್ನನ್ನ ನೀರು ನೀರು ಅನ್ನುತ್ತ ತಿರುಗುವರಾದಮೇಲೆ ಹೊನ್ನಿನ ವಿಷಯಕವಾದ ಕಟ್ಟು ಹರಿದು, ಧನಲೋಭವು ಸಮಾಜದಲ್ಲಿ ಹರಡಿಕೊಂಡಿತು. ಆದರೂ ಗುರುವರ್ಗದ ವಿಷಯವಾಗಿ ಭಕ್ತರು ಹೊತ್ತ ಜವಾಬದಾರಿಯನ್ನು ಇಂದಿಗೂ ಸಾಗಿಸುತ್ತ ಬಂದಿರುವರು. ಗುರುವರ್ಗದವರು ಮಾತ್ರ ತಮ್ಮ ಹಾದೀ ತಪ್ಪಿ, ಬಡ್ಡೀಬಾಚಿ ವ್ಯವಹಾರವನ್ನು ಬೆಳಿಸಿ, ಭಕ್ತರ ಧನದಿಂದ ಸಿರಿವಂತರಾಗಿರುವರು ಪುನರ್ವಿವಾಹಕ್ಕೆ ಸಮಾಜದಲ್ಲಿ ಅನುವು ಇರಬೇಕು! ಇರಬಾರದು !! ಅವಿದ್ಧಯೋನಿಯವರ ( ಸಂಸಾರಸುಖದ ಸುದ್ದಿಯು ಎಷ್ಟೂ ಇಲ್ಲದವರ ) ಪೂರ್ತೇ ಇದ್ದು ವಿದ್ಧಯೋನಿಯವರ ( ಸಂಸಾರಸುಖ ಉಂಡವರ ) ವಿಷಯವಾಗಿ ಪ್ರತಿಬಂಧವಿರಬೇಕು. ಒಬ್ಬರಬಿಟ್ಟು ಇಬ್ಬರ ಭೋಗಸುಖಕ್ಕೆ ಒಳಪಟ್ಟ ಸ್ತ್ರೀಯರು ಪುರುಷರ ನಿಲುವು ಗಂಡು , ಹಸರು ಅಡವೀ ಕಂಡ ಆಕಳು ತುಂಬಾ ಹರಿದಾಡುವಂತೆ ಅತಿ ಚಂಚಲೆಯರಾಗುವರು. ಇಂತಹವರ ಯೋಗದಿಂದಲೇ ಬಹುದಿವಸಗಳಿಂದ ಕಾಯ್ದುಕೊಂಡುಬಂದ ಶುದ್ಧಿಯ ರಕ್ತವು ಕೆಟ್ಟು, ಮಿಶ್ರರಕ್ತವಾಗಿ ಸಮಾಜವೆಲ್ಲವೂ ವಿಕಾರಮಯವಾಗುವದು. ಪಶುವರ್ತನವ ಬಿಟ್ಟು, ಮಂಗಗಳಂತೆ ರೀತಿಗೆಟ್ಟು ತನ್ನ ಒಬ್ಬಳೇ ಹೆಂಡತಿಯಲ್ಲಿ ಭೋಗಾಸಕ್ತನಾದವನೂ ಕೂಡ ವಿಷಯಲಂಪಟನಾಗುತ್ತಿರುವನು. ಅಂತೇ ಲಗ್ನಕಾಲದಲ್ಲಿ " ಶುಭಮುಹೂರ್ತೇ ಸಾವಧಾನ " ಎಂದು ಎಚ್ಚರಿಸಿ ಅಕ್ಕೀಕಾಳು ಹಾಕುತ್ತಿರುವರು. ಹೀಗಿದ್ದು ಪರಸ್ತ್ರೀರತನಾಗಲು ಅವನ ಚಂಚಲವೃತ್ತಿಗೆ ಎಣೆಯೇ ಇಲ್ಲ. ಎಷ್ಟೋ ಜನರು ಮದುವೆಯ ಹೆಂಡತಿಯ ಅರುವಿಲ್ಲದೆ ಕೇವಲ ಪರಸ್ತ್ರೀಯರ ನಾದದಲ್ಲಿಯೇ ಮುಳುಗಿಬಿಟ್ಟಿರುವರು. ಇಂತಹ ಗಂಡಹೆಂಡರಿಗೆ ಮಠಮಾನೆಗಳಲ್ಲಿ ಅನುವಿದ್ದ ಬಳಿಕ

ಮಠದಯ್ಯಗಳಿಗೂ ಮಠಪತಿಗಣಾಚಾರಿಗಳಿಗೂ ಏನು ಹೆಚ್ಚುಗಾರಿಕೆ! ಮಠ
ದಯ್ಯನು ಪೂಜೆಗೆ ಹೇಗೆ ಅಧಿಕಾರಿಯಾಗಿ ಉಳಿದನು? ಇಂತಹ ಅನಾಚಾರಿಯೂ
ಅತ್ಯಾಚಾರಿಯೂ ಪೂಜ್ಯನೆಂದು ಸಿದ್ಧಿಸಲಿಕ್ಕೆ ಆಧಾರಗಳೇನೂ ಇಲ್ಲ. ಅಂಧಶ್ರ
ದ್ಧೆಯು ರೂಢಿಯೇ ಬಲವಾಗಿರುವದೆಂದು ನಂಬಿ ನಡೆಯಲು ಅಂತಹ ರಕ್ತಶುದ್ಧಿ
ಯೂ ಸಹ ಉಳಿದಿರುವದಿಲ್ಲ. ಈ ಮಾತಿಗೆ ಎಲ್ಲೆಲ್ಲಿಯ ಡಾಕ್ಟರರು ಫಿರಂಗಿ
ರೋಗವು ( ಉಷ್ಣರೋಗವು ) ಲೋಕವನ್ನೆಲ್ಲ ಆಕ್ರಮಿಸಿ ವ್ಯಾಪಿಸಿಕೊಂಡಿರುವದೆಂದು
ಅಭಿಪ್ರಾಯವನ್ನು ವ್ಯಕ್ತಪಡಿಸುತ್ತಿರುವದೇ ಸಾಕ್ಷಿ. ಜಂಗಮರ ದೂಷಿತವಾದ
ರಕ್ತರೇತಸ್ಸಿನಿಂದ ಉತ್ಪತ್ತಿಯಾದ ಮಠಪತಿಯು, ಯಾವಕಾರಣಗಳ ಮೂಲಕ
ಪೂಜಾವಿಹೀನನೋ, ಅದೇ ಕಾರಣಗಳ ಮೂಲಕ ಮಠದಯ್ಯಗಳೂ ಈಗ ತೀರ
ಅಪೂಜ್ಯರಾಗಿರುವರು. ಅಂಧಶ್ರದ್ಧೆಯ ಬಿಟ್ಟು ಕಣ್ದೆರೆದು ಈಗಿನ ಸ್ಥಿತಿಯನ್ನು
ಮನದಂದು, ಪವಿತ್ರವಾದ ಸಮರಸಕ್ರಿಯೆಗೆ ಅನಧಿಕಾರಿಗಳ ಈ ದುಷ್ಟ ಪೂಜೆ
ಯನ್ನು ಎಲ್ಲೆಲ್ಲೆಲ್ಲ ನಿಲ್ಲಿಸಿ ಬಿಡುವಹಾಗೆ ವಿವೇಕಿಗಳಾದ ಭಕ್ತೋತ್ತಮರು ನಿರ್ಣ
ಯಿಸಿ, ಆ ಬಹಿಷ್ಕಾರವನ್ನು ಕೂಡಲೆ ಬಳಿಕೆಯಲ್ಲಿ ತರುವ ಧೀರರಾಗಲಿಕ್ಕೇಬೇಕಾ
ಗಿದೆ. ಉಡಿಕಿಯ ಬಳಿಕೆಯೆಂದರೇನು ? ಸಮಾಜದ ಅನುಮತಿಯಿಂದ ವ್ಯಭಿ
ಚಾರ ಮಾಡೋಣವಲ್ಲವೇ? ಅನುಮತಿಯಿಂದ ಮಾಡುವವರಿಗಿಂತ ಈ ಕದ್ದುಮು
ಚ್ಚಿಮಾಡುವವರು ಪುಜ್ಯರೇ ? ಏನು ವ್ಯಾಪಕದೃಷ್ಟಿಯಿದು? ಇಂತಹ ಮಠದಯ್ಯ
ಗಳ ಮೇಲುಮಾಡಿ ಕಾರ್ಯನೇರಿಗಳಲ್ಲಿ ಅಂಧದೃಷ್ಟಿಯಿಂದ ಮಾಡುವ ಸೆಟ್ಟಸಾ
ವುಕಾರರ ಅಧರ್ಮಕಾರ್ಯಗಳನ್ನು ಬಣ್ಣಿಸಲಳವಲ್ಲ

**ಈ ದೋಷಗಳು ಸಮಾಜದಲ್ಲಿ ಹೇಗೆ ಸೇರಿದವು ಮತ್ತು ಬೆಳೆದವು**

ಗುರುವು ಮಾಂಸಪಿಂಡವಳಿದು ಮಂತ್ರಪಿಂಡಮಾಡಿ, ಇಷ್ಟಲಿಂಗವ ಕರುಣಿಸಿ
ಅಷ್ಟಾವರಣದ ಬಳಿಕೆಯಲ್ಲಿ ಸಮಾವೇಶಮಾಡಿಕೊಂಡ, ಬಳಿಕ ಹಿಂದಿನ ಕುಲ
ಜಾತಿಗಳೇನು ಉಳಿಯುವದಿಲ್ಲ- ಎಲ್ಲರೂ ಸರಿಸಮಾನರು. ಹೀಗಿದ್ದು ಶುದ್ಧಾಶುದ
ರಕ್ತವಿಚಾರಕ್ಕೆ ಸಮಾಜದಲ್ಲಿ ಆಸ್ಪದವಿಟ್ಟಿರುವದು, ಬಹುಕಾಲದಿಂದ ಆಚಾ
ರ್ಯಪರಂಪರೆಯಲ್ಲಿ ವ್ಯಾಪಿಸಿಕೊಂಡ ಸ್ವಭಾವಧರ್ಮದ ಕಾರ್ಯಪ್ರಭಾವವಾಗಿರು
ವದು. ಶ್ರೀಮದ್ಬಸವಾದಿಪ್ರಮಥರು ಈ ಸೃಷ್ಟಿಯ ಕಾರ್ಯದಲ್ಲಿ ಸಹಜವಾಗಿದ್ದ
ಶಿವಧರ್ಮದ ಅನುಭವಗೊಂಡು, ಮನುಷ್ಯಮಾತ್ರರೆಲ್ಲರೂ ಲಿಂಗವಧರಿಸಿ ಲಿಂಗ
ನಿಷ್ಠಾನಿರತರಾಗಿ ಆಚರಿಸಲಿಕ್ಕೆ ತಕ್ಕವರಿರುವರೆಂಬೂ, ಈ ಆಚರಣೆಗೆ ಯಾವ
ವರ್ಣಕುಲಜಾತಿಗಳು ಅಡ್ಡಬರಲಾರವೆಂದೂ ನಿಸ್ಸೀಮ ಭಕ್ತಿಯಿಂದ ಕೂಡಿಕೊಂ
ಡು ಆಚರಿಸುವವರಾದರೆ, ಅವರ ಹಿಂದಿನ ಕುಲಜಾತಿವರ್ಣಧರ್ಮಆಶ್ರ
ಮಗಳೇನು ಉಳಿಯುವದಿಲ್ಲವೆಂದೂ ತೋರಿಸಲಿಕ್ಕೆ, ಹೊಲಗೇರಿಯಲ್ಲಿಯೂ
ಹೊಸ ಜನ್ಮವೆತ್ತಿ ಆಚರಿಸಿ ಕೂಡಿಕೊಂಡು ಪ್ರಯೋಗಿಸಿದಾಗ್ಯೂ, ಸೃಷ್ಟಿಯ ಧರ್ಮ

ದ ವಿರುದ್ಧವಾಗಿ ಕಾಯ್ದುಕೊಳ್ಳಲಿಕ್ಕಾಗದ ಜಡದೇಹದ ಶುದ್ಧಿಯ ಭ್ರಾಂತಿಯು ಆಚಾರ್ಯರಲ್ಲಿಯೂ ಕೂಡ ಬಿಡದಿರುವದನ್ನು ಕಂಡು, ಅದರ ಫಲವನ್ನು ಉಂಡು ಹದಗೊಳ್ಳಲೆಂದು ಅವರ ರಕ್ತಶುದ್ಧಿಯ ತಾರತಮ್ಯದಲ್ಲಿ ಸಮಾಜಸೂತ್ರವನೆಲ್ಲ ಅವರಿಗೊಪ್ಪಿಸಿ, ವೈಮರೆಯಾದರು. ಆಚಾರವು ಆಳವಟ್ಟು ಅಂಗದೋಷವು ಹಿಂಗದಿದ್ದರೆ, ಲಿಂಗದ ನೆಲೆಯು ಯಾರಿಗೂ ನಿಲಕಲಾರದು. ರಕ್ತಶುದ್ಧಿಯ ತಾರತಮ್ಯದ ಭ್ರಾಂತಿಯ ದೋಷವು ಆಚಾರ್ಯರಿಗೂ ಹಿಂಗದ ಬಳಿಕ, ಯಾರಿಗೂ ಲಿಂಗದ ನೆಲೆಯು ನಿಲುಕದೆ ಹೋಗಿ, ಲಿಂಗಕಳೆಯು ಆ ವೈಮರೆಯಾದ ಶಿವಶರಣರ ಕೂಡ ಹೋದಂತಾಯಿತು. ಆಚಾರ್ಯರು ವೀರಶೈವಶಾಸ್ತ್ರದದೃಷ್ಟಿಯ ವೀರಶೈವರಲ್ಲಿ ನಿರಾಭಾರಿಸಾಮಾನ್ಯಾದಿಭೇದಗಳಿದ್ದರೂ, ಶ್ರೀಮದ್ಬಸವಣ್ಣನಿಂದ ನಿರ್ಮಿಸಲ್ಪಟ್ಟ ವೀರಶೈವಲಿಂಗವಂತರಲ್ಲಿ ಇಂತಿಂತಹ ವೀರಶೈವರೆಂದು ಭೇದವನ್ನಾಡಿ ಹೇಳದೆ ಆಯಾ ವೀರಶೈವರ ಲಕ್ಷಣಗಳನ್ನು ಮಾತ್ರ ಹೇಳುತ್ತ ಬಂದರು. ಆದರೂ ಕಾರ್ಯದಲ್ಲಿ ತಾರತಮ್ಯದೃಷ್ಟಿಯನ್ನೇನು ಬಿಡಲಿಲ್ಲ. ಇಂತಿಂತಹವರು ಧರ್ಮಸರಕಾರದ ಮನೆತನದವರೆಂದು ಗೊತ್ತುಪಡಿಸಿ, ಎಲ್ಲರಿಗೂ ರಕ್ತಶುದ್ಧಿಯ ನಿಯಮಗಳನ್ನು ಹಾಕಿಕೊಟ್ಟು, ತಮ್ಮ ಅಂಗಕ್ಕೆ ಒಳಪಟ್ಟವರ ಪೂರ್ತಿ ದೃಷ್ಟಿಯುಳ್ಳವರಾಗಿ ಉಳಿದವರಿಗೆ ಅವರವರ ಇಚ್ಛೆಯಮೇರೆಗೆ ಅನುವರ್ತಿಸಲು ಅನುವುಕೊಟ್ಟು ಪಕ್ಷಪಾತದಿಂದ ಆಚರಿಸುತ್ತ ಬಂದುದು ಸ್ಪಷ್ಟವಾಗುವದು. ಈ ನಾತಿಗೆ ಸಮಾಜವನ್ನು ಒಳಹೊಕ್ಕು ನೋಡಿದರೆ, ನಾವು ಉಡಿಕಿಯಬಳಿಕೆಯವರಲ್ಲೆಂದು ಹೇಳಿಕೊಳ್ಳುವ ಮನೆತನಗಳು ತೀರ ತುಸುವಾಗಿ, ಅವುಗಳಿಗೆ ತಪ್ಪದೆ ಏನಾದರೂ ಹಕ್ಕುಬಾಬು ಇದ್ದುದು ಕಂಡುಬರುವದೇ ಸಾಕ್ಷಿ. ಇವರು ಪಕ್ಷಪಾತ ಮಾಡಿದರೆ, ಸೃಷ್ಟಿಯ ಧರ್ಮಕ್ಕೇನು ಪಕ್ಷಪಾತ ? ಎಲ್ಲರನ್ನು ಒಂದೇ ಒರೆಗೆ ತರದೆ ಬಿಡುವದೇ ?

ಲಿಂಗದ ನಿಲವು ನಿಲುಕದೆ ಆಚರಿಸುವ ಆಚರಣೆಯು ಎಷ್ಟು ಉತ್ತಮವಾದುದಾದರೂ, ಬಾಹ್ಯವೈಭವದ ಸಾಧನಗಳಿಲ್ಲದೆ ಆನಂದವನ್ನು ಕೊಡಲಾರದು. ಕಾರಣ ಸದಾಚಾರಸಂಪನ್ನತೆಯಿಂದ ಸುಖದ ಹಾದೀ ತೋರಿಸುವದಾದ ಗುರುವರ್ಗವು ವೈಭವದ ಆಡಂಬರವನ್ನು ಮೆರೆಯಿಸುವದಾಯಿತು, ಆದರಿಂದ ತಮ್ಮ ಹಾಗು ಭಕ್ತವರ್ಗದ ದೃಷ್ಟಿಯನ್ನು ವಿಲಾಸವಿಭ್ರಮಗಳ ಕಡೆಗೆ ತಿರುಗಿಸಿತು. ಎಲ್ಲಲ್ಲಿಲ್ಲ ಉತ್ಸವಾದಿಗಳು ಮನೋಹರವಾದ ಸದರುಗಳೂ ಹೆಚ್ಚಾಗಿ ಧರ್ಮದ ನೆವದಿಂದ ಮಾಡುವ ಕಾರ್ಯಗಳು ವಿಕಾರಕ್ಕೆಳಿಸಹತ್ತಿದವು. ಈ ರೀತಿ ಬೆಳೆಯುತ್ತಿರುವ ವಿಕಾರಮಯಸ್ಥಿತಿಯಲ್ಲಿ ಲಿಂಗಕಳೆಯಿಲ್ಲದೆ ಬಳಿಸುತ್ತ ಬಂದ ಅಷ್ಟಾವರಣದ ಬಳಿಕೆಯು ಅಂಗವ ಲಿಂಗವನ್ನಾಗಿಸುವ ಬದಲು, ಮತ್ತಿಷ್ಟು ಜಡಾಂಗವನ್ನು ಆಗಿಸಲು ಕಾರಣವಾಯಿತು. ಏಕೆಂದರೆ, ಆ ಸಾಮರಸ್ಯಯೋಗದ ಕ್ರಿಯೆಯ ಪ್ರಭಾವವೇ ಅಂತಹದ್ದಿರುವದು. ಕ್ರಿಯೆಯು ಸಮವಾದುದೆಂದು

ನೊಲೆಯು ಮೂಗನ್ನು ಹಿಚುಕುವದರ ಬದಲು, ಕುರುವನ್ನು ಹಿಚಿಕಿದರೆ, ಹಾಲ್ಳು ಎಲ್ಲಿಯದು? ಕುರುವಿನೊಳಗಿದ್ದ ಕೀವನೆತ್ತರವು ಹೊರಡುವದು. ಅದೇ ಮೇರೆಗೆ ವಿಕಾರಿಗಳ ಪಡಕೊಳ್ಳುವದಾಗಿರುವದು ಯಾವದೊಂದರ ಸಂಗತಿಮಾಡುವದರಲ್ಲಿ ದೋಷವಿಲ್ಲ. ಆ ಸಂಗತಿ ಹಿಡಿದವರ ದೋಷವಾಗಿರುವದು. ಲೋಕದಲ್ಲಿ ವೀರಶೈವರ ಹೊರತು, ಪಡಕೊಂಬುವ ಆಚರಣೆಯನ್ನು ಯಾರೂ ಆಚರಿಸುವದಿಲ್ಲ ಕಾರಣ ವೀರಶೈವರಲ್ಲದವರು ಕೆಡಲಿಕ್ಕೆ ಸಂಗತಿದೋಷವೇ ಕಾರಣವಾಗಿರುವದು. ಈ ಕಾರಣವು ಸೃಷ್ಟಿಯ ಸ್ವಾಭಾವಿಕನಿಯಮದಲ್ಲಿ ವೀರಶೈವರನ್ನೂ ಒಳಕೊಂಡಿರುವದಲ್ಲದೆ, ಕೂಡಲೆ ಪರಿಣಮಿಸುವದಾದ ಪಡಕೊಂಬುವದೊಂದು ಬಲವಾದ ಕಾರಣವು ಈ ಸ್ವಾಭಾವಿಕಕಾರಣಕ್ಕೆ ಜೊತೆಯಾದ ಬಳಿಕ ಕೇಳುವದೇನು? ಯುಗಯುಗಾಂತರಗಟ್ಟಲೆ ಲೋಕದ ಬಳಿಕೆಯಿಂದ ದೂರಿದ್ದು ಕಾಯ್ದುಕೊಂಡ ರಕ್ತಶುದ್ಧಿಯ ಸಾತ್ವಿಕಾಂಗವು ನಾಲ್ಕೈದು ಶತಮಾನಗಳಲ್ಲಿಯೇ ಕೆಟ್ಟು ಮೂರಾಬಟ್ಟೆಯಾಗಿ ಹೀನಾಂಗರ ಸಮರಸಗೊಂಡಿತು. ಅದರಿಂದ ವಿಕಾರವನ್ನು ತಡೆಯುವದಾಗದೆ, ವಿಷಯೋಪಭೋಗದಲ್ಲಿ ತೊಡಗಿಸಿ, ಸ್ಪರ್ಶಸನ್ನಿಧಿಗಳಿಂದುಂಟಾದ ದೋಷಗಳಿಂದ ರಕ್ತದೊಳಗಿನ ಶುದ್ಧಾಶುದ್ಧತೆಯೆಲ್ಲ ಏಕಾಗಿ ಇಡೀ ಸಮಾಜದ ರಕ್ತವನ್ನೆಲ್ಲ ಸಮಗೊಳಿಸಿಬಿಟ್ಟಿತು. “ನಮಗೆ ಉಡಿಕೆಯ ಬಳಿಕೆಯು ಹತ್ತಿಲ್ಲ; ನಾವು ಮೇಲುಕುಲದವರು. ಹತ್ತಿದವರೆಲ್ಲ ಎಳೆಗುಲದವರು.” ಎಂದು ಹೇಳಿಕೊಳ್ಳುವವರ ಪವಿತ್ರತೆಯು ಬಾಯಲ್ಲಿಯೇ ಉಳಿದು, ವೀರಶೈವರಷ್ಟೇ ಅಲ್ಲ. ಇಡೀ ಲೋಕದ ರಕ್ತವೆಲ್ಲ ಒಂದೇ ಸ್ಥಿತಿಗೆ ಬಂದುಮುಟ್ಟಿರುವದು ಇದಕ್ಕೆ ಪಟೀಲ ಬಿಲ್ಲು ಅಸೆಂಬ್ಲಿಯಲ್ಲಿ ಪಾಸಾದುದೇ ಸಾಕ್ಷಿ. ಭಿನ್ನಭಿನ್ನ ಜಾತಿಯ ಹೆಣ್ಣುಗಂಡುಗಳಲ್ಲಿ ವಿವಾಹಗಳು ನಡೆದುದೇ ಸಾಕ್ಷಿ. ರೋಮಾನಿಯಾದ ರಾಜಪುತ್ರನು ಸಾಮಾನ್ಯಮನೆತನದವರ ಮಗಳನ್ನು ಲಗ್ನವಾದುದೇ ಸಾಕ್ಷಿ. ಬ್ರಾಹ್ಮಣರ ಗುರುತ್ವವನ್ನು ಒಪ್ಪದೆ ವೀರರೂ ಧೀರರೂ ಆದ ಮರಾಠಾಜಾತಿಯ ಬಾಂಧವರು ಸ್ವತಂತ್ರವಾದುದೇ ಸಾಕ್ಷಿ. ಕುಲಾಭಿಮಾನವನ್ನು ತೋರಿಸುವವರ ಹಾಡೆಲ್ಲ ಮೂಗು ಕೊಯ್ಸಿಕೊಂಡು ಮೂಗಿನ ಹೊಳ್ಳೆಯನ್ನು ತೋರಿಸುವವರ ಹಾಗೆ ಆಗಿರುವದು. ಟೊಂಕದ ಮೇಲೆ ಚೌಕವಹಾಕಿ, ವಿಭೂತಿಯಪಟ್ಟೆದಿಂದ ಒಪ್ಪುವ ಹಣೆಯುಳ್ಳವಳಾಗಿ, ಬೀದಿಯ ಬಾಜಾರದಲ್ಲಿ ಎಷ್ಟೂ ನಾಚಿಕೆಯೂ, ಮರ್ಯಾದೆಯೂ ಇಲ್ಲದೆ, ಕೆಟ್ಟ ಕೆಟ್ಟ ಹೋಳೀ ಪದಗಳನ್ನು ಹಾಡುವ ಹೊಲಸೂಳೆಯ ರಕ್ತವೂ, ಶೂನ್ಯಸಿಂಹಾಸನ ಪಂಚಪೀಠಗಳ ಆರೂಢರಾಗಿ, “ನಾ ಜಗದ್ಗುರು ನಾ ಜಗದ್ಗುರು” ಎಂದು ಹೋರಾಡುವವರಾದ ಗುರುವರ್ಗದವರ ರಕ್ತವೂ ಒಂದೇಪರಿಯಾಗಿರುವದು. ಈ ಸಂಗತಿಯು ಭಕ್ತರ ಅಂಧಶ್ರದ್ಧೆಯಿಂದ ಇನ್ನೂ ಕಟ್ಟಾಗದಿರುವ ಪೂಜೆಯ ಅಬ್ಬರದಲ್ಲಿಯೂ, ಆಡಂಬರದ ವೈಭವದಲ್ಲಿಯೂ ಗೊತ್ತಾಗುತ್ತಿರಲಿಕ್ಕಿಲ್ಲ. ಮುಂದಿನ ಸಾಕ್ಷಿಗಳನ್ನು ಕಂಡು ಮನಗಾಣಿರಿ.

ಎಷ್ಟೋ ಉನ್ಮತ್ತರಾದ ಲಿಂಗಾಯತರು ಊರಸೂಳೆಯರು ಸಾಲಡಿ, ಹೊಲಗೇರಿಯಲ್ಲಿ ಬಿದ್ದು ಬಿದ್ದು ಬರುತ್ತಿರುವದೇ ಸಾಕ್ಷಿ. ಮಠಪತಿಯು ಮಠದಯ್ಯನ ದುರಾಚಾರವನ್ನು ಕಂಡು, ತನಗೂ ಅವನಿಗೂ ಏನೂ ಹೆಚ್ಚುಕಡಿಮೆಯಿರುವದಿಲ್ಲೆಂಬುದನ್ನು ಮನಗಂಡು, ಅಯ್ಯ ಎಂಬ ಹೆಸರುಮಾತ್ರದಿಂದ ಮಠದಯ್ಯಗಳಿಗೆ ಪೂಜೆಯು ಇರುತ್ತಿದ್ದರೆ, ಅದೇ ಅಯ್ಯ ಎಂದು ಹೆಸರಿನಿಂದ ಕರೆಯಲ್ಪಡುವ ತಮಗೂ ಏಕೆ ಇರಬಾರದು- ಎಂದು ಎಷ್ಟೋ ಮಠಪತಿಗಣಾಚಾರಿಮುಂತಾದವರು ಮಠದಯ್ಯಗಳಾಗಲು ಪ್ರಯತ್ನಿಸುತ್ತಿರುವದೇ ಸಾಕ್ಷಿ. ಎಷ್ಟೋ ಮಠಪತಿಗಣಾಚಾರಿಗಳು ಕಾಲಿಗೆ ಜಂಗು ಕಟ್ಟುತ್ತಿರುವದೇ ಸಾಕ್ಷಿ.

ಆಚಾರ್ಯರು ಬರೇ ಲಕ್ಷಣಗಳಿಂದ ವೀರಶೈವಭೇದಗಳನ್ನು ಹೇಳುತ್ತ ಬಂದರೆಂದು ಮೇಲೆ ಹೇಳಿರುವದಷ್ಟೇ. ಸನ್ ೧೮೮೧ ನೆಯ ಇಸವಿಯಲ್ಲಿ, ಅಷ್ಟಾವರಣದ ಮಹತ್ವವನ್ನು ಎಷ್ಟೂ ಲಕ್ಷಿಸದೆ, ಮುಟ್ಟಿನೊಳಗೆ ಬಂದು "ಮುಟ್ಟೇ ಮುಟ್ಟೇ" ಎಂದು ಜಿಗದಾಡುವ ಡಾಂಭಿಕಾಚಾರದ ಶೀಲಬಳಿಕೆಯಿಂದ ವೀರಶೈವ ಲಿಂಗವಂತರಲ್ಲಿ ಭೇದಗಳನ್ನು ಮಾಡಿ ಮಾಹಿತೀ ಕೊಟ್ಟದ್ದು ಗ್ಯಾಝಿಟಿಯರದಲ್ಲಿ ಪ್ರಸಿದ್ಧವಾಗಿರುವದು. ನೋಡಬೇಕೆಂಬುವ ಜಿಜ್ಞಾಸುಗಳು ಅತ್ತ ಗಮನಿಸಬಹುದು ವರ್ಗೀಕರಣಮಾಡಿ ಹೇಳಿದ್ದನಷ್ಟು ಮಾತ್ರ ೪೬ನೇ ಪುಟದಮೇಲೆ ಕೊಷ್ಟಕಿನಲ್ಲಿ ಕಲಮುವಾರ ಕೊಟ್ಟಿರುವದು ನೋಡಿರಿ.

ಲಿಂಗದೃಷ್ಟಿಯು ಎಷ್ಟೂ ಇಲ್ಲದೆ, ಕೇವಲ ರಕ್ತಸಂಬಂಧವನಷ್ಟೇ ಅನುಲಕ್ಷಿಸಿ, (ಅಯ್ಯಗಳು ಬಣಜಿಗರ ಹಾಗು ಪಂಚಮುಸಾಲಿಯುವರ ಹೆಣ್ಣುಗಳನ್ನೂ, ಬಣಜಿಗರು ಪಂಚಮುಸಾಲಿಯವರ ಹೆಣ್ಣುಗಳನ್ನೂ ಆಗುತ್ತಿರುವ ಸಾಂಪ್ರದಾಯವನ್ನಷ್ಟೇ ಲಕ್ಷಕ್ಕೆ ತಂದು) ಜಾತಿಯ ದುರಭಿಮಾನದಿಂದ ಮಾಡಿದ ವರ್ಗೀಕರಣವಿದೆಂಬುದು ಸ್ಪಷ್ಟವಾಗಿ ವ್ಯಕ್ತವಾಗುತ್ತದೆ. ಇದರಲ್ಲಿ ತತ್ವಜ್ಞಾನದೃಷ್ಟಿಯೂ ಇಲ್ಲ! ವ್ಯವಹಾರಜ್ಞಾನವಂತೂ ಮುನ್ನವೇ ಇಲ್ಲ. ಸ್ವೀಕರಿಸಿದ ಅರ್ಧ ಲಿಂಗವಂತರಲ್ಲಿ ಎಣಿಸಲ್ಪಟ್ಟ ಕೆಲವುಕಾಯಕದವರು ಅಷ್ಟಾವರಣದ ಬಳಿಕೆಯಲ್ಲಿ ಬಂದವರು ಇವರಿಂದಲೇ ಸಮಾಜಕ್ಕೆ ಅನ್ನ ಅರಿವೆಗಳ ಪೂರಯಿಕೆಯು. ಇವರನ್ನೇ ಕಡಿಮೆಯ ತರಗತಿಯಲ್ಲಿ ಎಣಿಸಿದ ಬಳಿಕ; ಎಂತಹ ತತ್ವಜ್ಞಾನ? ಎಂತಹ ವ್ಯವಹಾರಜ್ಞಾನ? ಶ್ರೀಮದ್ಬಸವಣ್ಣನು ಕುಲಜಾತಿಮುಂತಾದವುಗಳನ್ನೇನು ನೋಡದೆ, ಲಿಂಗವ ಧರಿಸಿದಮಾತ್ರದಿಂದ ಭಕ್ತಕೋಟಿಯಲ್ಲಿ ಕೂಡಿಕೊಂಡ ಉದಾತ್ತತತ್ವಾನ ವರ್ತನವೆತ್ತ? ಇವರ ರಕ್ತಸಂಬಂಧದೃಷ್ಟಿಯೆತ್ತ? ರಕ್ತವಾದರೂ ಶುದ್ಧವುಳಿದಿದೆಯೇ ಅದೂ ಇಲ್ಲ. ಇಡೀ ಲೋಕದ ರಕ್ತವೆಲ್ಲ ಒಂದೇ ಒರಿಗೆ ಬಂದುಬಿಟ್ಟಿರುವದು. ಹೀಗೆಮಾಡುವದರಿಂದೇನಾಗುವದೆಂಬ ಸಾರಾಸಾರವಿಚಾರವಾದರೂ ಇದೆಯೇ ಅದು ಇಲ್ಲ. ಯಾವದೊಂದು ಸಮಾಜದಲ್ಲಿ ಏನಾದರೊಂದು ವ್ಯವಸ್ಥೆ ಸಂಗೊಳಿಸಿಕೊಳ್ಳಬೇಕಾದರೆ ಬಹಳ ಮುತ್ಸದ್ದಿಗಿರಿಯುಬೇಕು. ಏನೊಂ

| ನಿಜ, ಲಿಂಗವಂತರು. True Lingayats | ಸ್ವೀಕರಿಸಿದ ಲಿಂಗವಂತರು. Affiliated Lingayats | | | ಅರ್ಧ ಲಿಂಗವಂತರು. Half Lingayats |
|---|---|---|---|---|
| ೧ ಜಂಗಮರು | ೧ ಆದಿಬಣಜಿಗರು | ೮ ಶಿವಸಿಂಪಿಗರು | ೧೬ ಹಂಡೆಗುರುಬರು | ೧ ಚಿಕ್ಕುರುವಿನವರು |
| ೨ ಶೀಲವಂತರು | ೨ ಕುರುಹಿನ ಸೆಟ್ಟರು | ೯ ನೀಲಗಾರರು | ೧೭ ಕುಂಬಾರರು | ೨ ಹಟಗಾರರು |
| ೩ ಬಣಜಿಗರು | ೩ ಸಾದರು | ೧೦ ಗಾಣಿಗರು | ೧೮ ರಡ್ಡೇರು | ೩ ಹೇಳವರು |
| ೪ ಪಂಚಮಸಾಲಿಯವರು | ೪ ನೊಣಬರು | ೧೧ ಗೌಳಿಗರು | ೧೯ ಚಲವಾದಿಗಳು | ೪ ಅಗಸರು |
| | ೫ ನಾಗಲಿಕರು | ೧೨ ಕುಡವಕ್ಕಲಿಗರು | | ೫ ಬಸವಿಗಳು |
| | ೬ ಪಟ್ಟಸಾಲಿಗರು | ೧೩ ಮಾಲಗಾರರು | | ೬ ಡೋರರು |
| | ೭ ಶಿವಾಚಾರದವರು | ೧೪ ಕಲಾವಂತರು | | ೭ ಸಮಗಾರರು |
| | | ೧೫ ಹಡಪದವರು | | ೮ ಗೊರವರು (ಜೀರರು) |
| | | | | ೯ ಕಬ್ಬಲಿಗರು |

ದು ಇಲ್ಲದೆ ಮಹಿಮರ ವ್ಯವಸ್ಥೆಯಲ್ಲಿ ಏನಾದರೊಂದು ಹೆಚ್ಚುಕಡಿಮೆಮಾಡುವ ದು ಅತ್ಯಂತ ಘಾತಕವಾದುದು. ಬೇಡಾದವನ್ನು ಸಾಲಾಗಿ ನಿಲ್ಲಿಸಿ ತೋಫಿನ ಬಾಯಿಗೆ ಒಮ್ಮೆಲೇ ಕೊಡುವದು ಒಳ್ಳೆದ, ಹೀಗೆ ಮಾಡುವದು ಎಷ್ಟೂ ಸಲ್ಲದು ಆ ದುಷ್ಪರಿಣಾಮದಿಂದಲೇ ಲಿಂಗಧಾರಿಗಳಾದ ಹಂಡೆಗುರುಬರೂ, ನೊಣಬ ರೂ, ನೀಲಕಂಠಪಂಥದರೂ ಈ ಸಮಾಜದಿಂದ ಸಿಡಿದು ಸ್ವತಂತ್ರರಾಗಿರುವ ರು. ಇದೇ ಈ ಮಾತಿಗೆ ಬಲವಾದ ಸಾಕ್ಷಿಯಾಗಿರುವದು.

ಇನ್ನು ಶ್ರೀಬಸವಣ್ಣನ ಭಕ್ತಿಯೋಗದಿಂದ ಭಕ್ತರಲ್ಲಿ ನೆಲಸಿದ ಅಂಧಶ್ರದ್ಧೆ ಯು ಗುರುವರ್ಗದವರದು ಏನೂ ಎಷ್ಟೆಣಿಸದೆ, ಅವರ ಉಪಜೀವನದ ಸಾಧನಗಳ ನ್ನು ಇಂದಿನವರೆಗೆ ಸಹಾಯಮಾಡುತ್ತಾ ಬರೂ ನಡಿಸುತ್ತ ಬಂದಿರುವದಷ್ಟೇ! ಗುರು ವರ್ಗವು ಈ ಅಂಧಶ್ರದ್ಧೆಯ ನಡವಳಿಕೆಯನ್ನು ದುರುಪಯೋಗಿಸಿ, ವಿದ್ಯಾಹೀನರೂ, ಸ್ವೇಚ್ಛಾಚಾರಿಗಳೂ, ಆಗಿರುವರು. ತಾವು ಹೇಗಿದ್ದರೂ ತಮ್ಮ ಪೂಜಾಪುನ ಸ್ಕಾರಾದಿಗಳು ಕೊರತೆಯಿಲ್ಲದೆ ಸಾಗಿರುವದನ್ನು ಕಂಡು, ಅವರಿಗೆ ಹೆಚ್ಚಿನ ಜ್ಞಾನ ದ ಅವಶ್ಯವೇ ತೋರಲಿಲ್ಲ. ಅಜ್ಞಾನವು ಗುರುವರ್ಗದವರನ್ನು ಮುಚ್ಚಿಬಿಟ್ಟಿತು. ಇದು ಅವರಷ್ಟಕ್ಕೆ ಹೋಗಲಿಲ್ಲ. ಭಕ್ತಕೋಟಿಯನ್ನೂ ಆವರಿಸಿತು. ಒಳಗೆ ಏನೊಂದು ಲಿಂಗದ ನೆಲೆಯೂ ಇಲ್ಲದೆ ಹೊರಗೆ ನಡೆಯು ವಮಾತ್ರ ಕ್ರಮವಾಗಿ ಹೊಂದುತ್ತಿರುವ ಕ್ಷೀಣದೆಸೆಯಲ್ಲಿ ಉಳಿದುಕೊಂಡಿರುವದು. ಜಜ್ಞಾಸುಗಳಾದ ಭಕ್ತರಿಗೆ ಏನಾದರೂ ತಿಳಕೊಂಡು ಮುಂದೆ ಸಾಗಬೇಕೆಂದು ಅತ್ತಿತ್ತ ಹಾರಾಡಿ ದರೂ, ಹೆಚ್ಚಿನ ಬೋಧೆಯನ್ನು ಮಾಡುವವರು ಸಿಗದಾದರು. ಈ ಮಾತಿಗೆ ಎಷ್ಟೋ ಲಿಂಗವಂತ ಜಿಜ್ಞಾಸುಗಳು ಜಾಣರಾದ ಭವಿಗಳಲ್ಲಿ ಏನಾದರು ಹೆಚ್ಚಿನ ಬೋಧೆಯು ಸಿಕ್ಕೀತೆಂದು ಹೋಗುತ್ತಿರುವದೇ ಸಾಕ್ಷಿ! ಎಷ್ಟೋ ನಮ್ಮ ಜನರು ದುರುಳವೇದಾಂತಿಗಳ ಬಲೆಗೆ ಬಿದ್ದು ಅವರು ಶಕ್ತಿಪೂಜಕರಾಗಿ, ಅಭಕ್ಷ್ಯಭಕ್ಷಣ ಅಪೇಯಪಾನಾದಿ ದುರ್ವ್ಯಾಪಾರಗಳಿಗೆ ಬಲಿಬಿದ್ದಿರುವದೇ ಸಾಕ್ಷಿ! ಗುರುವರ್ಗದ ವರು ತಮ್ಮ ಅಜ್ಞಾನವನ್ನು ಬಚ್ಚಿಕೊಂಡು ಗೌರವವನ್ನು ಮೆರೆಯಿಸಲಿಕ್ಕೆ ಅನುಭ ವೋಕ್ತಿಗಳನ್ನು ಮುಂದೆ ಮಾಡಿದರು. ಅವಾವೆಂದರೆ "ಉಪದೇಶವನ್ನು ಹಡ ಕೊಳ್ಳದವರಿಗೆ ಲಿಂಗಾನುಭವದ ಯಾವಮಾತಗಳನ್ನು ಹೇಳಲಿಕ್ಕೆ ಬರುವದಿಲ್ಲ" ಮತ್ತು ಉಪದೇಶವನ್ನು ಹಡಕೊಂಡವರು ಕೇಳಿದಲ್ಲಿ, "ಸುಮ್ಮನೆ ಗುರು ತೋರಿ ಸಿದ ಮಾರ್ಗದಲ್ಲಿ ಮುಗ್ಧಭಾವದಿಂದ ಸಾಗುವದೊಂದೇ ದೊಡ್ಡದು; ಆ ನಡೆಯ ಲ್ಲಿಯೇ ತಾನೇ ಎಲ್ಲ ತಿಳಿಯಬತ್ತಹೋಗುವದು!!" ಇತ್ಯಾದಿ. ಹೀಗಾಗಿ ಮೂಢ ಭಕ್ತರು ಗಾಣದ ಎತ್ತುಗಳಂತೆ ಬರೇ ನಡಕೊಳ್ಳುವವರೇ ಆಗಿ, ಕರ್ಮಠರಾಗಹ ತ್ತಿರುವರು. ನಡಕೊಂಬುವದು ಆಚಾರ, ಪಡಕೊಂಬುವದು ವಿಕಾರ ಆಗಿ, ಸಮಾಜದಲ್ಲಿ ಧರ್ಮದ ಆಚರಣೆಯೆಲ್ಲ ಜನರನ್ನು ಠಕ್ಕಿಸಿ, ತಮ್ಮ ಹೇಳುವನ್ನು

ಸಾಧಿಸುವದರಲ್ಲಿ ಉಪಯೋಗಿಸ ಹತ್ತಿತು. ಹೀಗಾಗಿ ಸಮಾಜದಲ್ಲಿ ಸರಳರಾರು ಠಕ್ಕರಾರು ಎಂಬುದು ತಿಳಿಯುವಾಯಿತು ಬಹುಶಃ ಸಂಬಧಿದವರನ್ನು ಎಲ್ಲರೂ ಮಾರಿಯುವವರೇ ಆದರು. ಇದರಿಂದ ಕಲ್ಯಾಣದ ನಡೆಯು ಕಟಕರ ಪಾಲಾಗಿ ಪ್ರಸಾದದ ವ್ಯಾಪಾರವು ನಿಂತು, ತಿಂದ ತಿಂದು ರಕ್ತಕಂಡಗಳನ್ನು ಬೆಳಸಿಕೊಳ್ಳು ವ ವ್ಯಾಪಾರವು ತುಂಬಾ ತುಂಬಿಬಿಟ್ಟಿತು ಲೋಕವು ಲಿಂಗಾನುಸಂಧಾನದ ಯೋಗದಿಂದ ಸದಾಚಾರಿಯ ಪಾಲಿಗೆ ಶಿವಮಯವೂ, ಅಂಗಾನುಸಂಧಾನಿಯಾದ ದುರಾಚಾರಿಯ ಪಾಲಿಗೆ ವಿಕಾರಮಯವೂ ಆಗಿರುವದು. ಬಿತ್ತಿದುದನು ಬೆಳಕೊಳ್ಳುವ ಹಾಗೆ ಸಹಜವಾದ ಸೃಷ್ಟಿಯ ಧರ್ಮವಿರುವದರಿಂದ ಪರಮಾತ್ಮನು ಅವರವರಿಗೆ ಅವರವರ ಕಾಮನಾಕಲ್ಪನೆಗಳಿಗೆ ಅನೂಕೂಲಸಾಧ್ಯವಾದ ಇಷ್ಟರೂಪದಲ್ಲಿ ತೋರಿ, ಅವರವರ ಇಚ್ಛೆಯಲ್ಲಿ ಪರಿಣಮಿಸುವ ಧರ್ಮಮೂರ್ತಿಯಾಗಿರುವನಷ್ಟೆ! ಹೊರನೋಟದಿಂದಲೇ ಬೆಳೆಯುವ ಜೀವರಿಗೆ ಅನಂತರೂಪಿಯಾಗಿ ಇಷ್ಟಾರ್ಥವನ್ನು ಕೊಡುವವನೇ ಬೇಕಿರುವದರಿಂದ, ಲಿಂಗಾನುಸಂಧಾನವಿಲ್ಲದೆ ಮಾಡುವ ಶಿವಪೂಜೆಯು ಗುರುಲಿಂಗಜಂಗಮಕೆ ಹೊರತಾದುದಾಗಿ ದೇವಪೂಜೆಗೆ ಇಳಿಯಿತು. ಇರಇರುತ್ತ ಇಷ್ಟಪೂಜೆಯೂ ಕಷ್ಟವೆನಿಸಹತ್ತಿ ಲೌಕಿಕಧರ್ಮವು ಮತ್ತೆ ಸೇರಹತ್ತಿತು. ಕರೆಪ್ಪ ಬರಮಪ್ಪ ನಾಗಪ್ಪ ಹನಮಪ್ಪ ಎಲ್ಲಪ್ಪ ಮುಂತಾದ ಕನಾರ್ಯಧರ್ಮದ ದೇವತೆಗಳು ಮನೆಹೊಕ್ಕು ದೇವರ ಜಗಲಿ, ಗೂಡು, ದನದ ಹಕ್ಕಿ, ಕಡೆಯುವಕಂಭ, ಹಿತ್ತಲ ಮುಂತಾದವುಗಳಲ್ಲಿ ಮೂರ್ತಿಗೊಂಡು ಪೂಜೆಗೊಳ್ಳಹತ್ತಿದವು. ಲಿಂಗಾಂಗಿಧರ್ಮದ ನಡೆನುಡಿಯು ಹಸಗೆಟ್ಟು ಆದರಿಂದ ಏನೊಂದು ಮಹತ್ವವು ತೋರದೆ ಹೋಗಿ, ಅಜ್ಞಾನಪಂವಶತೆಯಿಂದ ಜನರು ಧರ್ಮಾಂತರವನ್ನು ಮಾಡಹತ್ತಿದರು ಲಿಂಗಾಯತರು ಧರ್ಮವಬಿಟ್ಟು ಮುಸಲ್ಮಾನರೂ ಪಾದ್ರಿಕೂಡಿದವರೂ ಆದ ಎಷ್ಟೋ ಉದಾಹರಣೆಗಳು ದೊರೆಯುತ್ತಿರುವವು. ಒಂದೊಂದು ಊರಿಗೆ ಊರೇ ಪಾದ್ರಿಕೂಡಿದ ಉದಾಹರಣೆಗಳು ಕೂಡ ದೊರೆಯುವವು. ಈ ಸ್ಥಿತಿಯನ್ನು ಕಂಡು ಯಾವ ಲಿಂಗಾಂಗಿಗೂ ವ್ಯಸನವಾಗದೆ ಇರದು. ಬೇಕಾದವರನ್ನು ಅವರವರ ಅಂಗಶುದ್ಧಿಯಮೇರೆಗೆ ಹೆಚ್ಚುಕಡಿಮೆಕಾಲಮಾನದವರೆಗೆ ( ಬ್ರಾಹ್ಮಣನಿಗೆ ಮೂರು, ಕ್ಷತ್ರಿಯನಿಗೆ ಆರು, ವೈಶ್ಯನಿಗೆ ಒಂಬತ್ತು, ಶೂದ್ರನಿಗೆ ಹನ್ನೆರಡು ವರ್ಷಗಳವರೆಗೆ ) ಸದಾಚಾರವ್ರತವ ಮಾಡಹಚ್ಚಿ, ಲಿಂಗಧಾರಣದ ಅಂಗವು ಸಿದ್ಧಿಸಿದಾಗಲೇ ಅವರಿಗೆ ಯಥಾವಿಧಿ ಲಿಂಗದೀಕ್ಷೆಯಕೊಟ್ಟು, ಲಿಂಗಾಯತರಲ್ಲಿ ಕೂಡಿಸಿಕೊಳ್ಳಲು ಶಾಸ್ತ್ರಾಧಾರವಿರುವದು. ಈ ಶಾಸ್ತ್ರಾನುವರ್ತನವು ಒತ್ತಟ್ಟಿಗುಳಿದು, ಹೋದವರ ವಿಷಯವಾಗಿ ಏನೊಂದು ಹಳಹಳಸದೆ, ಮುಂದೆಹೋಗುವವರ ವಿಷಯವಾಗಿ ಅವರು ಹೋಗದಂತೆ ಏನೊಂದು ತಿದ್ದುಪಾಟವನ್ನು ಮಾಡಿಕೊಳ್ಳದೆ, ಅಗಡಬಂಬರಾಗಿ ನಿಂತ ನಿರ್ಲಜ್ಜರಿಗೆ ಧರ್ಮಭ್ರಷ್ಟತ್ವಯಾವಶಾಸನವ ಮಾಡಿದರೂ ಕಡಿಮೆಯೇ. ಗುರುಲಿಂಗಜಂಗ

ಮಕೆ ಹೊರತಾದವರಾಗಿ, ಪವಿತ್ರವಾದ ಗುರುಗದ್ದುಗೆಗಳನ್ನು, ಪ್ರಕಟವಾಗಿ ಲೋಕದಲ್ಲಿ ತುಂಬಾ ವ್ಯಕ್ತಾವ್ಯಕ್ತ ರೀತಿಯಿಂದ ಸ್ವರಾಜ್ಯದ ಭೂಮಿಕೆಯನ್ನುಂಟುಮಾಡಲು ನಿಂತ ಪ್ರತ್ಯಕ್ಷ ಪ್ರಭುವಿನ ಸಮ್ಮುಖದಲ್ಲಿ ಏರಿ, ಅವನ ಪೂಜೆಗೊಂಬುವದು ಈ ಜಗಭಂಡ ಜಂಗಮರಿಗೆ ಎಷ್ಟೂ ಸರಿಯಾಗುದಲ್ಲ. ಎಲೈಗುರುವರ್ಗದವರೇ, ನಿಮ್ಮಿಂದ ನಮಗೆ ಎಷ್ಟು ಹೀನದೆಶೆಯು ಉಂಟಾಗಿದ್ದರೂ,ವಿಭೂತಿಯ ಹೆಣೆಯನ್ನು ಕೆತ್ತಿ ಕೊರಳೊಳಗಿನ ಲಿಂಗವನ್ನು ಹರಕೊಂಡು ನಿಮ್ಮನಿಮ್ಮ ಸ್ಥಾನಗಳಿಂದ ದೂಡಿಸಿಕೊಳ್ಳುವಂತಹ ಅವಸ್ಥೆಯು ತಾನಾಗಿಯೇ ನಿಮಗೆ ಬಂದಿದ್ದರೂ, ಲಿಂಗವ ಧರಿಸಿದ ಮಾತ್ರದಿಂದ, ನಿಮ್ಮಗಳಿಗೆ ಆ ಅಭಿಮಾನದಿಂದ ಸೂಚಿಸುವದೇನಂದರೆ—ನೀವಾಗಿಯೇ ನಿಮ್ಮ ನಿಮ್ಮ ಸ್ಥಾನಗಳಿಂದ ಇಳಿದು, ಭಕ್ತರಾಗಿ ಭಕ್ತಕೋಟಿಯನ್ನು ಕೂಡಿಕೊಳ್ಳುವದು ಉತ್ತಮಪಕ್ಷ! ಬಹಿಷ್ಕೃತರಾಗಿ ಕೂಡಿಕೊಳ್ಳುವದು ಮಧ್ಯಮ ಪಕ್ಷ, ಪದಚ್ಯುತರಾಗಿ ದೂಡಿಸಿಗೊಳ್ಳುವದು ಕನಿಷ್ಠ ಪಕ್ಷ! ಇನ್ನುಮೇಲೆ ನಿಮ್ಮ ನಿಮ್ಮ ಸ್ಥಾನಗಳು ನಿಮಗೆ ಎಷ್ಟೂ ಉಳಿಯಲಾರವು. ಇಲ್ಲಿಗೆ ನಿಮ್ಮ ನಿಮ್ಮ ಪುಣ್ಯಸಂಗ್ರಹವೆಲ್ಲ ತೀರಿರುವದು. ಇಷ್ಟು ಹೇಳಿ ಹೇಳಿ ಉಳಿದುಕೊಂಡುದುದಾದರೆ, ನಿಮಗೆ ತಕ್ಕ ಶಾಸನ ಮಾಡಲು ಪ್ರಭುವರನೇ ನಿಂತಿರುವನು. ಇದರ ಮೇಲೆ ನಿಮ್ಮ ಇಚ್ಛೆಯು.

## ಆಕ್ಷೇಪನಿವಾರಣೆ

ಇನ್ನು ಕೆಲವು ದುಷ್ಟ ಜಂಗಮರು, "ಬಸವಣ್ಣನು ತುಂಡಜಂಗಮರು, ಮಿಂಡಜಂಗಮರು, ಮುಂತಾದವರಿಗೆಲ್ಲ ಅವರು ಬೇಡಿದ್ದನ್ನು ಕೊಟ್ಟು, ಅವರ ದುಷ್ಟಕಾರ್ಯಗಳನ್ನೇನೂ ಲಕ್ಷಿಸದೆ, ಭಕ್ತಿಯನಾಚರಿಸಿದನು ಹೀಗಿದ್ದು ಈಗ ನಮ್ಮಲ್ಲಿ ಗುಣವನಾರಿಸುವದು, ಭಕ್ತಿಯೋಗಕ್ಕೆ ಕುಂದು ತಂದುಕೊಂಡಂತಾಗುವದು; ನೋಡಿರಿ, ಉರುಲಿಂಗಪೆದ್ದಿ, ಗುರುಭಕ್ತಾಂಡಾರಿ ಮುಂತಾದವರು ಗುರುವಿನ ಯೋಗ್ಯಾಯೋಗ್ಯತೆಗಳನ್ನೇನೂ ಲಕ್ಷಿಸದೆ, ಗುರುಭಕ್ತಿಯನಾಚರಿಸಿದರು; ಇದು ಭಕ್ತಿಯೋಗಕ್ಕೆ ಸರಿಯಾದುದಾಗಲಾರದು" ಎಂದು ವಾದಿಸುವರು

ಭಕ್ತರು ಗುರುವಿನ ಗುಣವನಾರಿಸಬಾರದೆಂದು ಗುಣುಗುಟ್ಟುವದು ಕೆಲವು ಮಟ್ಟಿಗೆ ಸರಿಯಾದುದು- ಶ್ರೀಸದ್ಗುರುರಾಯನು ದೀಕ್ಷಾತ್ರಯಗಳಿಂದ (ವೇಧಾ, ಮಂತ್ರ, ಕ್ರಿಯಾ) ಭಕ್ತನ ತನುಮನ ಭಾವಗಳನ್ನೂ, ಸ್ಥೂಲಸೂಕ್ಷ್ಮಕಾರಣ ತನುಗಳನ್ನೂ ಶುದ್ಧಿಸಿ, ಕಾರಣತನುವಿನ ಭಾವಕ್ಕೆ ಜಂಗಮವನ್ನೂ, ಸೂಕ್ಷ್ಮತನುವಿನ ಮನಕ್ಕೆ ಲಿಂಗವನ್ನೂ, ಸ್ಥೂಲತನುವಿನ ಕರಕ್ಕೆ ಇಷ್ಟವನ್ನೂ (ಗುರುಲಿಂಗವನ್ನೂ) ಕೊಟ್ಟಿದುವನಷ್ಟೇ! ಆದರೂ ಆತನು ತೋರಿದಮಾರ್ಗದಲ್ಲಿ ತನ್ನ ಜಡತ್ವವನ್ನು ಹಿಂಗಿಸಿಕೊಳ್ಳಬೇಕಾಗುವದು; ಏಕಂದರೆ ಆತ್ಮರ ಜಡತ್ವವು ನಡೆ

ಯಿಂದ ಹಿಂಗುವದಾಗಿರುವದು ಕಟ್ಟಿಗೆಯು ಬೆಂಕಿಯಲ್ಲಿ ಹಾಕಿದೊಡನೆಯೇ ಸುಟ್ಟುಬೂದಿಯಾಗುವದಿಲ್ಲ. ಅದಕ್ಕೆ ಸ್ವಲ್ಪ ಅವಕಾಶವು ಬೇಕು. ಲಿಂಗವು ಒಳಗೂ ಹೊರಗೂ ಪರಿಪೂರ್ಣವಾದಾಗ್ಯೂ, ಆತ್ಮರು ತಮ್ಮ ಜಡತ್ವದ ಪ್ರಮಾಣಕ್ಕೂ, ಭಕ್ತಿಯೋಗದಲ್ಲಿ ಇರಬಲ್ಲ ಅವಧಿಯ ಪ್ರಮಾಣಕ್ಕೂ, ಕರಣಗಳನ್ನು ಕೊಟ್ಟಪ್ರಮಾಣಕ್ಕೂ ಅನುಸರಿಸಿ ಜಡತ್ವವನ್ನು ಹಿಂಗಿಸಿಕೊಳ್ಳುತ್ತಿರುವರು. ಅದರಿಂದ ಅವರ ಹೆಜ್ಜೆಗಳು ಬೇರೆ ಬೇರೆ ಮೆಟ್ಟಗಳಲ್ಲಿರುವವು. ಸಾಲೆಗೆ ಬರುವ ಯೋಗ್ಯತೆ ಬಂದ ಬಳಿಕ ಎಲ್ಲರನೂ ಸಾಲೆಯಲ್ಲಿ ತಕ್ಕೊಳ್ಳಬೇಕಾಗುವದು ಸರಿಯಾಗಿ ಅಭ್ಯಾಸವನ್ನು ಮಾಡಿದ ಮಕ್ಕಳು ಕೆಲವೊಂದು ನಿಯಮಿತ ಅವಧಿಯಲ್ಲಿ ಸಾಲೆಯನ್ನು ತೀರಗಲಿತೀಗಲಿಯುವರು. ಓಣೀಹಿಡಿದು ಅಡ್ಡಾಡುವ ಉಡಾಳ ಹುಡುಗರ ನಾದಿಗೆ ಬಿದ್ದು ಅಭ್ಯಾಸಮಾಡದವರು ಹಿಂದೆ ಉಳಿಯುವರು. ಇಷ್ಟೇ ಅಲ್ಲ! ತಾವೂ ಉಡಾಳರಾಗಿ ಉಳಿದ ಮಕ್ಕಳನ್ನು ಕೆಡಿಸಲು ಕಾರಣರಾಗುವರು. ಕಲಿಸುವವರು ಇಂತಹವರ ಬಗ್ಗೆ ಹೆಚ್ಚು ಎಚ್ಚರಪಟ್ಟು, ಉಳಿದಮಕ್ಕಳು ಇವರಿಂದ ಕೆಡದಂತೆ ಕಾಯ್ದುಕೊಂಡು ತಿದ್ದಲು ಪ್ರಯತ್ನಿಸತಕ್ಕದ್ದು ಏನ ಮಾಡಿದರೂ ಹಾದಿಗೆ ಹತ್ತುವದಿಲ್ಲೆಂದು ಅನುಭವಕ್ಕೆ ಬಂದಬಳಿಕ, ಅವರನ್ನು ಸಾಲೆಯಿಂದ ಹೊರಗೆ ಹಾಕಿದ ಹೊರತು ಗತ್ಯಂತರವಿಲ್ಲ! ಅದೇ ಮೇರೆಗೆ ಈ <u>ವೀರಶೈವ ಲಿಂಗಾಂಗಿ ಧರ್ಮವೂ ಒಂದು ಸಾಲೆಯಾಗಿರುವದು.</u> ಈ ಸಾಲೆಯು ಅನಾದಿ ಸಂಸಿದ್ಧವಾಗಿ ಮಾನವಕೋಟಿಗೆಲ್ಲ ಇರುತ್ತಿದ್ದರೂ ಬಸವಾದಿಪ್ರಮಥರವರೆಗೂ ಯಾವತ್ತೂ ರೀತಿಯಿಂದ ಶ್ರೇಷ್ಠರಾದ (ತಿರುಸಡೆಯನ್ನುಹೊಂದಿದ ಅಂದರೆ ಬೋಧಿಸಲು ಯೋಗ್ಯತೆಯನ್ನೂ ಹೊಂದಿದ) ಗುರುಗಳನ್ನು ಹೊಂದಿ, ಲೋಕದ ಬಳಿಕೆಯಲ್ಲಿ ಬಂದಿದ್ದಿಲ್ಲ. ಬಸವಾದಿಪ್ರಮಥರಿಂದಲೇ ಈ ಸಾಲೆಯು ಲೋಕದ ಕಣ್ಣಿಗೆ ಒಡೆದು ಕಾಣುವಹಾಗೆ ಆಯಿತು. ಅದಕ್ಕೂ ಪೂರ್ವದಲ್ಲಿ ಬಹುಕಾಲದಿಂದ ಇದು ಒಂದು ವೀರಶೈವ ಕ್ಲಾಸವಾಗಿ(ವರ್ಗವಾಗಿ) ಪಂಚಾಚಾರ್ಯರಿಂದ ಸ್ಥಾಪಿಸಲ್ಪಟ್ಟು, ಬದುಕಿಕೊಂಡಿತ್ತು. ಆದರೂ ಅದು ಲೋಕದ ಬಳಿಕೆಯಲ್ಲಿರದೆ, ತೀರ ಸ್ವಲ್ಪಸಂಖ್ಯಾಕ ಮಕ್ಕಳುಳ್ಳದ್ದಾಗಿ ಬಸವಾದಿಪ್ರಮಥರು ಅವತರಿಸುವಕಾಲಕ್ಕೆ ಮುಟುಕಳಿಗೆ ಬಂದಿತ್ತು. ಬಸವಾದಿ ಪ್ರಮಥರು, ತಮ್ಮ ಅಗಾಧ ಮಹಿಮೆಯಿಂದ ಈ ಸಾಲೆಯನ್ನು ಎಲ್ಲರಿಗೂ ಕಲಿಯಲು ಬರುವಹಾಗೆ ಲೋಕದ ಬಳಿಕೆಯಲ್ಲಿ ತರಲು, ಕಲಿಯಲು ಎಷ್ಟೋ ಜನರು ಮುಂದೆಬಂದರು. ಅವರಲ್ಲಿ ಯೋಗ್ಯರಾದವರನ್ನೇ ತಮ್ಮ ದಿವ್ಯದೃಷ್ಟಿಯಿಂದ ಆಯ್ದು ಈ ಸಾಲೆಯ ಸಂಖ್ಯೆಯನ್ನು ಬೆಳೆಸಿದರಷ್ಟೇ! ಅದರೊಳಗೆ ಈ ಸಾಲೆಯಲ್ಲಿ ಮೊದಲಿನಿಂದಲು ಇದ್ದವರು, ಲಿಂಗದ ನೆಲೆಯು ಹತ್ತದೆ ಕಠಿಣವಾದ ಆಚರಣೆಯನ್ನು ಆಚರಿಸಿ ಆಚರಿಸಿ, ನಗಸೋತು ಬಹಿರ್ಮುಖರಾಗಿ ಶುದ್ಧರಕ್ತದ ಅಭಿಮಾನದಿಂದ ಲೋಕದ ಬಳಿಕೆಯಲ್ಲಿ ಕೂಡಿಕೊಳ್ಳುವ ಅನುಮಾನದಲ್ಲಿದ್ದರು. ಇವರ ನಡೆಯಾದರೂ

ಲೋಕದಬಳಿಕೆಯಲ್ಲಿರದ ಆ ಪರಿಸ್ಥಿಯಲ್ಲಿ ಲಳಿಗೆಯೊಳಗಿನ ಸ್ವಾಮಿಯು ಬಾಲದಂ ತೆ ತೋರಿಕೆಗೇನೋ, ಸರಳವಾಗಿದ್ದಂತೆ ಇದ್ದಿತು. ಲೋಕದಬಳಿಕೆಯಲ್ಲಿ ಬಂ ದೊಡನೆಯೇ ಚಿತ್ತಪಲ್ಲಟವಾಗಿ ಇಂದ್ರಿಯಗಳು ಚಲಿಸಹತ್ತಿದವು. ಸತ್ಯಶರಣರ ಪರಿಶುದ್ಧವಾದ ಪರಿಸ್ಥಿತಿಯಲ್ಲಿ ಅದನ್ನು ಬಚ್ಚುವದಾಗಲಿಲ್ಲ. ಭಕ್ತಿಯೋಗದಲ್ಲಿ ಬಲ್ಲಿದನೂ, ಕರುಣಾಳ ತನದಲ್ಲಿ ತಾಯಿಮಿತ್ರವಿತ್ರರಿಗಿಂತ ಹೆಚ್ಚಿನವನೂ ಆದ ಬಸವಣ್ಣನ ಮುಂದೆ ಇದ್ದಕ್ಕಿದ್ದಂತೆ ಇಡಬೇಕಾಯಿತು. ಬಸವನಾದರೂ ಇವರನ್ನು ಕಂಡಕೂಡಲೆ! ಇವರ ಅಂತರಂಗವನ್ನು ಕಂಡುಹಿಡಿದನು. ಆದರೆ ಮಾಡುವದೇನು! ಅವರು ಮೊದಲಿನಿಂದಲೂ ಲೋಕಬಳಿಕೆಯಿಂದ ದೂರಿದ್ದು ಕಠಿಣ ನಿಯಮಗಳಲ್ಲಿ ಬ್ರಹ್ಮಚರ್ಯವನ್ನು ಪರಿಪಾಲಿಸಿದವರೂ, ಶಾಸ್ತ್ರಕೋವಿದ ರೂ, ವಿಶಾಲಮತಿಗಳೂ, ಮತಾಭಿಮಾನಿಗಳೂ, ಪಂಚಪಾತಕದೂರರೂ ಆಗಿ ರುವದನ್ನೂ, ವೀರಶೈವಮತದಲ್ಲಿದ್ದ ಕೊರತೆಯನ್ನೂ ತುಂಬಿ ಪರಿಪೂರ್ಣಗೊಳಿಸಿ ಲಿಂಗಾಂಗಿ ಧರ್ಮವನ್ನಾಗಿಸಿ, ಅವನ್ನೇ ಪ್ರಯೋಗಿಸಿ ಪ್ರಚುರಗೊಳಿಸಲು ಬಂ ದಿರುವದನ್ನೂ ಮನದಂದು, ಅವರನ್ನು ಸಾಲೆಯಿಂದ ಹೊರಗೆ ಹಾಕಬಾರದಾಯಿ ತು ಲೌಕಿಕದ ಸಾಮಾನ್ಯಧರ್ಮಕ್ಕನುಸರಿಸಿಯಾದರೂ ಇಟ್ಟುಕೊಳ್ಳಬೇಕಾ ಯಿತು. ಜೀವರು ತಮ್ಮ ಸತ್ಕರ್ಮದ ಪುಣ್ಯಫಲವನ್ನು ಭೋಗಿಸಲು, ಭೋಗ ಭೂಮಿಯಾದ ಸ್ವರ್ಗವನ್ನು, ಪರಮಾತ್ಮನು ನಿರ್ಮಿಸಿದಂತೆ, ಈ ದ್ವಿತೀಯ ಶಂ ಭುವಾದ ನಿಜಧರ್ಮಮೂರ್ತಿಯು, ಅವರ ಭೋಗಕಾರ್ಯದಿಂದ ಚಿತ್ತ ಸ್ಥಿರಪ ಡಿಸಲು, ತಾನೂ ತನ್ನ ಕಲ್ಯಾಣವೆಂಬ ಕೈಲಾಸದಲ್ಲಿ, ಅವರಂತೆ ಕೆಲವು ಚಿತ್ತ ಪಲ್ಲಟರಾದ ಸ್ತ್ರೀಪುರುಷರನ್ನು ಆಯ್ದು ಸೂಳೆಗೇರಿಯೆಂಬ ಸ್ವರ್ಗವನ್ನು ಅವರಿಗಾಗಿ ನಿರ್ಮಿಸಿಕೊಟ್ಟನು. ಇದು ಲೌಕಿಕಧರ್ಮದೃಷ್ಟ್ಯಾ ಹೊಲ್ಲದ್ದಾಗಿ ಭಾಸವಾಗು ವದು. ಹೊಡೆಪೂ ಬಡಿಪೂ ಭೀತಿಯಿಂದ ಪ್ರತಿಬಂಧಿಸಿ, ಅವರು ಒಳ್ಳೆಯವರಾ ಗಿ ನಡೆಯುವಂತೆ ಮಾಡಿಕೊಳ್ಳುವಷ್ಟು ಚಾತುರ್ಯವು ಬಸವಣ್ಣನಲ್ಲಿ ಇದ್ದಿಲ್ಲ ವೆಂದು ಅನ್ನಲಿಕ್ಕೆ ಬರುವಂತಿಲ್ಲ. ಏಕಂದರೆ ಆವನು ಪ್ರತ್ಯಕ್ಷ ಮಂತ್ರಿಯಾ ಗಿದ್ದನು ಹಾಗೆಮಾಡುವದು ನಿಜಧರ್ಮದೃಷ್ಟ್ಯಾಮೂರ್ಖತನವಾಗುವದು ಅಂತಹ ಮೂರ್ಖನೂ ಅವನಲ್ಲ! ನೋಡಿರಿ.

"ತಾಸಾಂ ಮಾಹೇಶ್ವರೀ ಶಕ್ತಿಃ ಸರ್ವಾನುಗ್ರಾಹಿಕಾ ಶಿವಾ। ಧರ್ಮಾನುವ ರ್ತನಾದೇವ ಪಾಶ ಇತ್ಯುಪಚರ್ಯತೇ" ಎಂಬೀ ಆಗಮದ ಉಕ್ತಿಯು ಪರಮಾ ತ್ಮನ ಸಹಜಧರ್ಮವನ್ನನುಲಕ್ಷಿಸಿ ಹೊರಟದ್ದಾಗಿರುವದು. ಪರಮಾತ್ಮನು ಆತ್ಮ ರ ಉದ್ಧಾರಾರ್ಥವಾಗಿ ಮೊದಲು ಅವರಿಗೆ ಅವರ ಚಿದ್ಧರ್ಮದಲ್ಲಿಯೇ, ಅವರವ ರ ಇಚ್ಛಿತ ಫಲಗಳನ್ನು ಉಣ್ಣಿಸಿ ನಿವೃತ್ತಿಕಲೆಗೆ ತಿರುಗಿಸಲು ಅನುಗ್ರಹಿಸುತ್ತಿರುವ ದರಿಂದ, ಲೋಕದಲ್ಲಿ ಮಾಯಾ-ಪಾಶವು ಹಬ್ಬಿರುವದು. ಈ ಪಾಶದಲ್ಲಿ ಬೆಂದು ಬೆಂಡಾಗಿ ಹಿಂದಿರುಗಲು, ನಿವೃತ್ತಿಕಲೆಯಿಂದ ಅವರ ಮೋರೆಯು ಪುನಃ ತಿರುಗ

ದಂತೆ ಚಿದ್ಧರ್ಮದ ವಿರುದ್ಧವಾಗಿ ಅನುಗ್ರಹಿಸುತ್ತ ಕಾಯ್ದುಕೊಳ್ಳುತ್ತಿರುವನು,
ಯಮಧರ್ಮನೂ ಕೂಡ ಪಾಪಿಗಳಿಗೆ ಕಡುತರವಾದ ಶಿಕ್ಷೆಯನ್ನು ವಿಧಿಸುವನೊ
ದಲು, ಅವರ ಪುಣ್ಯದಂಶವೇನಾದರೂ ಇದ್ದರೆ, ಅದರ ಫಲವನ್ನು ಉಣ್ಣಿಸುವನು.
ಬಸವಣ್ಣನು ಆ ಪರಮಾತ್ಮನ ಧರ್ಮಮೂರ್ತಿಯೇ ರೂಪುಗೊಂಡು ಬಂದವನಾ
ದುದರಿಂದ, ಆ ಚಿತ್ತಪಲ್ಲಟರಾದ ಹಳೇ ವಿದ್ಯಾರ್ಥಿಗಳನ್ನು ಈ ರೀತಿ ಮರ್ಯಾ
ದಿಸಿ ಅವರ ಪುಣ್ಯಫಲವನ್ನು ಉಣ್ಣಹಚ್ಚಿದ್ದು, ಯಾವರೀತಿಯಿಂದಲೂ ಎಂದೂ
ಅಧರ್ಮವಾಗಲರಿಯದು. ಹಾಗೆಮಾಡದೆ ಹೊರಗೆ ಹಾಕಿದ್ದರೆ, ಲೌಕಿಕರು,
ಅವರ ತತ್ವಗಳನ್ನೇ ತಕ್ಕೊಂಡು ಅವರ ಮೇಲೆ ತಿರುಗಿಬಿದ್ದನೆಂದು ಅಪವಾದ ಕೊ
ಡಲು ಹಿಂಜರಿಯುತ್ತಿದ್ದಿಲ್ಲ! ಈ ರೀತಿ ಬಸವಣ್ಣನು ತನ್ನ ಭಕ್ತಿಯೋಗಕ್ಕೂ ನಿಜ
ಧರ್ಮಕ್ಕೂ ಕುಂದು ಬಾರದಂತೆ ಅವರವರ ಚಿದ್ಧರ್ಮದಲ್ಲಿ ಅನುಕೂಲಿಸಿ,
ದೇಹಾಂತರಗಳಿಂದಾಗುವ ಸ್ಥಿತಿಯನ್ನು ಅದೇ ದೇಹದಲ್ಲಿಯೇ ಭೋಗಿಸಿ ತಿದ್ದಿ
ಕೊಳ್ಳುವಹಾಗೆ ಮಾಡಿದನು. ತಮ್ಮ ಪರಿಶುದ್ಧವಾದ ಪರಿಸ್ಥಿತಿಯಲ್ಲಿ ಹೀಗೆ
ಅನುಕೂಲಿಸಿಕೊಟ್ಟು, ತಿದ್ದಲು ಪ್ರಯತ್ನಿಸುವದು ಸಹಜಧರ್ಮದ ರೀತಿಯು.
ಮೇಲಾಗಿ ಬಸವನು ಬರೇ ಭಕ್ತಿಯ ಮಾರ್ಗವನ್ನಷ್ಟು ತೋರಿಸಿಕೊಟ್ಟು ಹೋ
ಗುವ ಪೂರ್ತಿ ಬಂದವನಲ್ಲ! ಹಾಗಿರುತ್ತಿದ್ದರೆ, ತಾನೊಬ್ಬನೇ ಬರುತ್ತಿದ್ದನು.
ಸರ್ವಾಂಗಸುಂದರವಾದ ಲಿಂಗಾಂಗಿಧರ್ಮದ ನಡೆಯನ್ನು ತೋರಿಸಿ, ಲೋಕ
ವನ್ನು ಸದ್ಧರ್ಮದ ಹಾದಿಗೆ ಹಚ್ಚಲು ಸಕಲ ಸಮ್ಮೇಲನದಿಂದ ಬಂದವನು.
ಲಿಂಗಾಂಗಿಧರ್ಮವು ನಿಜಭಕ್ತಿಯೋಗದ ತಳಹದಿಯಮೇಲೆ ನಿಲ್ಲುವದಾದು
ದರಿಂದ ಬಸವಣ್ಣನು ಭಕ್ತಿಸ್ಥಲದ ಆಚರಣೆಯನ್ನು ಕಲಿಸಿ ತೋರಿಸುವದನ್ನು
ಅಂಗೀಕರಿಸಿ ಇಡೀ ಲಿಂಗಾಂಗಿಧರ್ಮದ ಭಾರವನ್ನು ವಹಿಸಿದವನು. ಆದುದ
ರಿಂದ ಇವನು ಈ ಲಿಂಗಾಂಗಿಧರ್ಮವೆಂಬ ಸಾಲೆಯ ಆರಂಭದ ಇಯತ್ತೆ
ಯನ್ನು ಕಲಿಸಲು ತನ್ನ ಕಡೆಗೆ ಇಟ್ಟುಕೊಂಡ ಮುಖ್ಯ ಶಿಕ್ಷಕನಾಗಿದ್ದನು. ಉಳಿದ
ಸ್ಥಳಗಳನ್ನು ಕಲಿಸಿ ತೋರಿಸುವ ಬೇರೆ ಬೇರೆ ಉಪಶಿಕ್ಷಕರಿದ್ದರು. ಅವರೆಲ್ಲರೂ
ತಮ್ಮ ತಮ್ಮ ಕಾರ್ಯವನ್ನು ಪ್ರತ್ಯಕ್ಷನಡೆನುಡಿಯಿಂದ ಕಣ್ಣಿಗೂ, ಕಿವಿಯೊಳ
ಗೂ ನೆಡುವಹಾಗೆ ಒಂದೇಸವನೆ ನಡಿಸೇ ಇದ್ದರು, ಇಂತಹ ಪರಿಸ್ಥಿತಿಯು
ಇರದೆ, ಬಸವಣ್ಣನಿಗೆ ಹಾಗೆ ಎಂದೂ ಮಾಡಲು ಬರುತ್ತಿದ್ದಿಲ್ಲ. ರೋಗಿಯು
ಇಚ್ಛಿಸಿದುದನು ಕೊಟ್ಟು, ರೋಗನಿವಾರಣ ಮಾಡುವ ಸಾಮರ್ಥ್ಯವಿಲ್ಲದ ವೈದ್ಯ
ನು ರೋಗಿಗೆ ಎಂದೂ ಬರಿಷಿಣವನ್ನು ತಿನಗೊಡನು. ಪರಮಾತ್ಮನಲ್ಲಿ ಎಂತಹ
ವನನ್ನಾದರೂ ಉದ್ಧರಿಸುವ ಸಾಮರ್ಥ್ಯವು ಇಲ್ಲದಿದ್ದರೆ ಜೀವಿಗಳ ಚಿದ್ಧರ್ಮದಲ್ಲಿ
ಎಂದೂ ಅನುಗ್ರಹಿಸುತ್ತಿದ್ದಿಲ್ಲ! ಮೇಲೆ ಪರಿಪೂರ್ಣವೂ ಸರ್ವಾಂಗಸುಂದರವೂ
ಆಗುವಹಾಗೆ ವ್ಯವಸ್ಥೆಯು ಇರದಿದ್ದರೆ, ಬಸವಣ್ಣನಿಗೆ ಕೇವಲ ಶಿವಲಾಂಛನವನ್ನ
ಷ್ಟೆ ಕಂಡು ಭಕ್ತಿಯನಾಚರಿಸಲು ಎಂದೂ ಬರುತ್ತಿದ್ದಿಲ್ಲ! ತಾನು ಬೇಕಾದಹಾಗೆ

ಹೊಳವುಹಾಕಿಕೊಟ್ಟರೂ ಮತ್ತೊಬ್ಬರು ಎಲ್ಲ ಅವಯುವಗಳನ್ನು ತಿದ್ದಿ, ಸರ್ವಾಂ ಗ ಸುಂದರಮೂರ್ತಿಯನ್ನು ರೂಪಿಸುವವರು ಇದ್ದಲ್ಲಿ ಆ ಕಾರ್ಯವು ಪೂರ್ಣ ವಾಗುವದು. ಅನಂತ ವ್ಯಕ್ತಿಗಳು ಕೂಡಿ ಮಾಡಿ ತೋರಿಸುವದಾದ ಕಾರ್ಯ ದಲ್ಲಿ ಒಬ್ಬನ ಕಾರ್ಯವನ್ನೇ ಲಕ್ಷಿಸಿ, ಮುಂದುಮಾಡಲಿಕ್ಕಾಗದು. ಈ ಲಿಂಗಾಂ ಗಿಧರ್ಮದಲ್ಲಿ ನಿರಹಂಕಾರವೃತ್ತಿಯೇ ಮುಖ್ಯತತ್ತ್ವವಾಗಿರುವದರಿಂದ ಯಾ ರಿಗೂ "ನಾನು ಇಂತಹದ್ದೊಂದು ಮಾಡಿದೆನೆಂಬ ಭಾವವು ಮೂಡತಕ್ಕದ್ದಿರು ವದಿಲ್ಲ ಆ ಭಾವವು ಮೂಡಿದೊಡನೆಯೇ ನಿಜಲಿಂಗದ ಸಕೀಲವು ತಪ್ಪಿ ಲಿಂಗಭವಿ ಯಾಗುವನು. ಆದುದರಿಂದ ಈ ಧರ್ಮದಲ್ಲಿ ಎಲ್ಲರೂ ಸರಿಸಮಾನರು. ನಿರ ಹಂಕಾರದಲ್ಲಿ ಕಾರ್ಯಮಾಡುವ ಸಾಮರ್ಥ್ಯವಿದ್ದವರೇ ಇದರಲ್ಲಿ ಕೂಡಿಕೊಂಡು ಯಾವದೊಂದು ಕಾರ್ಯವನ್ನು ಮಾಡಲು ಸಹಜ ಅಧಿಕಾರವುಳ್ಳವರೇ ಹೊರತು ಮಿಕ್ಕಾದವರೆಲ್ಲ ಅನಧಿಕಾರಿಗಳು. ಬಸವಣ್ಣನು ಒಮ್ಮೊಮ್ಮೆ ಭಕ್ತಿಯ ಪರವಶ ತೆಯಿಂದ ನುಡಿದ ನುಡಿಯು ಮತ್ತೊಮ್ಮೆ ಚಿತ್ತದಲ್ಲಿ ಮೂಡಿದ್ದಾದರೆ ಅಹಂಕಾ ರಕ್ಕೆ ಕಾರಣವಾದೀತೆಂದು ಉಳಿದ ಶರಣರು ಕೂಡಲೆ ಆ ನುಡಿಯನ್ನು ಖಂಡಿಸಿದ ಸಂಗತಿಗಳು ಪುರಾಣದಲ್ಲಿ ದೊರೆಯುವವು. ಶರಣರೆಲ್ಲರೂ ಬಸವಣ್ಣನೇ ತಮ್ಮೊ ಡೆಯನೆಂದು ಪರಮಾತ್ಮನಿಂದ ಅರಿತಾಗ್ಯೂ ಬಸವನು ಎಲ್ಲರ ಕಿಂಕರನಾಗಿ ಆಚ ರಿಸಿದನು. ನಾನು ಒಡೆಯನೆಂದು ಅಹಂಕಾರವು ಮೂಡಿದೊಡನೆಯೇ ಕೈಂಕ ರ್ಯವು ನಷ್ಟವಾಗಿ ನೂತದ್ದೆಲ್ಲ ಹಂಜಿಯಾಗುವದೆಂಬ ತತ್ವವನ್ನು ಬಸವಣ್ಣನು ಪರಿಪೂರ್ಣವಾಗಿ ಬಲ್ಲಿದನಾಗಿದ್ದನು. ಈ ಬಗ್ಗೆ ತಾನೇ ತನ್ನ ವಚನದಲ್ಲಿ "ಮಾಡುವ ಭಕ್ತಂಗೆ ಮಾನಹೀನವಾದುದೇ ಕಡೆ" ಎಂದು ಹಾಡಿಕೊಂಡಿ ರುವನು.

ಇವೆಲ್ಲ ಸಂಗತಿಗಳಮೇಲಿಂದ ಹೊರಡುವ ತಾತ್ಪರ್ಯವೇನಂದರೆ—ವೀರ ಶೈವಲಿಂಗಾಂಗಿಧರ್ಮದ ನಡೆನುಡಿಗಳನ್ನು ಬರೇ ಬಸವಣ್ಣನ ನಡೆನುಡಿಯಷ್ಟನ್ನೇ ಲಕ್ಷಿಸಿ ಹೇಳುವದಿರುವದಿಲ್ಲ! ಹಾಗೆ ಹೇಳುವದು ತಕ್ಕರು ತಮ್ಮ ತಕ್ಕತನವನು ಸಾಧಿಸುವ ಯುಕ್ತಿವಾದವಾಗಿರುವದು. ಬಸವಣ್ಣನ ನಡೆನುಡಿಯಲ್ಲಿ ತೋರು ವ ಕುಂದುಕೊರತೆಗಳನ್ನು ತುಂಬಿ ಸರ್ವಾಂಗಸುಂದರವನ್ನಾಗಮಾಡುವ ಶರಣ ಸಮೂಹವಿದ್ದೇ ಇತ್ತು. ಕಾರಣ ಎಲ್ಲ ಶರಣಸಮೂಹದ ನಡೆನುಡಿಯನ್ನು ಲಕ್ಷಿ ಸಿ ಹೇಳಬೇಕಾಗುವದು. ಏಕಂದರೆ ಯಾವದೊಂದು ನಿರಹಂಕಾರದ ಯೋಗ ದಲ್ಲಿ ಸಾಗಿಸುವ ಸಂಸ್ಥೆಯ ಕೆಲಸವನ್ನು ಒಂದೇ ವ್ಯಕ್ತಿಯ ಕೆಲಸದಿಂದ ಅಳಿಯ ಲಿಕ್ಕೆ ಬರುವದಿಲ್ಲ. ಯಾವತ್ತೂ ವ್ಯಕ್ತಿಗಳ ಕೆಲಸವನ್ನು ಪರ್ಯಾಲೋಚಿಸಬೇ ಕಾಗುವದು. ಆದುದರಿಂದ ಬಸವನು ತನ್ನ ಭಕ್ತಿಯ ಸ್ಥಳಕಟ್ಟಳೆಯ ಮೇರೆಗೆ ಅವರನ್ನು ಆದರಿಸಿದಾಗ್ಯೂ, ಅವನ ಹೊರತು ಅವನ ಮೇಳದೊಳಗಿನವರು ಯಾರೂ ಅಂತಹ ವಿಟಜಂಗಮರನ್ನು ಅಪ್ಪಿಕೊಂಡದ್ದು ಎಲ್ಲಿಯೂ ಕಂಡುಬರು ವದಿಲ್ಲ. ಇದಕ್ಕೆ ಅವರು ಹಾಡಿದ ವಚನ ಗ್ರಂಥಗಳೇ ಸಾಕ್ಷಿ!

ಆತ್ಮರು ತಮ್ಮ ಒಂದೊಂದು ವಿಕಾರವನ್ನು ಒಮ್ಮೆಲೇ ತೊಳಕೊಳ್ಳುವದು ಎಂದೂ ಆಗದ ಮಾತು. ಅದು ಕ್ರಮವಾಗಿ ತೊಳಕೊಳ್ಳುವದರಿಂದ ಪರಿಹರಿಸುವದು. ಆಚಾರದಲ್ಲಿ ಸ್ವಲ್ಪ ಹೊರದೃಷ್ಟಿಯಾದರೆ ಸಾಕು. ಯಾವ ಅನುಕೂಲ ಪರಿಸ್ಥಿತಿಯು ತಮ್ಮನ್ನು ಉದ್ಧರಿಸಲು ಕಾರಣವಾಗಿರುವದೋ, ಅದೇ ಅವರನ್ನು ಬಂಧಿಸಲು ಕಾರಣವಾಗುವದು. ಸೃಷ್ಟಿಯ ನಿಯಮಗಳೆಲ್ಲ ಹೀಗೆಯೇ! ಅಂತೇ " ಮನ ಏವ ಮನುಷ್ಯಾಣಾಂ ಕಾರಣಂ ಬಂಧಮೋಕ್ಷಯೋಃ ಎಂದು ಹೇಳಿರುವರು. ಬಸವಣ್ಣನು ಮಾಡಿಕೊಟ್ಟ ಅನುಕೂಲತೆಯೂ, ಆಯಾಸ್ಥಳಕಟ್ಟಿನಗುರುಗಳ ( ಉಪಶಿಕ್ಷಕರ) ನಡೆನುಡಿಯೂ ಹೊರಮುಖರಾಗಿ ವ್ಯವಹರಿಸುವ ಬ್ರಹ್ಮಚಾರಿಗಳು ಮತ್ತಿಷ್ಟು ಲಂಡರೂ, ಭಂಡರೂ, ಲಜ್ಜೆಗೇಡಿಗಳೂ ಆಗುವಂತೆ ಕಾರಣವಾದವು. ತಾವು ಎಷ್ಟು ಪ್ರಯತ್ನಿಸಿದರೂ ಅವರ ವೃತ್ತಿಯು ಸಮಾಜದ ಸೂತ್ರಗಳನ್ನು ಸುಸೂತ್ರವಾಗಿ ಸಾಗಿಸಿಕೊಂಡು ಹೋಗುವಷ್ಟು ತಿದ್ದದಿರುವದನ್ನು ಕಂಡು, ಶರಣರು ತಾವು ವೈಮರೆಯಾಗುವ ಸಮಯವು ಬರಲು, ಇಂತಹವರ ಯೋಗದಿಂದ ಸಮಾಜದ ಮೇಲಾಗುವ ದುಷ್ಟ ಪರಿಣಾಮವನ್ನು, ತಮ್ಮ ದಿವ್ಯದೃಷ್ಟಿಯಿಂದಲೂ, ಸ್ವಾನುಭಾವದಿಂದಲೂ ಕಂಡು ಹಿಡಿದು, ಭವಿಷ್ಯವನ್ನು ಹಾಡಿ, ಶಿವಾಂಶಿಕರನ್ನು ಎಚ್ಚರಿಸಿರುವರು. ಅಲ್ಲದೆ ಅವರು ಈ ತುಂಡ ಜಂಗಮರ ತಂತ್ರೋಪಾಯಗಳಿಗೆ ಒಳಪಡದೆ ಶರಣಮಾರ್ಗದಲ್ಲಿಯೇ ಸಾಗುವಕುರಿತು, ತಮ್ಮ ದಿವ್ಯಾನುಭವವನ್ನೇ ವಚನರೂಪದಿಂದ ಲೋಕದ ಮುಂದಿಟ್ಟಿರುವರು. ಶ್ವೇತನು ತನ್ನ ಸ್ವರ್ಗಸುಖದ ಒಂದೇ ಒಂದು ರಾತ್ರಿಯನ್ನು ಭೋಗದಲ್ಲಿ ಕಳೆಯದೆ ಶಿವಪೂಜೆಯಲ್ಲಿ ಕಳೆದುದರಿಂದ ನರಕಯಾತನೆಯನ್ನು ನೀಗಲಾಡಿಕೊಂಡು, ಕೈಲಾಸದ ಗಣಪದವಿಗೆ ಸಲ್ಲಿದನಷ್ಟೇ! ಆ ಮೇರೆಗೆ ಬಸವಾದಿ ಪ್ರಮಥರು ವೈಮರೆಯಾಗುವಷ್ಟರಲ್ಲಿ ಇವರು ತಮ್ಮ ಸುಕೃತದ ಫಲವನ್ನು ಭೋಗಿಸುತ್ತ ನಿಜಭಕ್ತಿಯೋಗವನ್ನು ಸಾಧಿಸಿಕೊಂಡವರಾಗಿದ್ದಾರೆ. ಇಷ್ಟೊತ್ತಿಗೆ ನಮ್ಮ ಸಮಾಜವು ಯಾವ ಉನ್ನತಾಸನದಲ್ಲಿ ವಿರಾಜಮಾನವಾಗುತ್ತಿತ್ತೆಂಬದನ್ನು ವಾಚಕರೇ ಊಹಿಸಲಿ! ಪುಣ್ಯದಂಶವನ್ನು ಉಂಡ ಪಾಪಿಯು ನರಕಕ್ಕೆ ಭಾಜನವಾಗುವಂತೆ ತಮ ಪುಣ್ಯಸಂಗ್ರಹವನ್ನೆಲ್ಲ ಉಂಡು ತೀರಿಸಿದ ಅಂದಿನ ತುಂಡ ಮಿಂಡ ಲಂಡ ಭಂಡರೂ, ವ್ಯಭಿಚಾರಿಗಳೂ ಆದ ದುಷ್ಟಜಂಗಮರು ತಾವಾಗಿಯೇ ಶಿಕ್ಷೆಗೆ ಪಾತ್ರತೆಯನ್ನು ಹೊಂದಿರುವರು. ಮೇಲೆ ಸರ್ವಾಂಗಸುಂದರವನ್ನಾಗಿಸುವ ವ್ಯವಸ್ಥೆಯು ಇಲ್ಲದೆ ಮೂಢಭಕ್ತಿಯನ್ನಾಚರಿಸಬೇಕೆಂದು ನಮ್ಮ ತತ್ವಗಳು ಹೇಳುವದಿಲ್ಲ! ಮತ್ತು ಇದು ಅಂತಹ ಕಣ್ಣುಮುಚ್ಚಿ ಆಚರಿಸುವ ಸಮಯವೂ ಅಲ್ಲ! ಕೆಳಗಿನ ಸಂಗತಿಯಿಂದ ಅದು ಸ್ಪಷ್ಟವಾಗುವದು. ಕಾರಣ ಯಾವದೂ ಅನುಮಾನ ಮಾಡದೆ ಇಷ್ಟರನ್ನು ತಳ್ಳುವದೊಂದೇ ಮೊದಲಿಗೆ ಮಾಡತಕ್ಕ ನಿಜಧರ್ಮದಕಾರ್ಯವಾಗಿರುವದು.

ಭಕ್ತರು ಭಕ್ತಿಯಲ್ಲಿ ಬಲ್ಲಿದರಾಗಿ ಲಿಂಗಸಮರಸವನ್ನು ಹೊಂದಲು, ಬಾಹ್ಯದ ಅಂಶುದ್ಧಿಗಾಗಿ ಇತ್ತ ಇಷ್ಟವಿಡಿದು, ಅಷ್ಟಾವರಣದ ಬಳಿಕೆಗಾಗಿ ಭಕ್ತ ಗುರುಜಂಗಮಗಳು ಬೇಕಾಗುವದರಿಂದ, ಪೂಜ್ಯಪೂಜಕವ್ಯವಸ್ಥೆಗಳಿರುವವು ಆದರೆ ನಾವೇ ಯಾವಾಗಲು ಪೂಜ್ಯರೆಂದು ಯಾರೂ ತಿಳಿಯಲಾಗದು. ಭಕ್ತಿಯೋಗದಲ್ಲಿ ಬಲ್ಲಿದರೆಲ್ಲರೂ ಪೂಜ್ಯಪೂಜಕರು. ಆದುದರಿಂದ ಪ್ರತಿಯೊಂದು ಭಕ್ತವ್ಯಕ್ತಿಯಲ್ಲಿ ಪೂಜ್ಯಪೂಜಕ ಸ್ಥಿತಿಗಳು ಅವರು ಶೂನ್ಯಲಿಂಗ ಸಂಪಾದಿಸಿ, ಸುಟ್ಟಧಾರದಂತೆ ದೇಹವಿಡಿದು ವ್ಯವಹರಿಸುವವರಾದರೂ ಸ್ವಾಭಾವಿಕವಾಗಿ ಇದ್ದೇ ಇರುವವು. ಪರಮಾತ್ಮನು ಲೋಕಪೂಜ್ಯನೂ, ಲೋಕಸೇವಕನೂ ಆಗಿರುವದನ್ನು ಕಂಡೂ ಕಂಡು ನಾವೇ ಮಾತ್ರ ಪೂಜ್ಯರೆಂದು ಭಾವಿಸುವದು ಆತ್ಯಂತಘಾತಕವಾದುದು ವೀರಶೈವಮತವನ್ನು ಲಿಂಗಾಂಗಿಯ ನಡೆನುಡಿಯಿಂದ ಪೂರ್ಣಗೊಳಿಸಿ, ಪರಮಾತ್ಮನ ಸಾಮರಸ್ಯಯೋಗವನ್ನು ಕಲಿಸಿ ಹೋಗಲು ಬಂದ ಸತ್ಯಶರಣರು ತಮ್ಮಲ್ಲಿ ಎರಡುಭಾಗಗಳನ್ನು ಮಾಡಿ, ಒಂದುಭಾಗವು ಸರ್ವಾಂಗಶುದ್ಧವಾದ ಭಕ್ತಿಯೋಗಕ್ಕೂ, ಮತ್ತೊಂದು ಭಾಗವು ಸರ್ವಾಂಗಶುದ್ಧವಾದ ಜ್ಞಾನಯೋಗಕ್ಕೂ ಪಾಲುಗಾರರಾಗಿ ನಿಜಲಿಂಗಸೂತ್ರವಿಡಿದು, ನಿರಹಂಕಾರದ ನಿಜೈಕ್ಯತೆಯಲ್ಲಿ ಪ್ರಯೋಗಿಸಿದರು. ಆದುದರಿಂದ ಭಕ್ತಿಯೋಗದವರು ಒರೇ ಜ್ಞಾನವನ್ನೆದುರಿಟ್ಟು ಹೇಳಿದುದರಿಂದ ಅಂಗರ ಯೋಗ್ಯಾಯೋಗ್ಯ ವಿಚಾರಗಳು ಅವರ ವಚನಗಳಲ್ಲಿ ಅಷ್ಟೊಂದು ಸ್ಪಷ್ಟವಾಗಿ ಪ್ರತಿವಾದಿಸಿರುವದಿಲ್ಲ! ಮತ್ತು ಜ್ಞಾನಯೋಗದವರು ಬರೇ ಲಿಂಗಸಮರಸಕ್ರಿಯೆಯನ್ನೇ ಎದುರಿಟ್ಟು ಹೇಳಿದುರಿಂದ ಅಂಗರ ಯೋಗ್ಯಾಯೋಗ್ಯ ವಿಚಾರಗಳು ಅವರ ವಚನಗಳಲ್ಲಿ ಸರಿಯಾಗಿ ಪ್ರತಿಪಾದಿಸಲ್ಪಟ್ಟರೂ ಲಿಂಗ ಸಂಬಂಧದ ವ್ಯಾಪಕತ್ವವು ಅಷ್ಟೊಂದು ಸ್ಪಷ್ಟವಾಗಿ ಪ್ರತಿಪಾದಿಸಿರುವದಿಲ್ಲ! ಆದುದರಿಂದ ಶುದ್ಧವಾದ ಭಕ್ತಿಯೋಗದ ನಡೆಯನ್ನು ಜ್ಞಾನಯೋಗವವರ ವಚನಗ್ರಂಥಗಳಲ್ಲಿಯೂ, ಶುದ್ಧವಾದ ಜ್ಞಾನಯೋಗವನ್ನು ಭಕ್ತಿಯೋಗದವರ ವಚನಗ್ರಂಥಗಳಲ್ಲಿಯೂ ಕಂಡುಕೊಳ್ಳತಕ್ಕದ್ದು. ಬಸವ ಚೆನ್ನಬಸವರನ್ನೇ ಭಕ್ತಿಜ್ಞಾನಯೋಗಗಳ ಭಾಗದವರು ಕ್ರಮವಾಗಿ ಮುಂದೆ ಮಾಡಿದುದರಿಂದ ಇವರೇ ಕ್ರಿಯಾಜ್ಞಾನಮೂರ್ತಿಗಳಾಗಿರುವರು. ಆದರೂ ಇವರಿಬ್ಬರ ವಚನಗಳಷ್ಟೇ ನಮ್ಮ ಲಿಂಗಾಂಗಿಧರ್ಮದ ತತ್ವಗಳನ್ನು ಸರ್ವಾಂಗ ಸುಂದರ ಮಾಡಲಾರವು ಎರಡೂ ಭಾಗದವರೆಲ್ಲರೂ ಹಾಡಿದ ವಚನಗಳ ಸಾರದಿಂದ ಭಾವಕ್ಕೇನು ಲಕ್ಷೀಲಾಗುವದೋ, ಆದನ್ನೇ ಕ್ರಿಯಾದೃಷ್ಟಿಯಿಂದಲೂ ಜ್ಞಾನದೃಷ್ಟಿಯಿಂದಲೂ ಲಕ್ಷಿಸಿ, ವಾಚಕ್ಕೆ ನಿಲುಕಿದಷ್ಟನ್ನು ತತ್ಕ್ರಿಯಾಸಾಮರಸ್ಯ ಯೋಗದಿಂದ ಆಚರಿಸುತ್ತ ನುಡಿದು ಬೋಧಿಸುವದಿರುವದು. ಹಾಗಲ್ಲದೆ ಸುಮ್ಮನೆ, ನನಗೆ ಓದಬರುವದು; ನನ್ನಂತಹ ಪಂಡಿತನು ನಾನೇ; ನನ್ನಂತಹ ಬಲ್ಲಿದನು ನಾನೇ! ಎಂದು ಒಣಹೆಮ್ಮೆಗೆ ಬಿದ್ದು, ಯಾವದೊಂದು ಗ್ರಂಥವ

ಅಧಾರವಿರುವದು, ಅಲ್ಲಿ ಆಧಾರವಿರುವದು ಎಂದು ಜನರ
ನ್ನು ಓದಿ, ಇಲ್ಲಿ ಅಧಾರವಿರುವದು, ಅಲ್ಲಿ ಆಧಾರವಿರುವದು ಎಂದು ಜನರ
ಬಾಯಿ ಬಡಿಯುವದು ಹೊಟ್ಟೆಹೊರಕೊಳ್ಳುವ ಬಾಯಬಡಕರ ಹೋರೆಯು.
ಹಾಗೆ ಎಂದೂ ಮಾಡಲಿಕ್ಕೆ ಹೋಗಬಾರದು ಅದರಿಂದ ಸಮಾಜದಮೇಲೆ ಬಹಳ
ಕೆಟ್ಟ ಪರಿಣಾಮವಾಗುವದು. ಈಗ ಆ ಪಚನಸಾರಮೂರ್ತಿಯೇ ಪ್ರಕಟವಾ
ಗಿ ಸೃಷ್ಟಿಯ ಸಹಜಧರ್ಮದಲ್ಲಿ ಜಗದ್ವ್ಯಾಪಿಯಾಗಿ ಕಾರ್ಯಮಾಡಲು ನಿಂತಿರುವ
ದರಿಂದ ಸರ್ವಸಾರಭೂತವಾದ ತತ್ವಾನುವರ್ತನಕ್ಕೇ ಜಯವಿರುವದಲ್ಲದೆ,
ಮತ್ತ್ಯಾತರಿಂದಲೂ ಕೇಳಬಾರದು. ಈಮಾತಿಗೆ ಓಲೆಯ ಭಂಡಾರ ಒಡೆದು
ಮುದ್ರಣರೂಪದಿಂದಲೇ ಲೋಕದಮುಂಪೆ ಬೀಳಹತ್ತಿರುವದೇ ಸಾಕ್ಷಿ! ಸೃಷ್ಟಿಯ
ಕಾರ್ಯದಲ್ಲಿ ಕ್ಷುಬ್ಧತೆಯುಂಟಾಗಿ ಅನಂತ ಉತ್ಪಾತಗಳು ಲೋಕದಲ್ಲಿ ಅಗ ಹತ್ತಿ
ರುವದೇ ಸಾಕ್ಷಿ! ಸ್ವರಾಜ್ಯದ ತತ್ತ್ವಗಳು ಗೊತ್ತಾಗಿ ಎಲ್ಲೆಲ್ಲಿಲ್ಲ ಅದರ ಕೋಲಾಹಲ
ವೆದ್ದಿರುವದೇ ಸಾಕ್ಷಿ!

ಹಿಂದಿನ ಅವತಾರದ ಕಾರ್ಯದಿಂದ ಭಕ್ತಿಯದೊಂದು ಭಾಗವನ್ನು ಪೂರಾ
ಪ್ರಯೋಗಿಸಿ ತೋರಿಸಿ, ಚೆನ್ನ ಬಸವಣ್ಣನ ಜ್ಞಾನದ ಪ್ರಯೋಗವನ್ನು ಆರಂಭಿಸ
ಲು ಶುದ್ಧಾಶುದ್ಧರಕ್ತದ ಪವಿತ್ರತೆಯ ಅಭಿಮಾನದಿಂದ ಬೆಳೆದ ಜಗತ್ತಿಗೆ ಅದು
ಒಪ್ಪಿಗೆಯಾಗದ ಮೂಲಕ, ಅಲ್ಲಿಗೆ ಪ್ರಯೋಗವನ್ನು ನಿಲ್ಲಿಸಿ, ಸತ್ಯಶರಣರೆಲ್ಲರೂ
ವೈಮರೆಯಾಗಬೇಕಾಯಿತು. ಅಂತಃಕರಣಗಳ ಸಿದ್ಧತೆಯು ಇದ್ದಹೊರತು
ಈ ಜ್ಞಾನಯೋಗದ ಆಚರಣೆಯನ್ನು ಏನೊಂದು ಪ್ರಯೋಗಿಸಲಿಕ್ಕಾಗದು.
ಶುದ್ಧಾಶುದ್ಧ ರಕ್ತದ ಅಭಿಮಾನದ ಬಳಿಕೆಯು ಶರೀರದ ಆರೋಗ್ಯವನ್ನೂ ದೇಹ
ದ ತಾಳಿಕೆಯನ್ನೂ ಉಂಟುಮಾಡೀತಲ್ಲದೆ, ಮುಕ್ತಿಯ ಮಾರ್ಗಕ್ಕೆ ಪ್ರತ್ಯಕ್ಷ ಸಾಧ
ನವಾಗಲಾರದು. ಆರೋಗ್ಯವನ್ನು ಕಾಯ್ದುಕೊಳ್ಳುವ ರಕ್ತವು ಆರೋಗ್ಯದೃಷ್ಟಿ
ಯಿಂದ ಶುದ್ಧವಾದುದಾದರೂ, ಲಿಂಗ ದೃಷ್ಟಿಯಿಂದ ಪವಿತ್ರವಾದುದಲ್ಲ! ಲಿಂಗ
ಸಾಮರಸ್ಯಯೋಗವಿಲ್ಲದೆ ಯಾವರಕ್ತವೂ ತನ್ನ ಪೂರ್ವಾಶ್ರಯವನ್ನು ಕಳೆದುಕೊಂ
ಡು ಪವಿತ್ರವಾಗಿ, ಮಂತ್ರಪಿಂಡವನ್ನಾಗಿಸಲಾರದು. ಸಮಾಜದ ಸೂತ್ರಧಾರಿಗ
ಳೇ ರಕ್ತದ ಅಭಿಮಾನಕ್ಕೆ ಆಶ್ರಯ ಕೊಟ್ಟಬಳಿಕ, ಅವರಿಗೆ ಶರಣರ ಅಗತ್ಯವು ಇಲ್ಲ
ದಂತಾಯಿತು. ಪೂರ್ವಾಶ್ರಯವನ್ನು ಮರೆತಲ್ಲದೆ ಲಿಂಗಾಂಗಿಧರ್ಮವನ್ನು
ಆಚರಿಸಲಿಕ್ಕಾಗದು. ಪೂರ್ವಾಶ್ರಯವನ್ನು ಮರೆಯದಿದ್ದ ವೀರಶೈವರು ಲಿಂಗಾಂ
ಗಿಧರ್ಮದ ಪವಿತ್ರವಾದ ಪಂಚಾಚಾರಷಟ್ಸ್ಥಲ ಅಷ್ಟಾವರಣಗಳ ಆಚರ
ಣೆಯನ್ನು ಬಳಿಸಹೋಗಲು, ಅವರ ಆಟವು, ಒಂದೇ ಪಂಚಾರತಿಯಲ್ಲಿ ಎಣ್ಣೆ ತು
ಪ್ಪಗಳನ್ನೆರಡೂ ತರಲು ಯತ್ನಿಸಿದ ಪೆದ್ದನ ಗತಿಯಾಯಿತು. ಪೂರ್ವಾಶ್ರಯವನ್ನು
ಹಿಡಿಯಲು ಲಿಂಗಕಳೆಯು ತಾನಾಗಿಯೇ ಇಲ್ಲದಂತಾಯಿತು. ಈ ಅಭಿಮಾನದಿಂ
ದ ಪವಿತ್ರವಾದ ಲಿಂಗಾಂಗಿಯ ಬಳಿಕೆಯನ್ನು ಬಳಿಸಹೋಗಲು ವೀರಶೈವಮತ
ದ ವ್ಯವಸ್ಥೆಯೂ ಕೆಟ್ಟುಹೋಯಿತು. ಈ ಗತಿಯು ಉಂಟಾಗಬಾರದೆಂದು ಸತ್ಯ

ಶರಣರು ಎಷ್ಟುಪರಿಯಿಂದ ಪ್ರಯತ್ನಿಸಿದಾಗ್ಯೂ, ಪಂಚಸೂತಕವಿರಹಿತವಾದ ಸತ್ಯಮಾರ್ಗಕ್ಕೆ ಅವರ ಅಂತಃಕರಣವೃತ್ತಿಯು ಸಜ್ಜಾಗಲಿಲ್ಲ. ಮತ್ತೂ ಅವರು ಶುದ್ಧಾಶುದ್ಧ ರಕ್ತಸಂಬಂಧವಾದ ಜಾತ್ಯಾಭಿಮಾನಕ್ಕೆಳಿಸಿದುದನು ಕಂಡು, ಅದರ ಫಲವನ್ನುಂಡು ಹದಗೊಳ್ಳಲ್ಲೆಂದು ವೈಮರೆಯಾಗಿ ಬಿಟ್ಟರು. ಬಹುಕಾಲದ ವರೆಗೆ ಲೋಕದ ಬಳಿಕೆಯಿಂದ ದೂರಿದ್ದು ಕಠಿಣನಿಯಮಗಳಲ್ಲಿ ಸಂಗ್ರಹಿಸಿಕೊಂಡಿದ್ದ ಪುಣ್ಯರಾಶಿಯನ್ನೇ ಹಾಳುಮಾಡಿಕೊಳ್ಳುವ ಮಾರ್ಗದಲ್ಲಿ ತಾವಾಗಿಯೇ ಹೆಜ್ಜೆಯ ನಿಟ್ಟದನು ಕಂಡು, ಸೃಷ್ಟಿಯ ಸಹಜಧರ್ಮಕ್ಕನುಸರಿಸಿ ಪರಮಾತ್ಮನು ಅವರನ್ನು ಪಾಶಾನುಗ್ರಹದಲ್ಲಿಯೇ ಅನುಗ್ರಹಿಸಬೇಕಾಯಿತು. ಪವಿತ್ರವಾದ ಲಿಂಗಾಂಗಿಧರ್ಮದ ಆಚರಣೆಯಲ್ಲಿ ಸೂತಕಗಳ ಅಭಿಮಾನವೇ ಗುರುಲಿಂಗಜಂಗಮದ ನಿಂದಕವೃತ್ತಿಯಾಗಿರುವದು. ಜಾತ್ಯಾದಿಸೂತಕಗಳಿಂದ ಲಿಂಗಾಂಗಿಧರ್ಮದ ನಿಂದಕವೃತ್ತಿಯವರೂ, ಅನಧಿಕಾರದ ಸ್ಥಿತಿಯಲ್ಲಿ ಲಿಂಗಾಂಗಿಧರ್ಮದ ಆಚರಣೆಯಿಂದ ವೀರಶೈವಮತಭ್ರಷ್ಟರೂ ಆದ ಅಯ್ಯಗಳು, ಭಕ್ತರು ಗುರುಲಿಂಗಜಂಗಮಕೆಂದು ಮಾಡಿದುದನೆಲ್ಲ, ತಾವೇ ತಮ್ಮ ಅಂಗಕ್ಕೆ ಉಂಡುಂಡು ಇಂದಿಗೆ ಅವರ ಪುಣ್ಯದ ರಾಶಿಯೆಲ್ಲ ನೀಶೇಷವಾಗಿ ಬಿಟ್ಟಿತು. ಮತ್ತು ಅವರ ಯೋಗ್ಯತೆಯು ಲೌಕಿಕಧರ್ಮದ ಶೂದ್ರರಿಗಿಂತ ಕಡೆಯಾಯಿತು. ಇವರ ಈ ಶೂದ್ರವೃತ್ತಿಯನ್ನೇ ನೋಡಿ, ಸರಕಾರದವರು ಈ ಸಮಾಜವನ್ನೇ ಶೂದ್ರಕೋಟಿಯಲ್ಲಿ ಎಣಿಸುವ ಭಾಗವು ಬಿತ್ತು. ಲಿಂಗಾಂಗಿಧರ್ಮದ ಪವಿತ್ರವಾದ ಆಚರಣೆಗಳು, ದೃಷ್ಟವಸ್ತುಗಳಿಗೆ ಹೋಲಿಸಿ ಹೇಳುವದಾದರೆ, ಬೆಂಕಿಯಸ್ವರೂಪದಲ್ಲಿರುವವು. ಬೆಂಕಿಯನ್ನು ಸರಿಯಾಗಿ ಬಳಿಸಿದುದಾದರೆ ಅದು ಪೋಷಣೆಯಕಾರ್ಯಕ್ಕೆ ಸಹಾಯವಾಗುವದು. ಸಿಕ್ಕಹಾಗೆ ಬಳಿಸಹೋದರೆ ಸುಟ್ಟು ರೂಪುಗೆಡಿಸುವದು. ಅನಧಿಕಾರ ವೃತ್ತಿಯಲ್ಲಿ ಈ ಆಚರಣೆಯನ್ನು ಬಳಿಸುವದೇ ಈ ಧರ್ಮದ ಅನಾಚಾರವಾಗಿರುವದು. ಬರ್ಫವು ನೀರಾಗುವವರೆಗೆ ಕೊಟ್ಟ ಉಷ್ಣತೆಯ ಪರಿಣಾಮವು ನೀರಮೇಲೆ ಏನೊಂದು ಆಗದಿದ್ದಂತೆ ತೋರಿದಮಾತ್ರದಿಂದ, ಬೆಂಕಿಯಲ್ಲಿ ನೀರನ್ನು ಕಾಸುವ ಶಕ್ತಿಯು ಇಲ್ಲವೆನ್ನಲಿಕ್ಕೆ ಬರುವದಿಲ್ಲ. ನೀರಾದ ಬಳಿಕ ಕೊಡುವ ಉಷ್ಣತೆಯು ಪ್ರತ್ಯಕ್ಷವಾಗಿ ನೀರನ್ನು ಕಾಸಲಿಕ್ಕೆ ಪರಿಣಮಿಸುವಂತೆ ಅನಧಿಕಾರಿಗಳಾಗಿ ಪುಣ್ಯರಾಶಿಯನ್ನೇಸುಟ್ಟುಕೊಂಡ ಈಗಿನ ಅಯ್ಯಗಳು ಇಲ್ಲಿಯವರೆಗೆ ನಮಗೇನು ಆಗಿಲ್ಲವೆಂಬ ಹೆಮ್ಮೆಯಿಂದ ಮತ್ತೂ ತಮ್ಮ ಕಾಲುಚಾಚಲು ಉಳಿದುಕೊಂಡರೆ, ಇನ್ನು ಮೇಲೆ ಅವರು ಗೋಳದಲ್ಲಿಯೇ ಬೀಳುವರು, ತಮ್ಮಲ್ಲಿಲ್ಲದ ಗೌರವದ ಒಣಬಿಂಕನು ಬಿಟ್ಟು ಭಕ್ತರಾಗಿ ಯಾವತ್ತು ರೀತಿಯಿಂದ ಕೂಡಿ ಶರಣಮಾರ್ಗಕ್ಕೆ ಟೊಂಕಕಟ್ಟಿದರೆ, ಅವರಿಗೂ ನಮಗೂ ಕೂಡಿಯೇ ಕಲ್ಯಾಣವಾಗುವದು. ಯಾವತರಹದ ತೊಂದರೆಯೇ ಇಲ್ಲ. ಆದರೆ ಕರ್ಮವು ಅದರ ಅಭಿಮಾನವನ್ನು ಬಿಡಗೊಟ್ಟರಷ್ಟೇ ಕಂಡುಕೊಳ್ಳಬೇಕಾದ ಕಲ್ಯಾಣವು. ಶರಣರೆಲ್ಲರು ಕೂಡಿ ಬಸವನ ಭಕ್ತಿಯೋ

ಗದ ಪ್ರಯೋಗವನ್ನೇ ಹಿಂದಿನ ಅವತಾರದಲ್ಲಿ ಲೋಕಕ್ಕೆ ಪ್ರಯೋಗಿಸಿ ತೋರಿಸಿ
ದ್ದಾಯಿತು. ಈಗ ಆ ಬಸವನ ಕಾರ್ಯವು ಸೃಷ್ಟಿಕಾರ್ಯವನ್ನೆಲ್ಲ ಒಳಕೊಂಡು
ಏಕರೂಪವಾಗಿರುವದು. ಆದುದರಿಂದ ಭಕ್ತಿಯು ವಿಷಯವಾಗಿ ಹೇಗೆಮಾಡ
ಬೇಕೆಂಬ ಅನುಮಾನವನ್ನು ಮಾಡುವ ಪ್ರಸಂಗವೇ ಉಳಿದಿರುವದಿಲ್ಲ. ಬಸವರಾಜ
ನು ತಾನಾಗಿಯೇ ಪ್ರತಿಯೊಂದು ಮಾನವವ್ಯಕ್ತಿಯನ್ನು ಸರಿಯಾದ ಮಾರ್ಗದಲ್ಲಿ
ಅಡಿಯಿಡಿಸಲು, ಹಿಂದೆ ಬಾರಕೋಲು ಹಿಡಕೊಂಡು ದುಂಬಾಲಗೊಂಡಿರುವನು.
ಅಧ್ದಹಾದೀವುಳಿದ ವ್ಯಕ್ತಿಯು ಡುಬ್ಬದ ಮೇಲೆ ಕೂಡಲೆ ತಪ್ಪದೆ ಹೊಸತ ಬಿದ್ದೇ
ಬೀಳುವವು. ಕಾರಣ ಅದನ್ನು ತಿದ್ದುವ ಗೊಡವೆಯ ವಿಷಯುವಾಗಿ ಚೊರಗದೆ
ಲಿಂಗಾಂಗಿಧರ್ಮದ ಉದಾತ್ತತತ್ತ್ವಗಳ ನಿಜಭಕ್ತಿಯೋಗಮಾರ್ಗವನ್ನಷ್ಟು ಸ
ತ್ಯಶರಣರ ವಚನಗಳ ಸಾರದಿಂದ, ನಿರಹಂಕಾರದ ಯೋಗದಲ್ಲಿ ಕಂಡುಕೊಂಡು
ಲೋಕದ ಕಿವಿಗೆ ಯಾವದಾದರೂ ರೀತಿಯಿಂದ ಬೀಳುವಹಾಗೆ ಮಾಡುವದೊಂ
ದೇ ಅವಶ್ಯವಾದುದಾಗಿರುವದು. ಪ್ರತ್ಯಕ್ಷ ನಮ್ಮ ನಡೆಯಲಿ ತಂದು ಆಚರಿಸಿ
ತೋರಬೇಕಾದುದು ಚೆನ್ನಬಸವಣ್ಣನ ಪಂಚಸೂತಕವಿರಹಿತವಾದ ಜ್ಞಾನಯೋ
ಗದ ಸತ್ಯಾಚರಣಮಾರ್ಗವು. ಹರಳಯ್ಯ ಮಧುವಯ್ಯಗಳ ಶರೀರಸಂಬಂಧದ
ಪ್ರಯೋಗದವರೆಗೆ ಹಿಂದಿನ ಅವತಾರವು ಆಚರಿಸಿ ತೋರಿಸಿರುವದು. ತೋರಿ
ಸಿದ್ದನ್ನು ಸಮಾಜದಲ್ಲಿ ಪರಿಪೂರ್ಣವಾಗಿ ಬಳಕೆಯಲ್ಲಿ ತರುವಂತೆ ಮಾಡಿದರೆಷ್ಟೋ
ಕಲ್ಯಾಣವು ಲೋಕಕ್ಕೂ ಆಗುವದು ಏಕೆಂದರೆ, ಲೋಕವು ಇಂತಹ ಪವಿತ್ರವಾದ
ನಡೆಯನ್ನು ಲೋಕಮಾದರಿಯಾಗಿ ನಡೆದು ತೋರಿಸುವ ಧೀರವಾದ ಸಮಾಜವು
ಎಲ್ಲಿದ್ದೀತೆಂದು ಹುಡುಕುವ ಯತ್ನದಲ್ಲಿ ಬಿದ್ದಿರುವದು. ಈ ಮಾತಿಗೆ ದೇವರಾಜ್ಯದ
ಕೋಲಾಹಲವೇ ಸಾಕ್ಷಿ! ಈಗ ನಾವು ಆಚರಿಸಬೇಕೆನ್ನುವ ನಿಜಕಲ್ಯಾಣಮಾ
ರ್ಗಕ್ಕೆ ಕುಲಕಂಟಕರೂ ವಿಕಾರಿಗಳೂ ಆದ ಸಮಾಜಸೂತ್ರಾಧಿಕಾರಿಗಳೇ ಅ
ಡ್ಡಾಗಿರುವದರಿಂದ, ನಾವೆಲ್ಲರೂ ಒಟ್ಟುಗೂಡಿ ಏಕಧ್ವನಿಯಿಂದ ಇವರನ್ನು ಬಹಿ
ಷ್ಕರಿಸಿ ಕಿತ್ತುಹಾಕಿ ಮುಂದಡಿಯನಿಡುವದೇ ಪ್ರಕಟವಾದ ಲಿಂಗದೀಕ್ಷೆಯಾಗಿರು
ವದು. ಎಚ್ಚರಿಕೆ! ಎಚ್ಚರಿಕೆ!! ಎಚ್ಚರಿಕೆ!!! ಹಿಂದಿನ ವಿವರಣೆಯು ಸಾರಭೂತವಾದ
ಚೆನ್ನಬಸವಣ್ಣನವರ ವಚನವಿದು ನೋಡಿರಿ. “ಕೇಶಕಾಷಾಯಾಂಬರವನಿಕ್ಕಿ
ದೊಡೇನು? ವಿಭೂತಿರುದ್ರಾಕ್ಷಿ ಧರಿಸಿದೊಡೇನು? ಸಾಕಾರದಲ್ಲಿ ಸನ್ನುತರಲ್ಲ, ನಿರ
ಹಂಕಾರದಲ್ಲಿ ನಿರತರಲ್ಲ, ಪಾರಮಾರ್ಥದಲ್ಲಿ ಪರಿಣಾಮಿಗಳಲ್ಲ; ಇದುಕಾರಣಮಾ
ಗಿ ಕೂಡಲಚೆನ್ನಸಂಗಮದೇವಾ, ತುರುಬಾಗಲಿ, ಜಡೆಯಾಗಲಿ, ಬೋಳಾಗಲಿ,
ಅರಿವುಆಚಾರವುಳ್ಳಡೆ ಜಂಗಮ”

ಈಗಿನ ಜಗಭಂಡಜಂಗಮರು ಭಕ್ತವರ್ಗದಲ್ಲಿಯೂ ಕೂಡ ಬೆರಿಸಿಕೊಳ್ಳಲು
ಯೋಗ್ಯರಿಲ್ಲೆಂಬದನ್ನು “ಇಷ್ಟಲಿಂಗಧಾರಣದ ಅವಶ್ಯಕತೆಯು” ಎಂಬ ವಿಷಯ
ವು ಸ್ಪಷ್ಟೀಕರಿಸುವದು. ಆದುದರಿಂದ ಆ ವಿಷಯವನ್ನೂ ಇಲ್ಲಿ ವಿವರಿಸಿರುವದು

# ಲಿಂಗದ ನಿಜಾರ್ಥವು.

ಅಂಗದಲ್ಲಿ ಕೂಡಿಬಿದ್ದ ವಿಕಾರಗಳು, ಒಳಹೊರಗೂ ತುಂಬಿದ ಅಖಂಡವಾದ ಸಂಗವ್ಯಾಪಾರದಿಂದ ಅಡಗಿ, ನಿಜದ ಅರುಹು ಬೆಳಗಿ, ಆ ಅರುಹಿನಿಂದ ನಿಜದ ನೆಲೆಗಂಡು, ಅತ್ತೀ ಮುಖದಿರುಗಿ ಆ ಸಹಜತತ್ಸಾಮರಸ್ಯಯೋಗದ ಅಖಂಡವಾದ ಸಹಜಸಮಾಧಿಯಲ್ಲಿ ವೈಮರೆತು. ಆತ್ಮಗ್ರಂಥಿಯು ಒಡೆದು, ಕಡೆಗೆ ಅಖಂಡವಾದ ಸಹಜಯೋಗದಲ್ಲಿ ಸಹಜವಾಗಿ ಸಹಜದಲ್ಲಿ ಬೆರೆತು ಹೋಗುವದಿರುವದೋ, ಅದೇ ಲಿಂಗವು. ಈ ಲಿಂಗವು ಅಖಂಡವಾದ ಸಂಗವ್ಯಾಪಾರದಲ್ಲಿ ಕ್ರಿಯಾಸ್ವರೂಪವಾಗಿಯೂ, ನಿಜ ಅರುಹಿನ ಅಖಂಡವಾದ ಸಹಜಸಮಾಧಿಯಲ್ಲಿ ಚಿತ್ಪ್ರಕಾಶರೂಪವಾಗಿಯೂ, ಅಖಂಡವಾದ ಸಹಜಯೋಗದಲ್ಲಿ ಸಹಜ ನಿರಂಜನಸ್ವರೂಪವಾಗಿಯೂ ಗುರುಲಿಂಗಜಂಗಮವೆನಿಸಿತು ಕ್ರಿಯಾಸ್ವರೂಪವಾದ ಆಚಾರಲಿಂಗವು ಇಷ್ಟರೂಪಾಗಿ, ಸ್ಥೂಲದೇಹದ ಕ್ರಿಯಗೆ ಕಾರಣವಾದ ಕರಕ್ಕೆ ಸಂಬಂಧವಾಯಿತು. ಜ್ಞಾನಸ್ವರೂಪವಾದ ಶಿವಲಿಂಗವು ಮಂತ್ರಮೂರ್ತಿಯಾಗಿ, ಸೂಕ್ಷ್ಮದೇಹದ ಚಿದ್ವ್ಯಾಪಾರಕ್ಕೆ ಕಾರಣವಾದ ಮನಕ್ಕೆ ಸಂಬಂಧವಾಯಿತು. ನಿರಂಜನಸ್ವರೂಪವಾದ ಶೂನ್ಯಲಿಂಗವು ಕಾರಣತನುವಿನ ವಿಕಾರಕ್ಕೆ ಕಾರಣವಾದ ಭಾವಕ್ಕೆ ಸಂಬಂಧವಾಯಿತು. ಈ ತ್ರಿವಿಧಯೋಗದಲ್ಲಿ ಆತ್ಮರ ಅಂಗದೋಷವು ಏನೊಂದು ಹೊದ್ದದಂತೆ ಒಳಕೊಳ್ಳುವದೇ ಲಿಂಗದ ರಹಸ್ಯವು. ಈ ಮಾರ್ಗವೇ ನಿಜವಾದ ತ್ಯಾಗವು, ಇದರಿಂದಲೇ ನಿಜೈಕ್ಯವು. (ತ್ಯಾಗೇನ ಏಕೇನ ಅಮೃತತ್ವಮಾನಶುಃ) ಈ ಲಿಂಗರಹಸ್ಯದ ದಾರಿಯು ಗೊತ್ತಾಗದೆ ಲೋಕದಲ್ಲಿ ಯೋಗತಪಶ್ಚರ್ಯಾದಿ ಅತ್ಯಂತಕಠಿಣವಾದ ನಿಯಮಗಳೂ, ಯಜ್ಞಯಾಗಾದಿಜಡಕರ್ಮಗಳೂ, ಪೂಜಾಪುನಸ್ಕಾರಾದಿಉಪಚಾರಗಳೂ, ದ್ವಂದ್ವಭಾವದಲ್ಲಿ ಮಾಡುವವಾದ ಭಜನಸ್ತವನಕೀರ್ತನಪ್ರಾರ್ಥನಾದಿಗಳೂ ಮಿತಿಮೀರಿ ಬೆಳೆದು, ಎಲ್ಲವೂ ಲಿಂಗಕ್ಷೇತ್ರಕ್ಕೆ ಬಾಹ್ಯವಾಗಿ ಆತ್ಮರಿಗೇ ಪರಿವರ್ತಿಸುತ್ತ ಬಂದಿರುವವು. [ನ ಯಜ್ಞೇನ, ನ ತಪಸಾ, ನ ದಾನೇನ ಅಮೃತತ್ವಮಾನಶುಃ] ವಾಙ್ಮನೋಭಾವಗಳಿಗೆ ಅಗೋಚರವಾದ ಲಿಂಗದ ಸಹಜಸ್ವರೂಪವನ್ನು ತರ್ಕವಿತರ್ಕಗಳಿಂದ ಭಾವಕ್ಕೆ ನಿಲುಕಿಸಲು ಪ್ರಯತ್ನಿಸಿ, ಆ ಪ್ರಯತ್ನದಿಂದ ತಮ್ಮತಮ್ಮ ಭಾವಗಳಿಗೆ ಹೊಳೆದುದನು ಭಿನ್ನಭಿನ್ನ ಸ್ವರೂಪಗಳಲ್ಲಿ ಲೋಕದ ಮುಂದಿಟ್ಟು, ಲಿಂಗದ ಏಕವಿಧವಾದ ಸತ್ಯಸ್ವರೂಪವನು ನಾನಾವಿಧವಾಗಿ ಬಣ್ಣಿಸಿ [ಏಕಂ ಸದ್ವಿಪ್ರಾ ಬಹುಧಾ ವದಂತಿ] ಧರ್ಮಾಧರ್ಮಾಂತರಗಳಿಗೂ ಮತಮತಾಂತರಗಳಿಗೂ ಕಾರಣವಾಯಿತು. ಈ ಕಾರಣವೇ ವರ್ಣಗೋತ್ರ

ಕುಲಜಾತಿಗಳ ಅಂಖ್ಯಾತ ಪಂಗಡಗಳನ್ನುಂಟುಮಾಡಿ, ಪರಸ್ಪರರಲ್ಲಿ ಕಲಹವ
ನ್ನು ಬೆಳಿಸಿ, ಇಷ್ಟು ವಿಕಾರನರ್ಥನಕ್ಕೆ ಕಾರಣವಾಯಿತು. ಇವೆಲ್ಲವುಗಳನ್ನೂ
ಮುರಿಬಡಿದು, ಲಿಂಗದ ಸೃಷ್ಟಿಸ್ಥಿತಿಲಯತಿರೋಧಾನಅನುಗ್ರಾಹಿಕೆಗಳೆಂಬ ಪಂ
ಚಕೃತಿಗಳಿಂದ ಕಲ್ಯಾಣಕರಸ್ವರೂಪವನ್ನು ಅರಿತು ಆ ಪ್ರಶಾಂತಮಯವಾದ
ಶಿವತತ್ತ್ವದಲ್ಲಿ ಅನನ್ಯವಾದ ಭಕ್ತಿಯನಾಚರಿಸಿ, ಭಕ್ತಿಯೇ ಅಂಗವಾಗಿ ಶಿವಸಾ
ಯುಜ್ಯತ್ವದಿಂದ ಗಣಪದವಿಯಲ್ಲಿ ಅಡಿಯಿಟ್ಟರು ಪುರಾತನರು. ನಿಜದ ಅರುಹು ಬೆಳ
ಗದೆ ಕುರುರುಡರಂತೆ ಕ್ರಿಯಾಜ್ಞಾನಸಾಮರಸ್ಯಕ್ಕಾಗಿ ಜ್ಞಾನಮಾರ್ಗದಲ್ಲಿ ಬಡಿ
ದಾಡಿದರು ವೀರಶೈವರು. ಈ ವೀರಶೈವರ ಕ್ರಿಯಾಜ್ಞಾನಗಳ ಸಾಮರಸ್ಯಯೋಗ
ಕ್ಕೆ ನಿಜಸೂತ್ರವಿಡಿದು ನಿಜದ ಅರುಹು ಬೆಳಗಿಸಿ ಪರಿಪೂರ್ಣವಾದ ಪ್ರಕಟಲಿಂಗಕ್ಷೇ
ತ್ರವನ್ನು ಪ್ರಯೋಗಿಸಿ ತೋರಿದರು ಶ್ರೀಮದ್ಬಸವಾದಿ ಪ್ರಮಥರು. ಇವರ ಮಾ
ರ್ಗವೇ ಪರಿಪೂರ್ಣವಾದದ್ದೂ ಸತ್ಯಸ್ವರೂಪವಾದದ್ದೂ, ಸಹಜವೂ ಸರ್ವಸಾ
ಮಾನ್ಯವೂ ಆದದ್ದೂ, ಲೋಕವನ್ನು ಉದ್ಧರಿಸುವ ನಿಜಕಲ್ಯಾಣಕರವಾದ ಸ್ವರಾಜ್ಯ
ವನ್ನು ಪ್ರಕಟಿಸುವಂತಹದ್ದೂ ಆದ ಸಹಜಧರ್ಮವು. ಸತ್ಯಶರಣಮಾರ್ಗಾನು
ವರ್ತನವೇ ಸ್ವರಾಜ್ಯಸಾಮ್ರಾಜ್ಯವನ್ನು ಗೆಲ್ಲುವ ಮಹಾಮಂತ್ರವಾಗಿರುವದು

ಕೈಲಾಸಕ್ಕೆ ಬೇರೆ ಭುವನವಿಲ್ಲ, ಗುರುಸಿದ್ಧನಲ್ಲದೆ ಅನ್ಯದೈವವಿಲ್ಲ, ಶಿವ
ಮಂತ್ರಕ್ಕೆ ಬೇರೆ ಮಂತ್ರವಿಲ್ಲ. ನೋಡಿರೇ, ನಂಬಿರೇ, ನಂಬಿರೇ, ನಲಿಯಿರೇ.

ಧಾರವಾಡ
ತಾ॥ ೧೯–೭–೧೯೩೮

ಸತ್ಯಶರಣಸಮಾಜಸೇವಕ,
ಎಚ್. ಬಿ. ಕಲಬುರ್ಗಿ, ಬಿ. ಎ.

## ಇಷ್ಟಲಿಂಗಧಾರಣದ ಅವಶ್ಯಕತೆಯು.

ಲಿಂಗಧಾರಣವೇ ಲೋಕದ ನಿಜಕಲ್ಯಾಣಕ್ಕೆ ಕಾರಣವಾದಾಗ್ಯೂ, ಆತ್ಮರು ಅಂತಹ ಹದವು ಉಂಟಾದ ಹೊರತು, ಈ ಮೆಟ್ಟಿಗೆ ಬರುವದಿಲ್ಲವಾದುದರಿಂದ, ಅದರ ಪ್ರಯೋಜನವು ಅಷ್ಟೊಂದು ಅನಿಸುವದಿಲ್ಲ. ಈಗ ಆ ಹದವು ಬರಹತ್ತಿ ಲಿಂಗದ ಪ್ರಯೋಜನವು ತೋರಹತ್ತಿರುವದರಿಂದ, ಈ ವಿಷಯುವನ್ನು ಸ್ವಲ್ಪದರ ಮಟ್ಟಿಗೆ ಇಲ್ಲಿ ವಿವರಿಸಬೇಕಾಯಿತು. ಇವರಲ್ಲಿ ಪ್ರಾಮುಖ್ಯವಾಗಿ ನಾಲ್ಕು ಮೆಟ್ಟುಗಳನ್ನು ಮಾಡಿರುವದು. ೧ ಲಿಂಗದ ಸಹಜಸ್ಥಿತಿಯೂ, ಆತ್ಮರ ಸ್ವಾಭಾವಿಕವೃತ್ತಿಯೂ, ೨ ಆತ್ಮರ ಸುಖದ ಭ್ರಮೆಯು ಸಾಹಸಗಳು ೩ ವಿರೋಧವಾದ ಸಂಗತಿಗಳು· ೪ ಕಾಯುನ್ಮುಕ್ತಿಯ ತತ್ವಗಳು.

### ೧ ಲಿಂಗದ ಸಹಜಸ್ಥಿತಿಯೂ, ಆತ್ಮರ ಸ್ವಾಭಾವಿಕವೃತ್ತಿಯೂ.

ತನಗೆ ಬೇಕಷ್ಟು ಅವಕಾಶದಲ್ಲಿ ಇಂಬುಗೊಂಡು ನಿಂತ ಗೋಡೆಯು, ತನ್ನ ಆಕಾರವನ್ನು ಕೆಡಿಸಿಕೊಂಡ ಹೊರತು, ತಾನು ಇಂಬುಗೊಂಡ ಅವಕಾಶದಲ್ಲಿ ನಿರಾಕಾರವಾಗಿ ಬೆರೆಯದು. ಅವಕಾಶವು, ತನ್ನಲ್ಲಿ ತೋರುವ ತೋರಿಕೆಯಿಲ್ಲವೂ ಇಂಬುಗೊಂಡರೂ, ತನಗೆ ಏನೊಂದು ಕೇಡಿಲ್ಲದೆ ಇದ್ದೇ ಇರುವದು. ಆ ತೋರಿಕೆಯು ಇದೆಯೆಂದು ತನಗೆ ಏನೊಂದು ಕೇಡಿಲ್ಲ. ತೋರಿಕೆಯು ಅಡಗಿತೆಂದ್ಮು ತನಗೆ ಏನೊಂದು ಹೆಚ್ಚುವಿಕೆಯಿಲ್ಲ. ಹಾಗೆ ಮುಳ್ಳಮೊನೆಗೆ ಇಂಬಿಲ್ಲದಂತೆ ತುಂಬಾ ತುಂಬಿ ತುಳುಕುತ್ತಿರುವ ಪರಬ್ರಹ್ಮವು, ತನ್ನಲ್ಲಿ ಅಸಂಖ್ಯಾತ ಜೀವರುಗಳು ಇದ್ದರೂ, ತನಗೆ ಏನೊಂದು ಕುಂದಿಲ್ಲದೆಯೂ, ಅವು ತನ್ನ ಸಮರಸಗೊಂಡು ತನ್ನಲ್ಲಿ ಐಕ್ಯವಾದರೂ, ಏನೊಂದು ಹೆಚ್ಚುವಿಕೆ ಇಲ್ಲದೆಯೂ ಇದೆ. ಗೋಡೆಯು ತನ್ನ ಆಕಾರ ಕೆಡಿಸಿಕೊಂಡು ಬೈಲಿಗೆ ಬೈಲಾದಂತೆ, ಆತ್ಮರು ತಮ್ಮ ಆಕಾರ ಕೆಡಿಸಿಕೊಂಡು ತನುತ್ರಯದಲ್ಲಿಯೂ ನಿರಹಂಕಾರಿಗಳಾಗಿ ಕ್ರಿಯಾಜ್ಞಾನಗಳ ಸಮರಸವಾದ ಹೊರತು, ಲಿಂಗಸಂಗವುಂಟಾಗದು. ಜಡದೇಹವನ್ನು ಹಿಡಿದು ಎಚ್ಚರದಲ್ಲಿ ವ್ಯವಹರಿಸುವಾಗ, ತಾವು ತಮ್ಮ ಯೋಗ್ಯತೆ, ತಮ್ಮ ಅಭಿಮಾನ, ತಮ ಸ್ಥಿತಿ, ತಮ್ಮ ಆಕಾರ ಮುಂತಾದವುಗಳ ಯೋಗದಿಂದಲೇ ಇರುವರು. ಸೂಕ್ಷ್ಮ ತನುವಿಡಿದು ಕನಸಿನಲ್ಲಿ ವ್ಯವಹರಿಸುವಾಗ, ತಮ್ಮ ಯೋಗ್ಯತೆಯಲ್ಲಿ ಪಾತ್ರ ಸ್ವಲ್ಪ ಕುಂದಿದುದಾಗಿರುವದು. ಏಕೆಂದರೆ ಸ್ಥೂಲತನುವಿನಲ್ಲಿ ತನಗೆ ಅಂಗವಿಸದ ಎಷ್ಟೋ ಲೋಕಾನುಭವಸಂಗತಿಗಳನ್ನು ತಲೆಯಲ್ಲಿ ಹಿಡಿದಿಡುವ ಸಾಮರ್ಥ್ಯವುಂಟು, ಕಾರಣ ಎಚ್ಚರದಲ್ಲಿ ಆ ಹಿಡಿದಿಟ್ಟ ಅನುಭವಸಹಿತ ತನ್ನ ಯೋಗ್ಯತೆಯನ್ನು ಸ್ವಾಭಾವಿಕವಾಗಿ ಅಳೆದುಕೊಳ್ಳುತ್ತಿರುವದರಿಂದಲೂ, ಕನಸಿನಲ್ಲಿ ಈ ಹೆಚ್ಚಿನ ಅನುಭವಸಂಗ್ರಹದ ಏನೊಂದು ಉಪಯೋಗವಾಗದೆ, ಕೇವಲ ಅಂಗವಿಸಿದ ಅನುಭವದಲ್ಲಿಯಷ್ಟೇ ಸ್ವಾಭಾವಿಕವಾಗಿ ವ್ಯವಹರಿಸುವದಾದುದರಿಂದಲೂ, ಎಚ್ಚ

ರದ ಯೋಗ್ಯತೆಯು ಕನಸಿನಲ್ಲಿ ಉಳಿಯಲಾರದು ಎಚ್ಚರದಲ್ಲಿ ಆತ್ಮನು ಎರಡೂ ಹುಬ್ಬಗಳ ಕೂಡಿಕೆಯ ಮಧ್ಯಪ್ರದೇಶಕ್ಕೆ ನಿರ್ತವಾಗಿ ತಲೆಯೊಳಗಿನ ಹಿಂಬದಿಯಲ್ಲಿದ್ದ ದೊಡ್ಡ ಮಿದುಳಿನ ಮುಂದಿನ ಒಂದು ಮಹಾಕೂಟವೆನಿಸುವ ವಿಶೇಷಸ್ಥಾನದಲ್ಲಿ ತನ್ನ ಸಕಲ ಅರುಹಿನ ವ್ಯಾಪಾರವುಳ್ಳವನಾಗಿ ವ್ಯವಹರಿಸುವ ನು. ಅಲ್ಲಿಂದ ತನ್ನ ನಿಜ ಸ್ಥಾನವೆನಿಸುವ, ಎದೆಯ ಗುಂಡಿಗೆಗೆ ನಿರ್ತವಾಗಿದ್ದ ಹೃತ್ಪಟಲದ ಅಷ್ಟದಳ ಕಮಲದ ಮಧ್ಯಪ್ರದೇಶಕ್ಕೆ ಇಳಿಯ ಹತ್ತಲು, ಕಣ್ಣಿಗೆ ಮಬ್ಬು ಬರಹತ್ತಿ, ಕ್ರಮದಿಂದ ಆಕಳಿಕೆತೂಗಡಿಕೆಕನಸುನಿದ್ರೆಗಳು ಆತ್ಮನಿ ಗೆ ವುಂಟಾಗುತ್ತಿರುವವು. ಗಾಢನಿದ್ರೆಯಲ್ಲಿ ಆತ್ಮನು, ಕಿವಿ ಮತ್ತು ಚರ್ಮ ಇ ವೆರಡೇ ಇಂದ್ರಿಯಗಳ ಸ್ವಲ್ಪ ಅರುಹುವುಳ್ಳವನಾಗಿ,ಉಳಿದ ಯಾವ ಇಂದ್ರಿಯಗ ಳ ಏನೊಂದು ವ್ಯಾಪಾರವಿಲ್ಲದೆ, ಕೇವಲ ಸಂಸ್ಕಾರದಲ್ಲಿ ಕಾರಣತನುವಿಡಿದು ಸ್ತಬ್ಧನಾಗಿರುವದರಿಂದ ಯೋಗ್ಯತೆ, ಅಭಿಮಾನ, ಸ್ಥಿತಿ, ಆಕಾರ ಮುಂತಾದವುಗ ಳೆಲ್ಲವೂ ಅವನಲ್ಲಿಯೇ ಅಡಕವಾಗಿರುವವು. ಆಗ ನಾನು ಯಾರು ನನ್ನ ಹೆಸರೇನು; ನನ್ನ ಆಕಾರವ್ಯಾವದು; ನನ್ನಯೋಗ್ಯತೆಯೆಷ್ಟು; ಮುಂತಾದವುಗಳ ಏನೊಂದು ಅರುಹಿಲ್ಲದೆ ತಾನೇ ತಾನಾಗಿದ್ದಾಗ್ಯೂ, ಸಂಸ್ಕಾರದ ದೋಷವು ಆತ್ಮನನ್ನು ನಿಜ ಸ್ವರೂಪದಲ್ಲಿ ಎಷ್ಟೂ ಇರಗೊಡದೆ, ತನ್ನಲ್ಲಿಯೇ ಸ್ಥಬ್ಧಮಾಡಿಕೊಂಡಿರುವದು. ಆದರಿಂದ ನಿನ್ನೆ ಮಲಗುವಕಾಲಕ್ಕೆ ಇದ್ದಸ್ಥಿತಿಯಲ್ಲಿ ಏನೊಂದು ಗರಿವಏಕ್ಕಾಗದೆ ಇದ್ದಕ್ಕಿದ್ದಂತೆ ಪುನಃ ಬೆಳಿಗ್ಗೆ ಎಚ್ಚರವಾಗುತ್ತಿರುವದು- ಎಚ್ಚರದ ಅರುಹು ಪೂರಾ ಉಳ್ಳವನಾಗಿ, ಏನೊಂದು ಸಂಸ್ಕಾರದೋಷವು ಇಲ್ಲದೆ, ಕಾರಣತನುವಿಡಿದು ತನ್ನ ನಿಜಸ್ವರೂಪದಲ್ಲಿ ಸಹಜವಾಗಿ ಇರಬಂದರೆ, ಅದೇ ಕೂಡಲ ಸಂಗಮನಲ್ಲಿ ಐಕ್ಯವಾದ ಸಮಾಧಿಯು. ಅರುಹಿನ ವ್ಯಾಪಾರವು, ಎಲ್ಲ ಜ್ಞಾನೇಂದ್ರಿಯಗಳ ತಲೆಯಲ್ಲಿಯೇ ಇರುವದರಿಂದ, ಮೇಲಿನಿಂದ ಹುಟ್ಟಿ ಕೆಳಗೆ ಎದೆಯ ಕಡೆಗೆ ಹ ರಿಯುತ್ತಿರುವದು. ಇದೇ ದಕ್ಷಿಣವಾಹಿನಿಯಾದ ಕೃಷ್ಣಾಹೊಳೆಯು. ಸಂಸ್ಕಾ ರದ ದೋಷವನ್ನು ತೊಳಕೊಳ್ಳುತ್ತ ತೊಳಕೊಳ್ಳುತ್ತ ಆತ್ಮನು ತನ್ನ ಪೂರ್ವದ ನಿ ಜಸ್ವರೂಪಕ್ಕೆ ಹೋಗಿ ಮುಟ್ಟುವದೇ ಪೂರ್ವವಾಹಿನಿಯಾದ ಮಲಾಪಹಾರಿಯು. ಸಂಸ್ಕಾರದ ದೋಷವು ಆತ್ಮನನ್ನು ಯಾವಾಗಲೂ ಹಿಂದಕ್ಕೆ ಜಗ್ಗಿ ನಿಜಸ್ವರೂಪ ದಿಂದ ದೂರ ಒಯ್ದು, ಮತ್ತಿಷ್ಟು ಸಂಸ್ಕಾರದೋಷವನ್ನು ಹೆಚ್ಚಿಸುತ್ತಿರುವದರಿಂ ದ, ಅವನ ಮುಖವು ಸ್ವಾಭಾವಿಕವಾಗಿ ಪೂರ್ವಕ್ಕೆ ವಿರುದ್ಧವಾದ ಪಶ್ಚಿಮದಿಕ್ಕಿಗೆ ತಿರುಗುವದು. ಹೀಗೆ ಸ್ವಾಭಾವಿಕವಾಗಿ ಪಶ್ಚಿಮನಿಟ್ಟಿಗೆ ಮುಖಮಾಡಿ ನಡೆ ರುವ ಆತ್ಮರುಗಳೆಲ್ಲ ಪ್ರವೃತ್ತಿಯ ಕಲೆಯುಳ್ಳವರು; ಅಥವಾ ಪ್ರವೃತ್ತಿಯ ಮಾರ್ಗ ದವರು. ನಡಿನಡಿದು ಬೇಸತ್ತು, ಅದರ ಹಣ್ಣುಂಡುಂಡು ಸಾಕಾಗಿ,ತಲೆ ಚಿಟ್ಟಿಡಿದು ಓ ಎಂದು ಓಕರಿಸಿ, ತೀರ ಹೇಸಿಕೊಂಡು ಪೂರ್ವಕ್ಕೆ ಮೋರೆಯನ್ನು ತಿರುಗಿಸಿದ ಆತ್ಮರುಗಳೆಲ್ಲ ನಿವೃತ್ತಿ ಕಲೆಯುಳ್ಳವು. ಪ್ರವೃತ್ತಿ ಕಲೆಯ ಆತ್ಮರುಗಳೆಲ್ಲ ಸ್ವಾಭಾ

ಪರರಾಗಿ, ಅದನ್ನು ಅಧರ್ಮದಿಂದ ಸಾಧಿಸಲು ಯತ್ನಿಸುತ್ತಿರುವರು. ಆಸುರವೃತ್ತಿಯುವರು; ಧರ್ಮದಿಂದ ಸಾಧಿಸಲು ಯತ್ನಿಸುವವರು ನರರು. ನಿವೃತ್ತಿಯು ಕಲೆಯುಪರೆಲ್ಲ ಸಾತ್ವಿಕವೃತ್ತಿಯುವರು. ಇವರು ದೇವಕೋಟಿಯಲ್ಲಿ ಗಣಿಸಲ್ಪಡುವರು

ಏನನೋದಿ, ಏಸುತಿಳಿದು, ಏನುಮಾಡಿದರೇನು ಫಲ! ಗುರುಲಿಂಗಜಂಗಮದ ದಾಸೋಹವನ್ನು ಮಾಡದೆ, ಎಲ್ಲವೂ ನಿಷ್ಫಲವು. "ಮಾಡಿ ಕೆಟ್ಟರು. ಮಾಡದೆ ಕೆಟ್ಟರು ನೀಡಿ ಕೆಟ್ಟರು. ನೀಡದೆ ಕೆಟ್ಟರು. ಕೂಡಲ ಸಂಗಮನ ಬಯಲ ಸಮಾಧಿಯನಿಕ್ಕದೆ ಕೆಟ್ಟರು" ಕೂಡಲಸಂಗಮನ ಸಮಾಧಿಯಲ್ಲಿ ಬೆರೆಯುವದು ಸುಲಭಸಾಧ್ಯವಲ್ಲ. ಇಂದ್ರಾದಿಪದವಿಗಳೂ, ಸಾಲೋಕ್ಯ, ಸಾಮಿಪ್ಯ, ಸಾರೂಪ್ಯ, ಸಾಯುಜ್ಯ ಪದಗಳೂ, ಹರಿಬ್ರಹ್ಮಾದಿದೇವತೆಗಳೂ, ಗುರುಲಿಂಗಜಂಗಮದ ದಾಸೋಹದ ಪಾಸಂಗಕ್ಕೆ ಬಾರವೆಂಬುದು ಮನದಟ್ಟಾದ ಹೊರತು, ಯಾರೂ ಈ ಮಾರ್ಗದಲ್ಲಿ ಅಡಿಯಿಡರು. ಇವೆಲ್ಲವುಗಳನ್ನು ಹುಲ್ಲುಕಡ್ಡಿಗೆ ಕಡೆಯಾಗಿ ಬಗೆದ ಸತ್ಯಶರಣರ ಹೊರತು, ನಿಜಮಾರ್ಗವು ಯಾರಿಗೂ ದೂರೆಯುಲಿಲ್ಲ. ಆತ್ಮನ ಜಡತ್ವವು ಏತರಿಂದುಂಟಾಯಿತೆಂಬುದನ್ನು ಅರಿಯದೆ, ಅದರ ಸಹಜವಾದ ಬಿಡುಗಡೆಯಲ್ಲಿ ಪ್ರಯತ್ನಿಸಿದುದು ಗುಡ್ಡಕ್ಕೆ ಕಲ್ಲುಹೊತ್ತಂತಾಗಿರುವದು. ಸೂರ್ಯನು ತನ್ನ ಪ್ರಕಾಶಕಿರಣಗಳನ್ನು ಏನೊಂದು ಪಕ್ಷಪಾತವಿಲ್ಲದೆ ಹೊಲೆಹದಿನೆಂಟೂಜಾತಿಯುವರ ಮನೆಗಳ ಮೇಲೆ ಕೆಡಹುವನು. ಅದರಂತೆ ಸೃಷ್ಟಿಸ್ಥಿತಿಲಯ ತಿರೋಧಾನ ಅನುಗ್ರಾಹಿಕೆಗಳೆಂಬ ಈ ಪಂಚ ಕೃತಿಗಳಿಂದಲೂ ಸಚ್ಚಿದಾನಂದನಿತ್ಯಪರಿಪೂರ್ಣಗಳೆಂಬ ಲಕ್ಷಣಗಳಿಂದಲೂ, ಸರ್ವಕರ್ತೃತ್ವ ಸರ್ವಜ್ಞತ್ವನಿತ್ಯತ್ವವ್ಯಾಪಕತ್ವಪರಿಪೂರ್ಣತ್ವಾದಿಶಕ್ತಿಗಳಿಂದಲೂ, ಸೃಷ್ಟಿಯಕಾರ್ಯದಲ್ಲಿ ವ್ಯಕ್ತವಾಗುವದಾದ ಲಿಂಗವು, ಸರ್ವಾಂತರ್ಯಾಮಿಯಾಗಿ ತೋರುವ ತೋರಿಕೆಯಲ್ಲೆಲ್ಲ ಒಳಹೊರಗೂ .ಮುಳ್ಳಮೊನೆಗಿಂಬಿಲ್ಲದಂತೆ ತುಂಬಾತುಂಬಿ ತನ್ನ ಸಹಜವಾದ ಧರ್ಮದಲ್ಲಿ ಅನಾದಿಕಾಲದಿಂದ ಧುರಂಧರವಾಗಿರುವದು. ಅದಕ್ಕೆ ಕುಲಜಾತಿ, ಮಡಿಮೈಲಿಗೆ, ಸುಖದುಃಖ, ನಾಮರೂಪು, ಮಾಯಾಮೋಹ ಇತ್ಯಾದಿ ಯಾದ ದ್ವಂದ್ವವೂ ಇಲ್ಲದೆ, ಪ್ರಶಾಂತಮಯವಾಗಿರುವದು. ಲಿಂಗವಿಲ್ಲದೆ ಆತ್ಮಸೃಷ್ಟಿಯಿಲ್ಲ. ಅದು ಪ್ರತಿಯೊಂದು ಆತ್ಮರಲ್ಲಿದೆಯೆನ್ನಲಿಕ್ಕೆ ಕಲಾ (ಕೆಲಸಮಾಡುವ ಹುಟ್ಟುಜಾಣತನ) ಕಾಲ (ಆಯುಷ್ಯ) ವಿದ್ಯಾ (ತಿಳುವಳಿಕೆ) ರಾಗ, (ಇಷ್ಟವಸ್ತುಗಳಲ್ಲಿ ಪ್ರೀತಿ ಅನಿಷ್ಟವಸ್ತುಗಳಲ್ಲಿ ವೈರ) ನಿಯತಿ (ಜನ್ಮಾಂತರಗಳಲ್ಲಿ ತಾನು ಮಾಡಿದ್ದನ್ನು ತಾನೇ ಉಣ್ಣೋಣ) ಈ ಪಂಚ ಕಂಚುಕಗಳೇ ಸಾಕ್ಷಿ! ಪರಮಾತ್ಮನ ಸರ್ವಕರ್ತೃತ್ವ, ಸರ್ವಜ್ಞತ್ವ, ಪರಿಪೂರ್ಣತ್ವ, ನಿತ್ಯತ್ವ, ವ್ಯಾಪಕತ್ವಶಕ್ತಿಗಳು, ನಿಗೂಹನಶಕ್ತಿಯಿಂದ( ತನ್ನ ಇರುವಿಕೆಗೆ ಏನೊಂ

ದು ಕುಂದುಕೊರತೆಯಾಗದರೀತಿಯಿಂದ ) ಆಳುಂಜನವಾಗಿ ಆತ್ಮರಲ್ಲಿ ಈ ಪಂಚಕಂಚುಕಗಳು ತೋರಿರುವವಷ್ಟೇ! ಆತ್ಮರು ತಮ್ಮಲ್ಲಿಯ ತಮ್ಮ ನಿಜಸ್ವರೂಪದ ಅನುಭವವಿಲ್ಲದೆ, ಬಾಹ್ಯಲಿಂಗವ ಅರಿತೆವೆಂಬುದು, ಊರಹೊರಗಿದ್ದು ತನ್ನ ಮನೆಯ ಬಾಗಿಲವನ್ನು ಹುಡುಕ್ಯಾಡಿದಂತಾಗುವದು. ಅದರ ಸಮರಸದಲ್ಲಿ ಇರುವದನ್ನು ಅಳವಡಿಸಿಕೊಂಡ ಹೊರತು, ಯಾರಿಗೂ ಅದರ ನಿಲವು ನಿಲುಕದು; ನಿಲವು ನಿಲುಕಿದ ಹೊರತು ಅದನ್ನು ಪೂಜಿಸುವ ಅಧಿಕಾರವೂ ಬರಲಾರದು. ಅದರ ಸಮರಸದಲ್ಲಿರೋಣವೆಂದರೆ ಅದರ ನಿಜಸ್ಥಿತಿಯನ್ನು ಅರಿತು, ಅದರಂತೆ ಇರಲು ಸಾಧಿಸೋಣ. ತೋರುವ ತೋರಿಕೆಯು ಪ್ರತಿಕ್ಷಣಕ್ಕೆ ಬದಲಾಗುತ್ತಿದ್ದರೂ ಲಿಂಗದ ಕಾರ್ಯದಲ್ಲಿ ಏನು ಹೆಚ್ಚುಕಡಿಮೆಯಿಲ್ಲ! ತೋರಿದ್ದು ಅಪಗಿದರೂ ಅದರ ಕಾರ್ಯದಲ್ಲಿ ಚ್ಯುತಿಯಿಲ್ಲ! ಹೊಸದು ತೋರಿದರೂ ಅದರ ಕಾರ್ಯದಲ್ಲಿ ಹೆಚ್ಚಳಿಕೆಯಿಲ್ಲ! ಪ್ರತಿಯೊಂದುವ್ಯಕ್ತಿಯ ಪಿಂಡವು ಅದು ದಿನಾಲು ಉಂಡ ಅನ್ನದಿಂದಲೇ (ಅನ್ನದ ಎಂಜಲದ ರಸದಿಂದಲೇ ) ಬೆಳೆದಿರುವದು. ಸೃಷ್ಟಿಯು ತನ್ನ ಆದಿಕಾಲದಿಂದ ಎಲ್ಲ ಆತ್ಮರ ಪಿಂಡಪ್ರಕೃತಿಗಳಿಗೆ ತನ್ನಲ್ಲಿದ್ದ ತತ್ವಗಳನ್ನೇ ತಿನಿಸಿ ಕೊಡುತ್ತಿರುವದು. ಏಕಂದರೆ ಪ್ರತಿಯೊಂದು ಆತ್ಮನ ಪಿಂಡಪ್ರಕೃತಿಗೆ ಈ ಪಂಚಮಹಾಭೂತಗಳೇ ಮೂಲದ್ರವ್ಯಗಳಾಗಿರುವವು. ಆದುದರಿಂದ ತೋರುವದೆಲ್ಲವೂ ಎಂಜಲಮಯವು. ಲಿಂಗವೊಂದೇ ಇಂತಹ ದೋಷಮಯವಾದ ಸ್ಥಿತಿಯಲ್ಲಿ ನಿರ್ಮಲವಾದುದು. ಆತ್ಮರ ತೊಡಕುಗಳೆಲ್ಲ ಈ ಪಿಂಡಪ್ರಕೃತಿಯ ವಿಕಾರಗಳಲ್ಲಿಯೇ ಇರುವವು ಇವೇ ಸೂತಕಗಳು. ಲಿಂಗವು ಸೂತಕಗಳಲ್ಲಿಯೂ ನಿತ್ಯನಿರ್ಮಲವಾದುದು.

ಇತ್ತ ಆತ್ಮರು ಸ್ವಾಭಾವಿಕವಾಗಿ ಹೊರಮುಖರಾದವರು. ಈ ಸೃಷ್ಟಿಯು ನಮ್ಮ ಸುಖಕ್ಕಾಗಿ ನಿರ್ಮಿಸಲ್ಪಟ್ಟಿರುವದು; ಇದರೊಳಗಿನ ಸುಖಸಾಧನದ ಬಗೆಗಳನೆಲ್ಲ ಸಂಗ್ರಹಿಸಿಕೊಳ್ಳುವದಕ್ಕಾಗಿಯೇ ದೇವರು ನಮಗೆ ಜ್ಞಾನಕಲೆಯನ್ನು ದಯಪಾಲಿಸಿರುವನು; ನಮ್ಮ ಹಡೆದವರೂ, ಹೆಣ್ಣುಗಳನ್ನು ಕೊಟ್ಟುತಕ್ಕೊಂಡು ನಮ್ಮ ಹತ್ತಗಡಿಯಾದವರೂ ನಮ್ಮವರು; ಉಳಿದವರೆಲ್ಲ ನಮಗೆ ಏನು ಹತ್ತದವರು? ಇತ್ಯಾದಿ ಭಾವಗಳಿಂದ ಭ್ರಾಂತರಾಗಿರುವರು, ತಮ್ಮವರ ಸುಖಕ್ಕಾಗಿ ಪರರ ಸುಖವನ್ನು ಕೆಡಿಸಲು ಹಿಂದುಮುಂದು ನೋಡದವರಾಗಿರುವರು. ಈ ದುಷ್ಟವ್ಯಾಪಾರಗಳಿಂದಲೂ, ತಪ್ಪುತಿಳುವಳಿಕೆಯಿಂದಲೂ ಚಿತ್ತವೃತ್ತಿಯನೆಲ್ಲ ತೋರಿ ತೋರಿ ಅಡಗುವದಾದ ಸುಳ್ಳುರೂಪದಲ್ಲಿ ತೊಡಕಿಸಿಕೊಂಡಿರುವರು.

## ೨ ಆತ್ಮರ ಸುಖದ ಭ್ರಮೆಯ ಸಾಹಸಗಳು.

ಮಾನವನ ಚಿತ್ತವೃತ್ತಿಯು ಎಲ್ಲಿರುವದೋ ಅಲ್ಲಿಯೇ ಅವನ ಕರಣೇಂದ್ರಿಯಗಳೆಲ್ಲ ಸಿಕ್ಕಿಕೊಂಡಿರುವವು. ಮಾನವನ ಸ್ವಾರ್ಥವೂ, ವಂಚಕತನವೂ

ಅವನ ಚಿತ್ತವೃತ್ತಿಯನ್ನವಲಂಬಿಸಿರುವವು. ಯಾರು ಯಾರ ಕೂಡ ಎಷ್ಟು ಅಂತಃಕರಣವೃತ್ತಿಯಿಂದ ವರ್ತಿಸಿದರೂ, ಅವರವರ ಅಂತಃಕರಣವೃತ್ತಿಯು ಅವರವರ ಇಷ್ಟಗಳಲ್ಲಿಯೇ ತೊಡಗಿಕೊಂಡಿರುವವು. ಅವರವರ ವ್ಯಾಪಾರದಿಂದ ಎಲ್ಲಿಯವರೆಗೆ ಜೀವಾಳಕ್ಕೆ ಪೆಟ್ಟು ಹತ್ತುವದಿಲ್ಲವೋ, ಅಲ್ಲಿಯವರೆಗೆ ಪರಸ್ಪರರಲ್ಲಿ ಗರಜಿನ ಪೂರ್ತಿ ಬಳಿಸ್ಯಾಡುವ ಅಂತಃಕರಣಗಳಿಂದ ಸ್ನೇಹಭಾವವು ಇರುವದು. ಜೀವಾಳಕ್ಕೆ ಪೆಟ್ಟುಹತ್ತಿದೊಡನೆಯೇ, ಪರಸ್ಪರರ ಮೋರೆಗಳು ಕೆಡುವವು. ಈ ರೀತಿ ತಮ್ಮತಮ್ಮ ಇಷ್ಟಗಳಲ್ಲಿ ಬದ್ಧರಾದ ಆತ್ಮರ ಅಂತಃಕರಣವೃತ್ತಿಯು, ಇಷ್ಟಸಾಧನಕ್ಕಾಗಿಯೇ ಇರುವದರಿಂದ, ಇಷ್ಟವು ಕೆಡುವವರೆಗೆ ಅನಿಮಿತ್ತಬಾಂಧವ್ಯದ ಸುಖದ ನೆಲೆಯೇ ಗೊತ್ತಾಗಲಾರದು. ಇವರಿಗೆ ಪರಮಾತ್ಮನ ವಿಷಯವಾಗಿ ಏನೊಂದು ತಿಳುವಳಿಕೆಯು ಇರುವದಿಲ್ಲೆಂದು ಹೇಳಲಿಕ್ಕೆ ಬಾರದು. ಏಕೆಂದರೆ ಮಾನವನು ಜ್ಞಾನಕಲೆಯುಳ್ಳವನು. ಪ್ರತಿಯೊಂದು ವ್ಯಕ್ತಿಯು ತನ್ನ ಯೋಗ್ಯತೆಯ ಮೇರೆಗೆ ತನಗೆ ಹೊಳೆದಂತೆ ಆ ಪರಮಾತ್ಮನನ್ನು ಕಲ್ಪಿಸಿಕೊಂಡು, ತನ್ನ ಇಷ್ಟಸಾಧನಕ್ಕಾಗಿ ಆ ಪರಮಾತ್ಮನಲ್ಲಿ ನಂಬುಗೆಯನಿಟ್ಟು ಆಚರಿಸುತ್ತಿರುವದು. ಇಂತಹ ವಂಚಕತನದ ಅರ್ಚನೆಗೆ ಭಕ್ತಿಯೆನ್ನಲಿಕ್ಕೆ ಬರುವದಿಲ್ಲ. ಇಷ್ಟಸಾಧನಕ್ಕಾಗಿ ಕಲ್ಪನೆಗೆ ನಿಲುಕದ ಅಖಂಡವಾದ ಪರಮಾತ್ಮನನ್ನು ಖಂಡಿತಾವಸ್ಥೆಯಲ್ಲಿ ಕಲ್ಪಿಸಿಕೊಂಡು, ಧರ್ಮವನ್ನಾಚರಿಸುವವರೆಲ್ಲ ಕರ್ಮಿಗಳೇ. ದೈತ್ಯರು ಮೊದಲುಗೊಂಡು ತ್ರಿಮೂರ್ತಿಗಳು ಕಡೆಯಾಗಿ ದೇವದಾನವಮಾನವರೆಲ್ಲರೂ ಕರ್ಮಿಗಳೇ ಆಗಿರುವರು.

ಇಷ್ಟವು, ಐಹಿಕ ಆಮುಷ್ಮಿಕ ಆತ್ಮಿಕಗಳೆಂದು ಮೂರು ವಿಧವಾಗಿರುವವು. ಐಹಿಕ ಸಂಗತಿಗಳಲ್ಲಿ ಇಷ್ಟವಿಟ್ಟಾಳಿ ಆಸುರವೃತ್ತಿಯಿಂದ ಬಾಳಿದವರೆಲ್ಲರೂ ತಮೋಗುಣಾತ್ಮಕರಾಗಿರುವರು. ಏಕೆಂದರೆ ಇನ್ನೊಬ್ಬರ ಸುಖಸಾಧನಗಳನ್ನು ಅಪಹರಿಸಿಕೊಂಡ ಹೊರತು, ಇವರ ಇಷ್ಟ ಸಾಧ್ಯವಿಲ್ಲ! ಇಂತಹವರು ಕಲಹಕ್ಕೆ ಕಾರಣರಾಗಿ ಒಬ್ಬರನ್ನೊಬ್ಬರು ಮುರಿಯುವ ಹೆಚ್ಚಿನ ಶಕ್ತಿಯನ್ನು ಪಡೆಯುವದಕ್ಕಾಗಿಯೇ ಮರೆಮೋಸ ಮುಂತಾದ ತಂತ್ರಗಾರಿಕೆಯ ಚತುರೋಪಾಯಗಳಲ್ಲಿ ವ್ಯವಹರಿಸುತ್ತಿರುವರು. ಧರ್ಮದ ರೀತಿಯಲ್ಲಿ ಇಷ್ಟವ ಸಾಧಿಸುವವರೆಲ್ಲರೂ ನರರು. ಅಧರ್ಮದ ರೀತಿಯಲ್ಲಿ ಸಾಧಿಸುವವರೆಲ್ಲರೂ ಅಸುರರು. ಸೃಷ್ಟಿಯ ಐತಿಹ್ಯವು ಧಾರ್ಮಿಕವೃತ್ತಿಯ ಹಾಗು ಅಸುರವೃತ್ತಿಯ ಆತ್ಮರುಗಳ ಕದನದ ಸಂಗತಿಯನ್ನೇ ವಿವರಿಸುವದು. ಪರಮಾತ್ಮನ ಅನುಗ್ರಾಹಿಕೆಯು ಪ್ರವೃತ್ತಿಯ ಕಲೆಯವರಿಗೆ ಯಾವಾಗಲು ಅವರ ಚಿದ್ಧರ್ಮಾನುಸಾರವಾಗಿರುವದರಿಂದ, ಸೃಷ್ಟಿಯ ಧರ್ಮಾನುಸಾರವಾಗಿ ಅಸುರವೃತ್ತಿಯ ಆತ್ಮರುಗಳಿಗೆ ಜಯವುಂಟಾಗುತ್ತ ಹೋಗುವದು. ಆದರಿಂದ ಅವರ ಮಹತ್ವಾಕಾಂಕ್ಷೆಯು ಮೇರೆದಪ್ಪಿ ಬೆಳೆದು ಲೋಕ

ವನ್ನೆಲ್ಲ ವ್ಯಾಪಿಸಿಕೊಂಡು, ಸ್ವರ್ಗಕ್ಕೂಡರುವದು . ಅಧರ್ಮವೇ ಮೈಯುಂಡ
ಈ ದೈತ್ಯರಿಗೆ ಆಮುಷ್ಮಿಕ ಸಂಗತಿಯು ಅಸಾಧ್ಯವಾಗುವದರಿಂದ ಅದನ್ನು ಅಡರಿ
ಕೊಂಡುವ ಶಕ್ತಿಯನ್ನು ಪರಮಾತ್ಮನಿಂದ ಪಡೆಯಲು ಘೋರತಪವನಾಚರಿಸಿ
ಆತ್ಮನನ್ನು ಪ್ರತ್ಯಕ್ಷೀಕರಿಸಿಕೊಂಡು, ಹೊಂದಿದ ಬಲದಿಂದ ಸ್ವರ್ಗವನ್ನು ಹಾಳು
ಗೆಡವಿ, ಬ್ರಹ್ಮಲೋಕ, ವೈಕುಂಠ ಮೊದಲಾದ ತ್ರಿಮೂರ್ತಿಗಳ ಲೋಕಗಳಿಗೂ
ಕೂಡ ಕೈ ಹಚ್ಚಿದ ಉದಾಹರಣೆಗಳು ಪುರಾಣಗಳಲ್ಲಿ ಕಂಡುಬರುವವು. ಈ
ದೈತ್ಯರಿಗೆ ತಾವು ಏನು ಗಳಿಸಿದರೂ ಸುಖವಿಲ್ಲ. ಇವರ ಬಾಳುವಿಕೆಯಿಂದ
ದೇವತೆಗಳಿಗೂ ಕೂಡ ಸುಖವಿಲ್ಲ. ತಲೆತಾಗಿ ಧರ್ಮದತ್ತ ಮುಖತಿರುಗುವವರೆ
ಗೆ, ಜನ್ಮಜನ್ಮಾಂತರಗಳಲ್ಲಿ ಹೀಗೆಯೇ ಲೋಕಕಂಟಕರಾಗಿ ವ್ಯವಹರಿಸುವವರೇ.
ಇವರು ಯಾವ ಸುಖಶಾಂತಿಗಳಿಗೂ ಭಾಜನರಲ್ಲ.

ಇನ್ನು ಐಹಿಕ ಆಮುಷ್ಮಿಕ ಸಂಗತಿಗಳಲ್ಲಿ ಇಷ್ಟವತಾಳಿ ಧರ್ಮದಿಂದ ಬಾ
ಳುವವರೆಲ್ಲರೂ ರಜೋಗುಣಾತ್ಮಕರು. ಏಕೆಂದರೆ ಇವರು ಇನ್ನೊಬ್ಬರನ್ನು ಕೆಡಿ
ಸಿ ತಮ್ಮ ಸುಖವನ್ನು ಸಾಧಿಸಬೇಕೆಂಬ ಭಾವದವರಲ್ಲ! ಧರ್ಮದ ರೀತಿಯಲ್ಲಿ ಬಂ
ದುದನ್ನುಂಡು ಬಾಳುವವರು- ಅವರಲ್ಲಿ ಆಮುಷ್ಮಿಕ ಸಂಗತಿಗಳಲ್ಲಿ ಇಷ್ಟವ
ತಾಳಿದವರು ಐಹಿಕ ಸಂಗತಿಗಳನ್ನು ಧರ್ಮ ರೀತಿಯಲ್ಲಿ ಮಾರಿ, ಆಮುಷ್ಮಿಕ
ಸಂಗತಿಗಳಿಗೆ ಬೇಕಾದ ಪುಣ್ಯವನ್ನು ಗಳಿಸಿಕೊಂಬುವರು. ಏಕೆಂದರೆ ಪುಣ್ಯ
ಸಂಗ್ರಹವಿಲ್ಲದೆ, ಆಮುಷ್ಮಿಕಫಲಪದವಿಗಳಿಲ್ಲ. ಯಜ್ಞಯಾಗಾದಿಕರ್ಮಗಳೆಲ್ಲ
ಆಮುಷ್ಮಿಕ ಫಲಪದವಿಗಳಿಗಾಗಿಯೇ ಇರುವವು- ಯಜ್ಞಯಾಗಾದಿಗಳಲ್ಲಿ ಪಶು
ಹಿಂಸೆಯು ವಿಧಿಸಿರುವದರಿಂದ ನಿಜದೃಷ್ಟಿಯಿಂದ ಇವೆಲ್ಲ ಹೀನ ಕರ್ಮಗಳಾಗಿರು
ವವು. ಹಿಂಸಾಕಾರ್ಯವೇ ಅಂಗವಾಗಿಯುಳ್ಳ ದುಷ್ಟಾತ್ಮರನ್ನು ದುಷ್ಟ ಕಾರ್ಯ
ದಿಂದ ತಿರುಗಿಸುವದಕ್ಕಾಗಿ, ಅಲ್ಪಹಿಂಸೆಗೆ ಒಡಂಬಟ್ಟು, ಧರ್ಮಮಾರ್ಗಕ್ಕೆ
ಹಚ್ಚುವಂಥ ಉಪಾಯಕರ್ಮಗಳಾಗಿರುವವು ಆದುದರಿಂದ ಜ್ಞಾನಿಗಳು
ಇವುಗಳನ್ನು ಅಲ್ಲಗಳೆದಿರುವರು. ತನ್ನೊಳಗಿದ್ದ ಪಶುವೃತ್ತಿಯನ್ನು ನಾಶ
ಮಾಡಿಕೊಳ್ಳುವದರಲ್ಲಿಯೇ ನಿಜಯಜ್ಞವಿರುವದಲ್ಲದೆ, ಒಳಗಿದ್ದ ಪಶುವೃತ್ತಿಯನ್ನು
ಕಾಯ್ದುಕೊಂಡು ಹೊರಗಿನ ಪಶುಗಳನ್ನು ವಧಿಸುವದು ವಿವೇಕಿಯ ಧರ್ಮವಲ್ಲವು.
ಈ ಅಂತರಂಗ ಯಜ್ಞದ ದೃಷ್ಟಾಂತರೂಪಕ್ಕಾಗಿಯೇ ಬಾಹ್ಯಯಜ್ಞಗಳು ಪ್ರಯೋಗ
ದಲ್ಲಿ ಬಂದಿರುವವು. ಅವುಗಳ ಇಂಗಿತವನರಿಯದೆ ಕೇವಲ ಫಲಪದವಿಗಳಿಗಾಗಿ,
ಅರಿಯದವರು ಪ್ರಯೋಗಿಸತೊಡಗಲು ಲೋಕದಲ್ಲಿ ಹಿಂಸಾಕಾರ್ಯಕ್ಕೆ
ಯಾವ ಧರ್ಮದಿಂದಲೂ ಪ್ರತಿಬಂಧವು ಇಲ್ಲವಂತಾಗಿ ಮಿತಿಮೀರಿ ನಿಂತಿತು.
ಇದೇ ಬೌದ್ಧ ಧರ್ಮದ ಉತ್ಪತ್ತಿಗೆ ಕಾರಣವಾಯಿತು. ಈ ಧಾರ್ಮಿಕಕರ್ಮಗ
ಳನ್ನಾಚರಿಸಿ ಹೊರಗಿನ ಫಲಪದವಿಗಳಾದರೂ ಪುಣ್ಯಸಂಗ್ರಹವು ತೀರುವವರೆಗೆ

ಇರುವವು. ಪುಣ್ಯವು ತೀರಿದ ಬಳಿಕ, ಎಣ್ಣೆತೀರಿದ ದೀವಿಗೆಯಂತೆ ಹಾರಿಹೋಗುವವು. ಆತ್ಮಭಾವವನ್ನು ಹಿಂಗಿಸಿಕೊಳ್ಳದ ಆತ್ಮರು ಎಂತಹ ಬಲ್ಲಿದರಿದ್ದರೇನು? ಪುಣ್ಯದ ಫಲವನುಂಡ ಬಳಿಕ, ಪುನಃ ಪುಣ್ಯವ ಗಳಿಸಿಕೊಳ್ಳಲು ಇಹಲೋಕಕ್ಕೆ ಇಳಿಯಬೇಕಾಗುವದು. ಎಲ್ಲಿಯವರೆಗೆ, ಪಶುವೃತ್ತಿಯನ್ನು ಹಿಂಗಿಸಿಕೊಳ್ಳುವ ನಿಜಮಾರ್ಗದಲ್ಲಿ ಅಡಿಯಿಡುವದಿಲ್ಲವೋ ಅಲ್ಲಿಯವರೆಗೆ ಆತ್ಮರು ಧರ್ಮದ ಎಂತಹ ಕರ್ಮವನ್ನಾಚರಿಸಿ, ಎಂಥ ಪುಣ್ಯದರಾಶಿಯನ್ನು ಗಳಿಸಿಕೊಂಡರೂ, ಅವರಿಗೆ ಇಹಕ್ಕೂ ಪರಕ್ಕೂ ಎಡತಾಕುವದು ತಪ್ಪಿದ್ದಲ್ಲ; ಈ ಎಡತಾಕೋಣವೇ ಸಂಸಾರ.

ಆತ್ಮಿಕಸಂಗತಿ ವಿಷಯವಾಗಿ ಇಷ್ಟವ ತಾಳಿ, ಧರ್ಮದಿಂದ ಬಾಳುವವರೆಲ್ಲರೂ ಸಾತ್ವಿಕಗುಣಾಕರರಷ್ಟೆ; ಇವರಲ್ಲಿ ಕೆಲವರು ಅರಣ್ಯವಾಸಿಗಳಾಗಿ, ತಪಶ್ಚರ್ಯಾದಿಗಳನ್ನು ಆಚರಿಸುತ್ತಿರುವರು. ಇನ್ನುಳಿದವರೆಲ್ಲ ಆಶ್ರಮಧರ್ಮವಿಡಿದು ಗ್ರಾಮವಾಸಿಗಳಾಗಿ ಮತಾಂತರಗಳಲ್ಲಿ ಶುದ್ಧವಾದ ವೈದಿಕಕರ್ಮಗಳನ್ನು ಆಚರಿಸುತ್ತಿರುವರು. ಅರಣ್ಯವಾಸಿಗಳಾದವರಲ್ಲಿ ಕೆಲವರು ತಪಸ್ವಿಗಳೂ, ಕೆಲವರು ಯೋಗಿಗಳೂ, ಇರುವರು.

ಯೋಗತಪಶ್ಚರ್ಯಾದಿಗಳು, ಆತ್ಮಾನುಸಂಧಾನದಲ್ಲಿ ಕಾಡುವವಾದ ತನುಕರಣಾದಿಗಳ ಬಲವನ್ನು ಕುಗ್ಗಿಸುವ ಅಥವಾ ತಪ್ಪಿಸುವ ನೆವದಿಂದ ಬೆಳೆದಿರುವವು. ತಪಸ್ಸಿನಲ್ಲಿ ಆತ್ಮನನ್ನು ಚಲಿಸ್ಯಾಡದೆ, ತನುಕರಣಾದಿಗಳ ಬಲವನ್ನು ಕುಗ್ಗಿಸುವವಿರುವದರಿಂದ, ಅವುಗಳಿಗೆ ಉತ್ತೇಜಕವಾದ ಆಹಾರವನ್ನು ಕಡಿಮೆ ಮಾಡುತ್ತ ಹೋಗಿ, ಕಡೆಗೆ ಬರೆ ಗಾಳಿಯಮೇಲೆ ಜೀವ ಹಿಡಕೊಂಡು ಬಾಳುವದದನ್ನು ಸಾಧಿಸುವದಾಗಿರುವದು. ಇದರಿಂದ ಶರೀರವು ಕೊರಗಿ ಹಲ್ಲಿಯಾಗಿ ಭೂಮಿಗೆ ಗಟ್ಟಿಯಾಗಿ ಹತ್ತಿಕೊಂಡರೂ, ಆತ್ಮರ ಆತ್ಮಭಾವವು ಎಷ್ಟೂ ಕುಂದಲಾರದು. ಏಕಂದರೆ ತನುಕರಣಾದಿಗಳ ಬಳಿಕೆಯಿಲ್ಲದೆ ಆತ್ಮಭಾವವು ಹಿಂಗುವದಲ್ಲ, ಆತ್ಮಭಾವವು ಹಿಂಗಿದಲ್ಲದೆ ಆತ್ಮರ ನಿಜವಾದ ಉನ್ನತಿಯಿಲ್ಲ. ಈ ಆತ್ಮಭಾವವು ಎಷ್ಟೂ ಕುಂದದೆ ಬರೇ ಶರೀರವನ್ನು ಒಣಗಿಸಿಕೊಳ್ಳುವ ಈ ಉಪಾಯವು, ಹಾವನ್ನು ಬಡಿಯಲು ಅದರ ಹುತ್ತನ್ನು ಬಡಿದಂತಾಗುವದು. ("ಹುತ್ತವ ಬಡಿದರೆ ಹಾವು ಸಾಯಬಲ್ಲುದೇನಯ್ಯ" ಬಸವಣ್ಣನ ಉಕ್ತಿ) ಇದರಿಂದ ಬ್ರಹ್ಮವ ಕಂಡರೂ, ಬ್ರಹ್ಮಾನುಸಂಧಾನಕ್ಕಾಗಿ ಸ್ಥೂಲಶರೀರವನ್ನು ಹಿಡಿದು ಆಚರಿಸುವದು ತಪ್ಪಿದ್ದಲ್ಲ. ಎಲ್ಲಿಯವರೆಗೆ ಬ್ರಹ್ಮಾನುಸಂಧಾನದಲ್ಲಿ ತೊಡಗುವದಿಲ್ಲವೋ, ಅಲ್ಲಿಯವರೆಗೆ ಎಷ್ಟುಕಾಲ ತಪಸ್ಸುಮಾಡಿದರೂ, ಇಲ್ಲವೆ ತಪಸ್ಸಿನ ಬಲದಿಂದ ಸಾಲೋಕ್ಯ ಸಾಮೀಪ್ಯ ಸಾಯುಜ್ಯಾದಿಪದಗಳನ್ನು ಹೊಂದಿ ವೈಕುಂಠ ಕೈಲಾಸಾದಿಗಳನ್ನು ಅಡರಿದರೂ ಭವಕ್ಕೆ ಬಪ್ಪುದು ತಪ್ಪದು.

ಅದೇಮೇರೆಗೆ ಯೋಗದಲ್ಲಿ, ತನುಕರಣಾದಿಗಳ ಉಪಟಳವನ್ನು ತಪ್ಪಿಸುವದಕ್ಕಾಗಿ, ಆತ್ಮನನ್ನು ಹೃದಯಸ್ಥಾನದಿಂದ ಎಬ್ಬಿಸುವ ಉಪಾಯವಿರುವದು, ಇದು

ಸಾಧಿಸುವವರಿಗೆ ಇವರಲ್ಲಿ ಏನುಕಷ್ಟವಿದೆಯೆಂಬುದು ಇದರ ಅಭ್ಯಾಸದಲ್ಲಿ ಇದ್ದವ
ರಿಗೇ ಗೊತ್ತು. ಆಗುವ ಕಷ್ಟವನ್ನು ವಿವರಿಸುವದು ಹಡೆವ ತಾಯಿಯು ಬಂಜೆ
ಯು ಮುಂದೆ, ಹಡೆಯುವ ಕಾಲಕ್ಕುಂಟಾದ ಕಷ್ಟವನ್ನು ತೋಡಿಕೊಂಡಂತಾಗು
ದು. ತಳತನಕ ನೀರೊಳಗೆ ಮುಳುಗಿದ ಕಪ್ಪೆಯು, ನೀರ ಮೇಲುಭಾಗದ
ಯೇ ಚಿತ್ತವೃತ್ತಿಯು ಳ್ಳದುದಾಗಿ, ತಳದಲ್ಲಿಯೇ ಕೂತು ಮೇಲಕ್ಕೆ ನೋಡು
ತ್ತಿರುವಂತೆ, ಇಷ್ಟು ಕಷ್ಟಪಟ್ಟು ಬ್ರಹ್ಮರಂಧ್ರಕ್ಕಡರಿ ಜ್ಯೋತಿರ್ಮಯಲಿಂಗದ
ತಾವು ಮುಳುಗಿಕೊಂಡಿದ್ದರೂ, ಸಂಸ್ಕಾರದ ದೋಷವನ್ನು ಹಿಂಗಿಸಿಕೊಳ್ಳದ
ಡಾತ್ಮರು ಸಂಸಾರದತ್ತಮುಖವಾಗಿಯೇ (ಕೆಳಮುಖರಾಗಿಯೇ) ಇರುವ
ತನ್ನಮರಸಯೋಗವಿಲ್ಲದೆ ಕೆಳಮುಖರಾದ ಆತ್ಮರು ಆಗಾಗ್ಗೆ ಕೆಳಗಿಳಿದು
ಯಸ್ಥಾನಕ್ಕೆ ಬರುತ್ತಿರುವರು ಮೇಲಕ್ಕಡರಿದಾಗ ಕಣ್ಣಮುಂದೆ ಕಟ್ಟಿದ
ಮಾತ್ರವು ಕೆಳಗಿಳಿಯಲು ಕನಸಿನಂತಾಗಿಬಿಡುವದು. ಸಂಸ್ಕಾರದ ದೋಷ
ಆತ್ಮರನ್ನು ಪೂರ್ವದ ಸ್ಥಿತಿಗೆ ತಂದು ಪ್ರಪಂಚದಲ್ಲಿ ಬಿಡುವದಾದುದರಿಂದ ತನು
ರಣಾದಿಗಳ ಉಪಟಳವು ಪುನಃ ಮೊದಲಿನಂತೆ ಏಳುವದು. ಏಕಂದರೆ ಸಂಸ್ಕಾ
ರದ ದೋಷವನ್ನು ಹಿಂಗಿಸಿಕೊಳ್ಳದೆ ಜ್ಯೋತಿರ್ಮಯಲಿಂಗದಲ್ಲಿ ಮುಳುಗಿದ
ನು? ಕಿವುಡನು ಗಾನವ ಕೇಳಿದಂತೆ; ಕುರುಡನು ಬೆಳತನಕ ಆಟವ ನೋ
ದಂತೆ; ಜೇನೆಯಿಂದ ಬಾಯಿವಿಷವಾದವರು ಮೃಷ್ಟಾನ್ನವನ್ನು ಉಂಡಂತೆ,
ಡಿಹಾಯ್ದವನು ಮೈಯೆಲ್ಲ ಸುಗಂಧದ ಎಣ್ಣೆಯನ್ನು ಪೂಸಿಕೊಂಡಂತೆ, ಸಂ
ರಂಭೆಯು ಮುಗ್ಗಲಲ್ಲಿ ಬಿದ್ದಂತೆ, ಮೇಣಗಮುಟವನ್ನು ನೀರಲ್ಲಿ ನೆನೆಹಾಕಿದಂತೆ,
ಲಿಂಗದ ಪರಿಣಾಮವು ಸಂಸ್ಕಾರದ ದೋಷದ ಮೇಲೆ ಏನೊಂದು ಆಗದೆ, ಆತ್ಮ
ಆ ದೋಷದಿಂದಲೇ ಉಳಿಯುವನ. ಈ ಬಗ್ಗೆ ಪ್ರಭುದೇವರು ಹಾಡಿರು
ನು ನೋಡಿರಿ.

"ಪುಲಿ (ತನುಕರಣಾದಿಗಳ ಉಪಟಳ) ಗಂಜಿ ಹುತ್ತ (ಬ್ರಹ್ಮರಂಧ್ರ)
ಹೊಕ್ಕರೆ, ಸರ್ಪ (ಸಂಸ್ಕಾರದೋಷ) ಕಚ್ಚದೆ ಮಾಣ್ಬುದೇ?

ಕನಸಿನಲ್ಲಿ ಕಂಡದ್ದು ಮನದಲ್ಲಿ ಉಳಿದರ. ವ್ಯವಹಾರದಲ್ಲಿ ಮರೆತು ಹೋ
ಗುವಂತೆ, ಯೋಗಿಯು ತನ್ನ ಯೋಗಸಮಾಧಿಯಲ್ಲಿ ಕಂಡುದನು ವ್ಯವಹಾರದ
ತನ್ನ ಸಂಸ್ಕಾರದೋಷದಿಂದ ಆಗಾಗ್ಗೆ ಮರತೇ ಮರೆಯುವನು. ಮರೆತುದ
ಅರಿತು ಅನುಸಂಧಾನಿಸಲು ತನುಕರಣಾದಿಗಳ ಶುದ್ಧಿಯು ಇಲ್ಲದ ಮೂಲ
ಕೆಳಗಿಳಿದ ಆತ್ಮರು ಪುನಃ ಮೇಲಕ್ಕಡರುವರು. ಈರೀತಿಯಾಗಿ ಅವರು ಜೀವ
ಳ್ಳತನದ ವ್ಯಾಪಾರದಲ್ಲಿ ಸೃಷ್ಟಿಯ ಸ್ವಾಭಾವಿಕಧರ್ಮಕ್ಕೆ ವಿರೋಧವಾಗಿ ಅನ
ತಕಾಲದ ವರೆಗೆ ಬಾಳುವರು. ಎಷ್ಟು ಕಾಲ ಬದುಕಿದರೂ ಸುಳ್ಳುಸಂಗತಿಗ
ತೊಡಕಿಕೊಂಡಿರುವ ಚಿತ್ತವೃತ್ತಿಯನ್ನು ಪರಿಹರಿಸಿಕೊಳ್ಳುವದು ಅವರಿಗೆ

ತಪ್ಪಿದ್ದಲ್ಲ; ಈ ಪರಿಹರಿಸಿಕೊಳ್ಳುವ ಕ್ರಿಯೆಯು ಜಡತನವಿಡಿದು ಅನುಸಂಧಾನ ದಿಂದಲೇ ಆಚರಿಸುವ ಭಕ್ತಿಯೋಗದಲ್ಲಿರುವದು. ಮತ್ತು ಇವರು ಈ ಭಕ್ತಿ ಯೋಗವನ್ನು ಆಚರಿಸಿದ ಹೊರತು ಎಷ್ಟುಕಾಲ ಆತ್ಮಸಾಕ್ಷಾತ್ಕಾರಮಾಡಿಕೊಂಡು ಪ್ರತಿ ಪರಮಾತ್ಮರಾಗಿ ಬಾಳಿದರೂ, ಗಳಿಸಿದ ಸಿದ್ಧಿಯ ಸತ್ವವೆಲ್ಲ ಒಂದಿಲ್ಲೊಂದು ಕಾಲಕ್ಕೆ ನಾಶವಾಗಿ, ಸತ್ವಹೀನರಾಗಿ, ಸೃಷ್ಟಿಯ ಸ್ವಾಭಾವಿಕಧರ್ಮದಲ್ಲಿ ಭವಕ್ಕೆ ಬಪ್ಪುದು ತಪ್ಪಿದುದಲ್ಲ.

ಮನುಮುನಿಗಳಾದಿಮಹಿಮರೆಲ್ಲರು, ಆತ್ಮರಲ್ಲಿ ಸ್ವಾಭಾವಿಕವಾಗಿ ಆದಿಕಾಲದಿಂದ ವೈಯುಂಡಿರುವ ವಿರೋಧಪಾದ ಸಂಗತಿಗಳನೆಲ್ಲ ದಿಗ್ಬಂಧಿಸಿ ಆಚರಿಸುವ ನಿಜಭಕ್ತಿಯೋಗದ ನೆಲೆಗೆ ನಿಲುಕದೆ, [illegible]ವ ಇಷ್ಟಸಮರಸದಲ್ಲಿ ಭಕ್ತಿ ಯೋಗದಿಂದ ಆಚರಿಸುವ ಅಧಿಕಾರವು [illegible]ಲ್ಲವಾದುದರಿಂದ, ಯೋಗತಪಶ್ಚರ್ಯಾದಿಕರ್ಮವ್ರತಗಳನ್ನು ಆಚರಿಸಿದರೂ ಸಾರ್ಥಕವಾಗಲಿಲ್ಲವು. ಇತ್ತ ಆತ್ಮರು ಧರ್ಮವಿಡಿದು, ಶುದ್ಧವಾದ ಸಾತ್ವಿಕವೈದಿಕಕರ್ಮಗಳನ್ನು ಆಚರಿಸುವದರಿಂದ ಏನಾಗುವದೆಂಬದನ್ನು ಸಿದ್ಧಿಸಿ ಹೇಳಲಿಕ್ಕೆ, ಈಗಿನ ಸೃಷ್ಟಿಯ ದೃಷ್ಟವಾದ ಅನಿಷ್ಟ ಸ್ವರೂಪವೇ ಸಾಕ್ಷಿಭೂತವಾಗಿರುವದು. ಹೀಗೇಕಾಯಿತೆಂಬದು ಈ ೨ನೆಯಭಾಗದಲ್ಲಿ ಹಿಂದೆ ಹೇಳಿದ ದೋಷಗಳ ಐತಿಹ್ಯದಿಂದ ತಾನೇ ವ್ಯಕ್ತವಾಗುವದು. ಆತ್ಮರು ತಮ್ಮಲ್ಲಿ ವೈಯುಂಡ ಅನಿಷ್ಟವ ಪರಿಹರಿಸಿಕೊಂಬುವದೇ ಇಷ್ಟಸಮರಸದ ಅಧಿಕಾರವನ್ನು ಹೊಂದುವದಾಗಿರುವದು. ಮನುಮುನಿಗಳಾದಿಮಹಿಮರು ಯೋಗತಪಶ್ಚರ್ಯಾದಿಗಳಿಂದ ನಿಜದ ನೆಲೆಗೆ ಹಾರಿ,ಕಂಡುದುದರಲ್ಲಿ ಮಾತಿಗೆ ನಿಲಕಿ, ಹೇಳಲಿಕ್ಕೆ ಬರುವಷ್ಟನ್ನೆಲ್ಲ ಶಾಸ್ತ್ರರೂಪದಿಂದ ಮುಂದಿಟ್ಟರು. ಈ ಶಾಸ್ತ್ರಗಳ ಮುಖದಿಂದ ಓದಿ ತಿಳಿದುದನು ಬ್ರಹ್ಮವೆಂದು ಭಾವಿಸಿ ಆಚರಿಸಲಾರಂಭಿಸಿದುದು ಮೊದಲನೆಯ ತಪ್ಪು; ಅನಿಷ್ಟಪಂಹರಿಸಿಕೊಳ್ಳುವ ಉಪಾಯುವನರಿಯದೆ, ತಮ್ಮ ಕಲ್ಪಿತ ಇಷ್ಟದಲ್ಲಿ ಭಕ್ತಿಯನ್ನಾಚರಿಸಹತ್ತಿದುದು ಎರಡನೆಯ ತಪ್ಪು; ತಾವು ಆಚರಿಸುವದು ನಿಜಭಕ್ತಿಯೋಗವೆಂದು ಭಾವಿಸಿ, ನಿಜಭಕ್ತಿಯೋಗಕ್ಕೆ ಸಲ್ಲದ ಸೂತಕಾದಿಗಳನ್ನು ಹಿಡಿದು ಆಚರಿಸುವದು ಮೂರನೆಯ ತಪ್ಪು; ಅಧಿಕಾರವಿಲ್ಲದೆ, ಅಧಿಕಾರಿಗಳು ಆಚರಿಸುವ ಪವಿತ್ರವಾದ ಆಚರಣೆಗಳನ್ನು ಆಚರಿಸಿದುದೇ ನಾಲ್ಕನೆಯ ತಪ್ಪು; ಲೋಕದ ಬಳಿಕೆಯಲ್ಲಿ ನಿಜಭಕ್ತಿಯೋಗವಲ್ಲದೆ ಸೃಷ್ಟಿಯನಿಯಮಕ್ಕೆ ವಿರುದ್ಧವಾಗಿ ಕಾಯ್ದುಕೊಳ್ಳಲಿಕ್ಕಾಗದ ಅಂಗಪವಿತ್ರತೆಯನ್ನು ರಕ್ತಶುದ್ಧಿಯಿಂದ ಕಾಯ್ದುಕೊಳ್ಳಲಾಗುವದೆಂದು ಭಾವಿಸಿ ಆಚರಿಸಹತ್ತಿದುದು ಐದನೆಯ ತಪ್ಪು. ಇದ್ದ ಪವಿತ್ರತೆಯನ್ನು ಕಾಯ್ದುಕೊಳ್ಳಲಿಕ್ಕಾಗದ ಸ್ಥಿತಿಯಲ್ಲಿ ಹೆಚ್ಚಿನ ಪವಿತ್ರತೆಯನ್ನು ಹೊಂದಲಿಕ್ಕಾಗುವದೆಂದು ಹರದಾಡಹತ್ತಿದುದು ಆರನೆಯತಪ್ಪು; ಇತ್ಯಾದಿ ತಪ್ಪುಗಳಸಂಮಾಲಿಯೇ. ಮೊದಲು ಕಲ್ಪಿತ ಇಷ್ಟವು ನಿಜವೆಂದು ಭಾವಿಸಿದುದೇ ಅಕ್ಷಮ್ಯವಾದ ಅಪರಾಧವಾಗಿರುವದು. ಹಾಲುಕಾಣದವ್ಯಕ್ತಿಯು, ಹಾಲು ಬೆಳ

ಗಿರುವದೆಂದು ಕೇಳಿದ ಮಾತ್ರದಿಂದ ಸುಣ್ಣದ ನೀರು ಕುಡಿದಂತೆ, ಹುಟ್ಟುಗುರುಡ ನು ಬೆಳ್ಳಕ್ಕಿಯ ಬಿಳೀತನವನ್ನು ಬೆಳ್ಳಕ್ಕಿಯ ಆಕಾರದಲ್ಲಿ ಮಣಿಸಿ ತೋರಿದ ಮುಂಗೈಯನ್ನು ಮುಟ್ಟಿ ತಿಳಕೊಂಡಂತೆ, ಪತಿರೂಪಸಾಮ್ಯವಾಗಿ ಬಂದ ಇಂದ್ರನನ್ನು ಪತಿಯೆಂದೇ ಭಾವಿಸಿ, ರತಿಗೆ ಒಳಪಟ್ಟ ಅಹಲ್ಯೆಯಂತೆ, ಇತ್ಯಾದಿ ಹಲವು ದೋಷಗಳಿಂದ ಕೂಡಿದ್ದಾಗಿರುವದು. ಆದರಿಂದ ನಿಜಪಾತಿವ್ರತ್ಯಕ್ಕೆ ಭಂಗವುಂಟಾಗಿ, ನಿಜಪತಿಯ ಸಮರಸದ ಕ್ರಿಯೆಗೆ ಹೊರತಾಗಿ, ನಿಜಜ್ಞಾನಶೂನ್ಯರಾಗಿ, ಪತಿಯಿಂದ ಶಾಪಹೊಂದಿದ ಅಹಲ್ಯೆಯಂತೆ ವಿಕಾರವೃತ್ತಿತೆಯಿಂದ ಕಲ್ಲಾಗಿ ಜಡತ್ವದಿಂದ ರಸಾತಲಗಂಡಿರುವರು ಶಾಸ್ತ್ರಮುಖದಿಂದ ತಿಳಿಗೆ ಹೊಳೆದುದು ಬಚ್ಚಲ ನೀರಿನ ತಿಳಿಗೆ ಸಮನಾದುದು. ಅನಂತ ದೋಷಗಳು ಬೆರೆತ ಅಂಗದಲ್ಲಿ ತಿಳಿದದ್ದು ಎಂದೂ ಬ್ರಹ್ಮನಾಗಲಾರದು. ಇದನ್ನು ತಿಳಿದೇ ಆರ್ಯರು ತಾವು ಗಳಿಸಿದ ಸಿದ್ಧಿಯ ಸತ್ವಗಳನ್ನು ಲೋಕಕಲ್ಯಾಣಕಾರ್ಯಕ್ಕೆ ಮೂಲಧನವಾಗಲೆಂದು ಕ್ಷೇತ್ರತೀರ್ಥಗಳಲ್ಲಿ ನೆಲಿಸಿ ನೀರು ನೀಡಿದರೂ, ಪ್ರವೃತ್ತಿಯ ಕಲೆಯ ಆತ್ಮರು ಆ ಸತ್ವವನೆಲ್ಲ ಹಡಕೊಂಡು ದುರುಪಯೋಗಿಸಿ ಹಾಳುಮಾಡಿಬಿಟ್ಟರು. ಆದರಿಂದ ಪವಿತ್ರವ್ಯಾಪಾರದ ಬಳಿಕೆಗೆ ಮೂಲಧನವು ಎಲ್ಲಿಯೂ ಎಷ್ಟೂ ಉಳಿಯದಾಗಿರುವದು. ವೀರಶೈವರ ಕರದಿಷ್ಟಪೂಜೆಯೂ ಕೂಡ ನಿಜವಾದ ಭಕ್ತಿಯೋಗವಿಲ್ಲದೆ ಗುರುಪೂಜೆಯಾಗದು ಏಕಂದರೆ ನಿಜವಾದ ಭಕ್ತಿಯೋಗವು ತನಗೂ ಇಷ್ಟಕ್ಕೂ ಬೇರ್ಪಡಿಸಿ ದ್ವೈತವನುಂಟುಮಾಡಲಾರದು. ಬೇರ್ಪಡಿಸಿ ಮಾಡುವದು ದೇವಪೂಜೆಯಾಗುವದು. ದೇವಪೂಜಾಸಕ್ತನು ವೀರಶೈವನಲ್ಲ. ಈ ಬಗ್ಗೆ ಬಸವಣ್ಣನು ಹಾಡಿದ್ದನ್ನು ನೋಡಿರಿ-

" ಅಯ್ಯಾ ನಿಮ್ಮದೇವರೆಂದು ಪೂಜಿಸಲಾಗದಯ್ಯ ; ಮೂನಜರೋಮಜ ಮಹಾಮುನಿಗಳ ಲಯವ ಮಾಡಿದುದ, ನವಕೋಟಿ ಬ್ರಹ್ಮರಿಗೆ ಪ್ರಳಯ ಮಾಡಿದುದ, ದಶಕೋಟಿ ನಾರಾಯಣಂಗೆ ಮರಣವ ಮಾಡಿದುದ, ಅನಂತಕೋಟಿ ರುದ್ರರಿಗೆ ಲಯಮಾಡಿದುದ ನಾ ಬಲ್ಲೆನಾಗ, ಎನ್ನ ಏಳೇಳು ಭವಕ್ಕೆ ತಂದಲ್ಲಿ, ಆನು ಉಭಯಲಿಂಗಜಂಗಮವ ಮರೆಹೊಕ್ಕು ಭವಂನಾಸ್ತಿಯಾಗಿ, ಬದುಕಿದೆನಯ್ಯ ಕೂಡಲಸಂಗಮದೇವ "

ದೇವಪೂಜಾಸಕ್ತರಾಗಿರುವದೇ ಲೋಕದ ಹಂಗು ಹರಕೊಳ್ಳದಿರುವದರ ಕುರುಹಾಗಿರುವದು. ಹಂಗುಹರಕೊಳ್ಳದವರ ಚಿತ್ತವೃತ್ತಿಯು ಪೂಜಾಕಾರ್ಯದಲ್ಲಿಯೂ ಬಹಳಹೊತ್ತು ನಿಲ್ಲಲಾರದು. ಅದನ್ನು ಬಂಧಿಸಿ ಆಸನಗೊಳಿಸುವ ಸಹಜ ಉಪಾಯವು ನಿಜಭಕ್ತಿಯೋಗದಲ್ಲಿರುವದು- ಈ ಭಕ್ತಿಯೋಗದ ನೆಲೆಯು ಸಿಲುಕದೆ, ಚಿತ್ತವೃತ್ತಿಯನ್ನು ಸ್ಥಿರಪಡಿಸಿಕೊಳ್ಳಲು ಆಸನಗಳು ಬೆಳೆದವು. ನಿಜ ಭಕ್ತಿಯೋಗವಿಲ್ಲದೆ, ಆತ್ಮನ ಚಿತ್ತವೃತ್ತಿಯನ್ನು ಬಂಧಿಸುವ ಬಗೆಯಾದ ಆಸನ

ಗಳಿಂದ ದೇಹಶಾಸನವ ಸಹಿಸುವದು, ಆತ್ಮನ ಸಂಸ್ಕಾರದೋಷವನ್ನೇನು ಹಿಂಗಿ
ಸದೆ,ಒಂದು ಪ್ರಕಾರದ ನಿರುಪದ್ರವವಾದ ಆತ್ಮನ ಪ್ರಹದ ಲಂಡತನದ[ಹಟಯೋ
ಗದ] ಆಶನಘಾತಕವೃತ್ತಿಯನೊಂದು ಬೆಳಸಿಸಂತಾಯಿತಷ್ಟೇ, ಲಿಂಗಾನುಸಂ
ಧಾನದ ನಿಜವ್ಯಾಪಾರವು ಒತ್ತಟ್ಟಿಗೆ ಉಳಿದೇ ಬಿಟ್ಟಿತು. ಈ ಹಟಯೋಗವು,
ಸಂಸ್ಕಾರದೋಷಮೂಲಕವಾಗಿ ವಿಕಾರಗಳಿಂದ ಕೂಡಿದ ಆತ್ಮನೆಂಬ ಹುಲಿಗೆ,
ಒಂದುಪ್ರಕಾರದ ಪಂಜರರಚನೋಪಾಯವಾಗಿರುವದು. ಅಲ್ಲದೆ ಅಶನ ವಿಸ
ರ್ಜಸದ ತಪವೂ ಆಗಿರುವದು ಪಂಜರದ ಬಂಧನದಿಂದ ಹುಲಿಯ ಸ್ವಭಾವವು
ಹಿಂಗುತ್ತಿದ್ದರೆ, ಈ ಉಪಾಯದಿಂದ ಆತ್ಮನು ಸ್ವಭಾವದಿಂದ ತಿದ್ದಬಹುದು.
ಬಾಹ್ಯಕಾರಣಗಳ ಸಂಬಂಧದಿಂದ ಆತ್ಮನು ವಿಕಾರಗೊಂಡು ತನ್ನ ಉಪಾಯ
ಬಂಧನದಲ್ಲಿ ಹೀನಕಾರ್ಯದಿಂದ ತಡೆದದ್ದಾದರೆ, ಆ ಕಾರ್ಯಗಳಿಂದಾಗತಕ್ಕ
ದುಷ್ಪರಿಣಾಮದ ಹೆಚ್ಚಿನ ಕಷ್ಟಕ್ಕೆ ಪ್ರತಿಬಂಧವಷ್ಟೇ. ಅಂತರಂಗದ ಸಕಲದೇ
ಣಿಗೆಗಳು ವಿಕಾರಾನುಸಂಧಾನಕ್ಕೆ ಒಳಪಟ್ಟು, ಆತ್ಮನ ಚಿತ್ತಭ್ರಮಣದ ವ್ಯಾಪರ
ಕ್ಕೇನು ಚ್ಯುತಿಯುಂಟಾದಂತಾಗುವದಿಲ್ಲ. ಅದರಿಂದ ಸಾಧಿಸಿದ ಆಸನದ ಆನುವು
ಕೆಲವೊಂದು ಮರ್ಯಾದೆಯ ವರೆಗೆ ತನ್ನ ಯೋಗ್ಯತಾನುಸಾರವಾಗಿ ತಡೆದು,
ಕಡೆಗೆ ತಪ್ಪುವದೇ. ಕಡೆಗೆ ಆತ್ಮನ ಯೋಗ್ಯತೆಯು ವಿವೇಕಾನುವರ್ತನದ ಪ್ರಮಾ
ಣಕ್ಕನುಸರಿಸಿ ಇರುವದು. ಎಂಥ ವಿವೇಕಿಯು ಕೂಡ ಆತ್ಮನಿಗ್ರಹದ ಬಲೆಯಿಂ
ದ, ತನ್ನ ಮರ್ಯಾದೆಯನ್ನು ವಿಾರಿ ವಿಕಾರಮಾತ್ರನಾದಲ್ಲಿ ಹರಿದುಕೊಂಡು ಹೊ
ರಬಿದ್ದು ಅನಿಷ್ಟಕಾರ್ಯಕ್ಕೆ ಪ್ರವೃತ್ತನಾಗುವವನೇ; ಏಕಂದರೆ ಅವನು ತನ್ನ ವಿವೇ
ಕದಿಂದ ತಾನೇ ರಚಿಸಿಕೊಂಡ ಬಲಿಯನ್ನು ಆ ವಿವೇಕವು ಇರುವಮಟ್ಟಿಗೆ ಕಾ
ಯ್ದುಕೊಳ್ಳುವನಲ್ಲದೆ, ವಿವೇಕವು ತಪ್ಪಿದಲ್ಲಿ ತನ್ನಿಂದ ತಾನೇ ರಚಿಸಿದ ಬಲೆಯು
ಮಾಯವಾಗುವದು ಅಂತೇ "ಬಲವಾನಿಂದ್ರಿಯಗ್ರಾಮೋ ವಿದ್ವಾಂಸಮಪಿ ಕರ್ಷ
ತಿ" ಎಂದು ಅನುಭವೋಕ್ತಿಯಿರುವದು. ಅದರಿಂದ ಅವರು ಸುಮ್ಮನೇ ಇಲ್ಲದ ಆ
ಡಂಬರವನು ಬೆಳಸಿ, ಒಣಶೀಲ ಶೂಲಗಳಲ್ಲಿ ಕಾಲಕಳೆದು "ಬಹಳಹೊತ್ತುಪೂ
ಜಾಮಾಡುವವರೆಂ"ದು ಹೆಸರುವಡೆದು ಗೌರವಿಸಿಕೊಳ್ಳಬೇಕಾಗುವದು. ಹೊ
ರಗಿನ ಆಡಂಬರದಿಂದ ಇವರ ಪೂಜೆಯು ದೊಡ್ಡದಾಗಿ ತೋರಿದರೂ, ಒಳಗೆ
ಆತ್ಮರು ಅನಂತಧ್ಯೇಯಗಳಲ್ಲಿ ಎಷ್ಟೋ ಶಾಂತಂರದೆ ಹೊಯ್ದಾಡುತ್ತಿರುವರು.
ಲೋಕಭಕ್ತಿಯಲ್ಲಿ ಲಂಕೆಯ ಹನುಮನಷ್ಟು ಇನ್ನೂ ವರೆಗೆ ಯಾರೂ ಮಾಡಿರುವ
ದಿಲ್ಲ; ಈಮಾತಿಗೆ ಅವನು ಒಂದುಪ್ರಸಂಗದಲ್ಲಿ ಎದೆಯನ್ನು ಬಗಟೆಕೊಂಡು ಒಳ
ಗಿನ ಮೂರ್ತಿಗಳನ್ನು ತೋರಿಸಿದ್ದೇ ಸಾಕ್ಷಿ; ಇವನೂ ಕೂಡ ಹಂಪಿಯ ಉದ್ದನ್ನ
ವೀರಭದ್ರನಲ್ಲಿ ಕ್ರಿಯಾಜ್ಞಾನಸಮರಸವಿದ್ಯೆಯನ್ನು ಹೋದಿದನೆಂದು ಪುರಾಣದ
ಲ್ಲಿ ಆಧಾರವಿರುವದು. ಭಕ್ತಿಯೋಗದಲ್ಲಿ ಬಲ್ಲಿದರಾದ ಲಿಂಗವಂತರ-ಹಾಡೇ
ಹೀಗಾದ ಬಳಿಕ, ಇನ್ನುಳಿದವರ ಸಾಕ್ಷಿಯನ್ನು ತಕ್ಕೊಳ್ಳುವ ಕಾರಣವೇ ಉಳಿಯು

ಲಿಲ್ಲ. ಆಚಾರಗಳೆಲ್ಲ ಕರ್ಮಗಳಾಗಿರುವವು. ಆದರಿಂದ ನಿಜಾಚಾರದ ನೆಲೆ ಯೇ ನಿಲುಕದಂತಾಗಿರುವದು. ಮಲತಾಯಿಯು ಹಡೆದವಳಂತೇ ಹೊರಗಿನ ಉಪಚಾರಗಳನ್ನೆಲ್ಲ ಮಾಡುತ್ತಿದ್ದರೂ ಹಡೆದವಳ ಅಂತಃಕರಣದ ನೆಲೆಯನ್ನು ಹೊಂದದವಳಾದುದರಿಂದ, ಆ ತಾಯಿಮಕ್ಕಳಲ್ಲಿ ನಿಜೈಕ್ಯವಿಲ್ಲದೆ ಹೋಗಿ, ಮಕ್ಕಳು ಆ ತಾಯಿಯನ್ನು ಅಲ್ಲಗಳೆಯುತ್ತಿರುವರು. ತಾಯಿಯು ಮಕ್ಕಳನ್ನು ಆಡಿಕೊಳ್ಳುತ್ತಿರುವಳು. ನಿಜವಾದ ಭಕ್ತಿಯೋಗದ ನೆಲೆಯಲ್ಲಿ ಕಾಲಿಡದೆ ಪರಮಾತ್ಮನ ಅನುಸಂಧಾನವು ಪುಣ್ಯಫಲಪ್ರದವಾದೀತೇ ಹೊರತು, ಪರಮಾತ್ಮನನ್ನಾಗಿಸಲಾರದು. ಆದರಿಂದ ಇವರ ಕಾರ್ಯವು ಕತ್ತಲೆಯಲ್ಲಿ ದೀವಿಗೆಯನ್ನು ನೆನೆದಂತೆ, ಹಸಿವೆಯಾದವರು ಬರೆ ಬಾಯಿಂದ "ಮಿಷ್ಟಾನ್ನ ಮಿಷ್ಟಾನ್ನ" ಅಂದಂತೆ ಆಗುವದು. ದೀವಿಗೆಯನ್ನು ನೆನಿಸಿದ ಮಾತ್ರದಿಂದ ತಾನು ದೀವಿಗೆಯಾಗಿ ಬೆಳಕು ಬಿದ್ದಂತಾಗಲಿಲ್ಲ; ಮಿಷ್ಟಾನ್ನ ಮಿಷಾನ"ವೆಂದು ಅಂದಮಾತ್ರದಿಂದ ಹೊಟ್ಟೆಯು ತುಂಬಿ ಹಸಿವೆ ಹಿಂಗಿದಂತಾಗಲಿಲ್ಲ; ಚಿತ್ತವೃತ್ತಿಯನ್ನೊತ್ತಟ್ಟಿಗಿಟ್ಟು, ದೇವರನ್ನು ನೆನೆದ ಮಾತ್ರದಿಂದ ದೇವರಾಗಲಿಲ್ಲ; ಇವೆಲ್ಲ ಕಡೆಗಾಣಿಸುವ ಉಪಾಯಗಳಲ್ಲ. ಆದರಿಂದ ಭವಚಕ್ರವು ತಪ್ಪದು. ಕಡೆಗಾಣಿಸುವ ಉಪಾಯವು ಲಿಂಗವಾಗುವ ರೀತಿಯು ಇಂಟು.

ಮಾನವಶರೀರರಚನೆಯಲ್ಲಿ ಲಿಂಗವಾಗಿ ಲಿಂಗದಲ್ಲಿ ಬೆರೆಯಲು ಬೇಕಾದ ಸಾಧನಗಳೆಲ್ಲ ಇದ್ದರೂ, ಆತ್ಮನ ಆತ್ಮಭಾವವನ್ನು ಹಿಂಗಗೊಡದ ಕೆಲವು ವಿರುದ್ಧವಾದ ಕಾರಣಗಳೂ ಇರುವವು. ಆಮೂಲಕ ಆತ್ಮರು ಆ ಕಾರಣಗಳನ್ನು ಗೆದ್ದು ಲಿಂಗಕ್ಷೇತ್ರದಲ್ಲಿ ಬರುವದಾಗದೆ, ಭವಚಕ್ರದಲ್ಲಿ ಸಿಕ್ಕು ತೊಳಲುತ್ತಿರುವರು. ಮೀನಜರೋಮಜಾದಿ ಋಷಿಗಳೂ, ಹರಿಬ್ರಹ್ಮಾದಿತ್ರಿಮೂರ್ತಿಗಳೂ ಭವಚಕ್ರದಲ್ಲಿ ಸಿಕ್ಕಬಳಿಕ ಮಿಕ್ಕುಳಿದವರ ಪಾಡೇನು? ಯಾರಾದರೇನು? ಕಡೆಗೆ ಮಾನವನಾಗಿ, ಕಾಯವಿಡಿದಾಚರಿಸಿ, ಲಿಂಗವಾಗಿ ಲಿಂಗದಲ್ಲಿ ಬೆರೆತ ಹೊರತು, ಮುಕ್ತಿಯಾಯಿತೆಂದು ಭಾವಿಸುವದು ತಪ್ಪು; ಲಿಂಗಸಾಮರಸ್ಯಯೋಗವಿಲ್ಲದೆ, ಎಂತಹ ಅಗಾಧಕಾರ್ಯಗಳನ್ನು ಮಾಡಿದರೂ, ಎಷ್ಟು ಎಚ್ಚರಿಕೆಯಿಂದ ದೇಹವನ್ನಿಟ್ಟು ಪ್ರತಿದೇವರಾದಾಗ್ಯೂ ಅವರಿಗೆ ಭವಚಕ್ರವು ತಪ್ಪಿದುದಲ್ಲ; ಆದುದರಿಂದ ಆ ವಿರುದ್ಧವಾದ ಕಾರಣಗಳನ್ನೂ, ಅವುಗಳನ್ನು ಗೆಲ್ಲುವ ಉಪಾಯಗಳನ್ನೂ ತಿಳಿದು, ಅವುಗಳ ತೊಡಕಿನೊಳಗಿಂದ ಪಾರಾಗುವ ಉಪಾಯಾನುವರ್ತನದಲ್ಲಿಯೇ ನಿಜವಾದ ವೀರವೃತ್ತಿಯು ಇರುವದು. ಆದನ್ನು ಅಂಗವಿಸಿಕೊಂಡ ಹೊರತು ಲೋಕದಲ್ಲಿ ಎಲ್ಲಿಯೂ ನಿಜಧರ್ಮದ ನೆಲೆಗೆ ಯಾರೂ ಎಂದೂ ಯಾವರೀತಿಯಿಂದಲೂ ಹಾರಲಾರರು.

## ವಿರುದ್ಧವಾದ ಕಾರಣಗಳು ಇಲ್ಲವೆ ಸಂಗತಿಗಳು,



"ಯಥಾಭಾವಸ್ತಥಾಲಿಂಗಂ" "ಯಥಾ ಭಕ್ತಿ ಸ್ತಥಾ ಸಿದ್ಧಿಃ" ಭಾವದಂತೆ

ಬ್ರಹ್ಮ, ಮನಸಿನಂತೆ ಮಹಾದೇವ, ಭಕ್ತಿಯಂತೆ ಭಾವವೆಂಬ ಉಕ್ತಿಯ ತಾತ್ಪರ್ಯ
ವು ಇದೇ. ಆತ್ಮರು ಏನನೋದಿ ಏನುಮಾಡಿದರೂ ಭಾವವು ತಿದ್ದುವದು ಕಷ್ಟ; ಭಾವ
ಶುದ್ಧಿಯಿಲ್ಲದವರು ತಾವು ಓದಿದುದನೆಲ್ಲ, ಕೇಳಿದುದನೆಲ್ಲ, ನೋಡಿದುದನೆಲ್ಲ,
ಮುಟ್ಟಿದುದದೆಲ್ಲ, ಮೂಸಿದುದನೆಲ್ಲ, ಉಂಡಿದುದನೆಲ್ಲ, ಕೂಡಿದುದನೆಲ್ಲ, ತಮ್ಮ
ಭಾವದಂತೆ ಮಾಡಿಕೊಂಡು ಬಿಡುವರು. ಅಂದರೆ ಎಲ್ಲವೂ ಅವರವರ ಭಾವದಲ್ಲಿ
ಆಕಾಶದಲ್ಲಿ ಹೊಗೆಯು ಹೇಗೋ ಹಾಗೆ ತದ್ರೂಪದಲ್ಲಿ ಅಡಗಿ ಬಿಡುವವು. ಆದು
ದರಿಂದ ಹೀನಭಾವಿಗಳು ವೇದಕ್ಕೂ ಧರ್ಮಕ್ಕೂ ಅಧಿಕಾರಿಗಳಲ್ಲೆಂದು
ಅವರನ್ನು ಬಹಿಷ್ಕರಿಸುತ್ತ ಬಂದಿರುವದು. ಬಸವಣ್ಣನಾದರೂ "ಮನಹೀ
ನಂಗೆ ಶಿವದೀಕ್ಷೆಯ ಕೊಟ್ಟರೆ, ಕೆಟ್ಟವನೇಕೆ ಸದ್ಭಕ್ತನಾಗುವನೋ, ಕೂಡಲಸಂ
ಗಮದೇವಾ;" "ಮನಹೀನನ ಪೂಜಿಸಲಗಾಹರಿಸಿದಂತೆ;" ಇತ್ಯಾದಿ ಹಾಡಿಕೊಂ
ಡಿರುವನು. ಹೀನಭಾವಿಗಳು ಏಸುಕಾಲಕ್ಕೂ ಸದ್ಭಕ್ತರಾಗಲಾರರೆಂಬ ಅಭಿಪ್ರಾ
ಯವು. ಹೀನಭಾವಿಗಳೇ ಶೂದ್ರರು. ಶುದ್ಧಭಾವಿಯು ಹೊಲಗೇರಿಯಲ್ಲಿ ಜನಿಸಿ
ದರೂ ಅವನಿಗೆ ಶೂದ್ರನೆಂತೆನಲಾಗದು. ಹೀನಭಾವಿಯು ಬ್ರಾಹ್ಮಣಕುಲದಲ್ಲಿ
ಜನಿಸಿದರೂ ಅವನು ಶೂದ್ರನೇ. ಇಂತಹ ಶೂದ್ರನಿಗೆ ವೇದಾಧಿಕಾರವು ಇಲ್ಲೆಂ
ದು ಮಹಾನುಭಾವಿಗಳು ಹೇಳಿರುವರೇ ಹೊರತು, ಸದ್ಭಾವಿಯಾದ ಅತಿಶೂದ್ರ
ಕುಲದವನಿಗೆ ಅದರ ಅಧಿಕಾರವಿಲ್ಲೆಂಬ ಭಾವವಲ್ಲವು. ಈ ಅಧಿಕಾರವನ್ನು ಇನ್ನೊ
ಬ್ಬರು ಕೊಡಲಾರರು. ಅಥವಾ ಇದ್ದುದನು ಯಾರೂ ಕಸಕೊಳ್ಳಲಾರರು. ಅಂ
ತೇ ಬಸವಣ್ಣನು "ಶ್ವಪಚನಾದರೇನು ಲಿಂಗವಿದ್ದವನೇ ಕುಲಜ ಲಿಂಗವಿಲ್ಲದವ-
ರೆಲ್ಲರೂ ಭವಿಗಳೆಂ"ದು ಹೇಳಿರುವನು. ಇಂತಹ ಹೀನಭಾವಿಗಳನ್ನು ಯಾವ
ಕಟ್ಟಿನೊಳಗಿಟ್ಟರೂ, ಏನು ಆಗಲಾರದೆಂಬುದನ್ನು "ಕುಂಬಳಕಾಯಿಗೆ ಕಬ್ಬಿನ
ಕಟ್ಟು ಕೊಟ್ಟರೆ ಕೊಳಹುವದಲ್ಲದೆ, ಬಲುಹಾಗಬಲ್ಲದೇ;" ಎಂದು ಓಲುಕೊಟ್ಟು
ಹೇಳಿರುವನು. ಹೀನಭಾವಿಗಳಿಗೆ ಲಿಂಗವ ಧರಿಸಿ ಭಕ್ತರನು ಮಾಡಿದರೆ, ಸಂಕ
ರವಾಗುವದೆಂಬ ಮಾತು ಬಸವಣ್ಣನಿಗೆ ತಿಳಿದಿದ್ದಿಲ್ಲವೆಂದು ಯಾರೂ ಭಾವಿಸಲಿ
ಕ್ಕಾಗದು. ಹೀನಭಾವಿಯು ಕಾರ್ಯಪ್ರವೃತ್ತಿಯಿಂದ ಅದನ್ನು ಯಾವಾಗಲು
ಹೆಚ್ಚಿಸುತ್ತಿರುವನು ಏಕಂದರೆ ಆತ್ಮರು ತಾವು ಯಾವ ಭಾವದಿಂದ ತಮ್ಮ ಶರೀ
ರಗಳನ್ನು ಕುಣಿಸುತ್ತಿರುವರೋ, ಅದನ್ನು ಶರೀರಗಳಲ್ಲಿ ಭೇದಿಸಿಕೊಳ್ಳುತ್ತಿರುವರು.
[ನೈಯುಣ್ಣಿಸಿಕೊಳ್ಳುತ್ತಿರುವರು]. ಶರೀರದಲ್ಲಿ ಭೇದಿಸಿದ್ದು ಹೊಸಭಾವನೆಗೆ
ಕಾರಣವಾಗಿ, ಮೂಲಭಾವನೆಯಲ್ಲಿ ಕೂಡಿಕೊಳ್ಳುತ್ತಿರುವದು. ಕಾರಣ ಭಾವ
ದಲ್ಲಿ ಪ್ರತಿಕ್ಷಣಕ್ಕೆ ದೋಷಸಂಗ್ರಹವು ಹೆಚ್ಚುತ್ತಿರುವದು. ಈ ಬೆಳೆಯುವ ಕಾರ್ಯ
ವು ತನ್ನ ಪರಮಾವಧಿಯು ಮುಟ್ಟಿಗೆ ಹೋಗಿ, ಪೂರಾ ಅದರ ಫಲವನ್ನುಂಡು ಪ
ಶ್ಚಾತ್ತಾಪವನ್ನು ಹೊಂದುವವರೆಗೆ ತಡೆಯದು; ಅಲ್ಲಿಂದ ಭಾವದೋಷಗಳನ್ನು
ತೊಳಕೊಂಬುವ ಕಾರ್ಯವು ಆರಂಭವಾಗುವದು. ಇದೇ ಕುಳಕುಂಬಿಯು ಬಾವಿ

ಯು ಪೂರಾ ಪೆಟ್ಟುತಿಂದು ತೀರ ನಿರ್ವಿಣ್ಣರಾದ ಆತ್ಮರು ಮಹಾನುಭಾವಿಗಳ
ನ್ನು ನಂಬಿ, ಅವರ ಭಾವದಂತೆ ನಡೆಯುವ ಭೂಮಿಕೆಯುಳ್ಳವರಾಗುವುದರಿಂದ,
ಆಗ ಹಾಗೆ ನಡೆದರೇನೇ ಅವರ ಕ್ರಿಯಾಶುದ್ಧಿಗೆ ಕಾರಣವಲ್ಲದೆ, ಮತ್ತೂ ತಮ್ಮ
ಭಾವನೆಯಂತೆ ನಡೆದರೆ ಎಂದೂ ಕ್ರಿಯಾಶುದ್ಧಿಯಾಗಲಾರದು ಯಾವನಲ್ಲಿ ಮ
ಹಾನುಭಾವಿಗಳ ಭಾವದಲ್ಲಿ ಸಂಪೂರ್ಣವಾದ ನಂಬುಗೆಯನಿಟ್ಟು ಆಚರಿಸುವ
ಪಾತ್ರತೆಯು ಇರುವದೋ, ಅವನೇ ಧರ್ಮಕ್ಕೆ ಅಧಿಕಾರಿಯಾಗುವನು. ಏಕಂ
ದರೆ ಹೀನಭಾವದ ಫಲವನ್ನುಂಡು ಹದಗೊಂಡ ಆತ್ಮನು ತನ್ನಲ್ಲಿ ತನ್ನ ದುಷ್ಟಭಾ
ವಕ್ಕೆ ಎಷ್ಟೂ ಅನುವು ಕೊಡದ ಭೂಮಿಕೆಯುಳ್ಳವನಾಗಿರುವನು. ಕಾರಣ ಸ
ದ್ಭಾವಕ್ಕೆ ಇಂಬುಗೊಡುವ ಮನವು, ಆತ್ಮನಿಗೆ ತನ್ನ ಸಕಲ ದೇಣಿಗೆಗಳನ್ನು ಆ
ಸದ್ಭಾವಕ್ಕೇ ಉಪಯೋಗಿಸಿಕೊಳ್ಳುವ ಅಧಿಕಾರವನ್ನು ತಂದುಕೊಡುವದು. ಅಲ್ಲಿ
ಯವರೆಗೆ ಯಾರಪ್ಪಗೂ ಕೇಳುವದಿಲ್ಲ. ಇಂತಹವರನ್ನು ಯಾವಾಗಲು ಪ್ರತಿ
ಬಂಧದಲ್ಲಿಟ್ಟಹೊರತು ಲೋಕದಲ್ಲಿ ಧರ್ಮವನ್ನು ಕಾಯ್ದುಕೊಳ್ಳಲಿಕ್ಕಾಗದು.
ಇತ್ತ ಆತ್ಮರು ತಾವಾಗಿಯೇ ತಮ್ಮ ಚಿತ್ತವೃತ್ತಿಯನ್ನು ಬಂಧಿಸಿಕೊಳ್ಳುವವರಾದ
ಹೊರತು, ಅವರನ್ನು ಯಾವಾಗಲು ಕಾಯುವದು ಯಾರಪ್ಪನಿಂದಲೂ ಆಗದು.
ಪರಮಾತ್ಮನ ಮೇಲೆ ಓಲಿಸಿ ಬಿಟ್ಟರೆ ಅವನು ಚಿದ್ಧರ್ಮದಲ್ಲಿ ಅನುಗ್ರಹಿಸಿ ಮತ್ತಿ
ಷ್ಟು ಸಹಾಯಮಾಡಿ ಪಾಶವನ್ನು ಬಿಳಿಸುವವನೆ; ಹೀಗಾಗಿ ಲೋಕದೊಳಗಿನ
ಜನತೆಯೆಲ್ಲ ಧರ್ಮದಿಂದ ಪತಿತವಾಗಿಬಿಟ್ಟಿರುವದು.

"ಯನ್ಮನಸಾ ಮನುತೇ ತದ್ವಾಚಾ ವದತಿ" ಮನಸಿನಲ್ಲಿದ್ದುದನೇ ಬಾಯಿ
ಯು ಒಡನುಡಿಸುವದು. ಮನಸಿನಲ್ಲಿದ್ದುದನು ಬಾಯಿಯು ಒಡನುಡಿಯಬೇ
ಕಾದರೆ, ಶರೀರದಲ್ಲಿ ನಡೆದಿರುವ ಕಾರ್ಯವನ್ನು ಪರ್ಯಾಲೋಚಿಸದಲ್ಲಿ ತಾನೇ
ವ್ಯಕ್ತವಾಗುವದು. ಆತ್ಮನು ಹೃತ್ಕಮಲದಲ್ಲಿ ಕೆಳಮುಖನಾಗಿರುವದರಿಂದ ಅವ
ನ ಆಧಾರಚಕ್ರವು ತಲೆಯ ಮುಂಭಾಗದಲ್ಲಿ ಹಣೆಯಒಳಪ್ರದೇಶದಲ್ಲುಂಟು.
ಕಾಯದ ಆಧಾರವು ತ್ರಿಕಪ್ರದೇಶ [ಕುಂಡಿಯ ಚಿನ್ನಿ] ವಾಗಿರುವದು. ಆದುದ
ರಿಂದ ಕುಂಡಿಯ ಚಿನ್ನಿಗೂ, ಹಣೆಯ ಒಳಪ್ರದೇಶಕ್ಕೂ ಏಕನಾಡಿಯಂತೆ ಅತಿ ನಿ
ಕಟವಾದ ಸಂಬಂಧವುಂಟು. ಮನಸಿನಲ್ಲಿದ್ದದ್ದು ಹಣೆಯಲ್ಲಿ ಒಮ್ಮೆಲೇ ಮೂಡಿಬಿ
ಡುವದು. ಹಣೆಯಲ್ಲಿ ಮೂಡಿದ್ದು ಕೂಡಲೇ ತನ್ನ ಪ್ರತಿಬಿಂಬವನ್ನು ತ್ರಿಕಪ್ರದೇಶದ
ಮೇಲೆ ಕೆಡವುವದು. ಹಣೆಯಲ್ಲಿ ಆತ್ಮನ ಚಿದ್ಭೂಮಿಕೆಯುಂಟು ತ್ರಿಕದಲ್ಲಿ
ಕಾಯದ ಚಿತ್ತಕರಣವುಂಟು. ವಾತಾವರಣವು ನೆಲದಿಂದೆದ್ದ ಧೂಳಿಯಿಂದ
ಮುಸುಕಿ ಬಿಡುವಂತೆ, ಮನವೆಂಬ ವಾತಾವರಣವು ಆಗಾಗ್ಗೆ ತನ್ನ ವಿಕಾರಗಳೆಂಬ
ಗಾಳಿಯ ಹೊಡತಕ್ಕೆ, ಚಿತ್ತಕರಣವೆಂಬ ಭೂಮಿಕೆಯಿಂದ ಎದ್ದ ದೋಷಗಳೆಂಬ
ಧೂಳಿಯಿಂದ ಯಾವಾಗಲು ಮಲಿನವಾಗುತ್ತಿರುವದು. ಏಕೆಂದರೆ ಕಾಯವಿಡಿ
ದು ಆಚರಿಸುವ ಆತ್ಮರು, ಕಾಯದ ವ್ಯಾಪಾರದಿಂದ ಗಳಿಸಿದ ಭಾವದ ಫಲವನ್ನೆ

ಲ್ಲ, ಈ ಪ್ರದೇಶದಿಂದಲೇ ಹೊಂದುತ್ತಿರುವರು. ಈ ವ್ಯಕ್ತಿಯೇ ಆದಿಕಾಲದಿಂದ ಆತ್ಮರಿಗೆ ಅಂಗಗುಣವಾಗಿ ಬಿಟ್ಟದುದರಿಂದ, ಇದೇ ಸಹಜವಾಗಿರುವದು. ಆದ ರಿ ತಲೆತಾಗಿ ಹಣ್ಣಾದ ಆತ್ಮರು ತಮ್ಮ ಅನುಭವದಲ್ಲಿ ವಿವೇಕಿಗಳಾಗಿರುವದರಿಂದ, ತಮ್ಮಂಗದಲ್ಲಿ ಸಹಜವಾಗಿ ಚಿತ್ತದಿಂದ ಏಳುತ್ತಿರುವ ದೋಷಗಳು ತಮ್ಮ ಮನ ಕ್ಕೆ ಆಡರಿ ಮುಸುಕುವವರೆಗೆ, ತಮಗೆ ಏನೊಂದು ತಿಳಿಯದೆ ನಡೆಯುತ್ತಿರುವ ವ್ಯಾಪಾರಕ್ಕೆ [ಪರೆ, ಪಶ್ಯಂತಿ, ಮಧ್ಯಮ ಸ್ಥಿತಿಗಳಲ್ಲಿ ನಡೆದಿರುವ ವ್ಯಾಪಾರಕ್ಕೆ] ಅವಕಾಶವು ದೊರೆಯಬಾರದೆಂದು ಮನದಲ್ಲಿ ಮೂಡಿದ್ದು ಅಳುಕದಂತೆ ಎಚ್ಚರ ಪಡುವ ಚಿದ್ಭೂಮಿಕೆಯ ವ್ಯಾಪಾರವುಳ್ಳವರಾಗಿರುವರು. ಆ ಮೂಡಿದ್ದೇ ವಿಭೂತಿಯು; ಎಚ್ಚರಪಡೋಣವೇ ಮಂತ್ರ; ಇದು ವಿವೇಕಸೃಷ್ಟಿಯ ಕಾರ್ಯ ವಾದುದರಿಂದ, ಹಣೆಯಿಂದ ನಡಿಸುವ ವ್ಯಾಪಾರವಾಗಿರುವದು. ಕಾರಣ ಬಸ ವಣ್ಣನು ಬಾಹ್ಯದಲ್ಲಿ ಇದನ್ನೇ ವ್ಯಕ್ತಪಡಿಸಿ, ಸ್ಥೂಲಾಂಗದ ಕರಕ್ಕೆ ಇಷ್ಟವನ್ನು ಕೊ ಟ್ಟು ಹಣೆಗೆ ವಿಭೂತಿಯ ಮಹತ್ವವನ್ನು ಹೇಳಿರುವನು ಏಕೆಂದರೆ ದೇಹವೇ ತಾವಾದ ಆತ್ಮರಿಗೆ, ಅಂಗಭೂತವಾದ ರಕ್ತರೇತಸ್ಸುಗಳ ಅಭಿಮಾನವೇ ಸಹಜವಾದುದಾಗಿ ರುವದು. ಇದನ್ನು ಹರಕೊಂಬುವದೇ ಕಷ್ಟ; ಏಕೆಂದರೆ ಒಂದು ದೋಷವು ಪಶ್ಯಂತಿಗೆ ಬರುವದರೊಳಗಾಗಿ ಚಿದ್ಭೂಮಿಕೆಗೂ, ಚಿತ್ತಕರಣಕ್ಕೂ ಭೇದಿಸಿ ದುಗುಣಿತವಾಗಿ, ಪರೆಯಲ್ಲಿ ನಾಲ್ಕುಮಡಿಯಾಗಿ ಅಲ್ಲಿಂದ ದುಗುಣಿತವಾಗು ತ್ತಿರುವದರಿಂದ ಜ್ಞಾನಸೃಷ್ಟಿಯಲ್ಲಿಯೂ (ಚಿದ್ಭೂಮಿಕೆಯಲ್ಲಿ) ಕ್ರಿಯಾಸೃಷ್ಟಿಯಲ್ಲಿ ಯೂ (ತನುವಿನ ಚಿತ್ತಕರಣದಲ್ಲಿ) ಕೂಡಿ. ಒಮ್ಮೆಲೆ ಎಂಟುಮಡಿಯಾಗುವದು ದೇಹಾಭಿಮಾನಿಯಾದ ಆತ್ಮನ ಕ್ರಿಯಾಸೃಷ್ಟಿಯಲ್ಲಿ ಸಹಜವಾಗಿ ಚಿತ್ತಕರಣದಿಂದ ಏಳುತ್ತಿರುವ ಭಾವನೆಗಳು, ಆತ್ಮನ ಜ್ಞಾನಸೃಷ್ಟಿಯಲ್ಲಿ ತಾವಾಗಿಯೇ ಮೂಡುತ್ತಿ ರುವದನ್ನು ತಡೆದು, ಮನದಲ್ಲಿ ಹಿಡಿದಿದ್ದ ಆ ಸದ್ಭಾವವು ಅಳುಕುವದರೊಳಗಾಗಿ, ಜ್ಞಾನಸೃಷ್ಟಿಯ ಕಾರ್ಯವು ಮನಸಿನಲ್ಲಿ ಹಿಡಿದಿದ್ದ ಆ ಸದ್ಭಾವಕ್ಕೆ ಪರಿವರ್ತಿಸು ವ ಹಾಗೆ ಎಚ್ಚರಪಡಬೇಕಾಗುವದು. ಜ್ಞಾನಸೃಷ್ಟಿಯಲ್ಲಿ ನಡೆದ ಈ ಕದನದಲ್ಲಿ ಜಯವನ್ನು ಹೊಂದಿ ಕ್ರಿಯಾಸೃಷ್ಟಿಯೊಳಗಿನ ಸಹಜವಾದ ವ್ಯಾಪಾರವನ್ನೆಲ್ಲ ಮು ರಿಬಡಿಯಬೇಕಾಗುವದು. ಇಷ್ಟೆಲ್ಲಕಾರ್ಯವು ಒಂದು ಅರ್ಧ ನಿಮಿಷದಲ್ಲಿ ಆಗು ತ್ತಿರುವದರಿಂದ, ಆತ್ಮರು ಪ್ರತಿ ಅರ್ಧನಿಮಿಷವನ್ನು ಎಚ್ಚರದಪ್ಪಿ ನಡೆಯಲಾಗದು. ನಡೆದಲ್ಲಿ, ಪಶ್ಯಂತಿಗೆ ಬರುವದರೊಳಗಾಗಿ ಎಂಟುಮಡಿಯಾದ ಅಂಗದೋಷಕ್ಕೆ ಅನುವುದೊರೆದು, ಅಲ್ಲಿಂದ ದುಗುಣಿತವಾಗಿ ಕೂಡಲೆ ಮಧ್ಯಮಸ್ಥಿತಿಗೆ ಬಂದು ಹದಿನಾರುಮಡಿಯಾಗುವದು. ಎಂಟುಮಡಿಯನ್ನು ಜೆಯಿಸಲಾರದ ಆತ್ಮನು, ಹದಿ ನಾರು ಮಡಿಯನ್ನು ಗೆಲ್ಲಲು ಅಸಮರ್ಥನಾಗಿ, ಒಂದುನಿಮಿಷದಲ್ಲಿ ಆ ದೋಷಗ ಳ ವಶವರ್ತಿಯಾಗಿ ಬಿಡುವನು. ಕೂಡಲೆ ಅಲ್ಲಿಂದ ದುಗುಣಿತವಾಗಿ ಮೂವತ್ತೆ ರಡು ಮಡಿಯಿಂದ ಬಿಗಿಯಲ್ಪಟ್ಟು, ಬಲಿಯಲ್ಲಿ ಸಿಕ್ಕ ನೊಣವನ್ನು ಜೇಡವು

ಮತ್ತೆ ಎಳೆಯನ್ನು ಸುತ್ತಿ ಸುತ್ತಿ ಎಷ್ಟು ಉಲುಕ್ಯಾಡಲಿಕ್ಕೆ ಬಾರದಂತೆ ಮಾಡಿದ ರೀತಿಯಲ್ಲಿ ಹಿಡಿದದ್ದನ್ನು ಮರೆತು ತತ್ಪರವಶವಾಗಿ ಬಿಡುವನು. ಪ್ರತಿ ಅರ್ಧ ನಿಮಿಷವನ್ನು ಎಚ್ಚರಪಟ್ಟವನು ಜ್ಞಾನಸೃಷ್ಟಿಯುಬಲದಿಂದ ಕ್ರಿಯಾಸೃಷ್ಟಿಯನ್ನು ತನ್ನ ವಶಮಾಡಿಕೊಂಡು ವೀರರಲ್ಲಿ ವೀರನಾಗಿ ಮನದಲ್ಲಿ ಇಷ್ಟದ ಮೂವತ್ತೆರಡು ಮಣಿ(ಮಣಿ) ಮಾಲಿಕೆಯನ್ನು, ತನ್ನ ಮನವೆಂಬ ಕೊರಳಲ್ಲಿ ಪ್ರತಿಯೊಂದು ನಿಮಿಷದಲ್ಲಿ ಕೆಳಗೆ ತೋರಿಸಿದ ಭೂಮಿತಿ ಶ್ರೇಢಿಯಂತೆ ಹೊಂದುತ್ತಿರುವನು.

(೧, ೧×೩೨ $(೩೨)^{೧}$; ೧×೩೨×೩೨×$(೩೨)^{೨}$; $೩೨^{೩}$, $೩೨^{೪}$, ಇತ್ಯಾದಿ

ಹೀಗಾಗಿ ಆತ್ಮನ ಅವಿಕಾಲದಿಂದ ಉಂಟಾದ ಜಡತ್ವವನ್ನು ಒಂದೇ ಅರುಹಿನ ಜನ್ಮದಲ್ಲಿ ಹಿಂಗಿಸಿಕೊಳ್ಳಲು ಸಮರ್ಥನಾಗುವನು. ಅಂತು "ವೀರಾಣಾಂ ಏಕೇನ ಜನ್ಮನಾ ಮುಕ್ತಿಃ" ಎಂಬ ಅನುಭವೋಕ್ತಿಯು ಉಂಟಾಗಿರುವದು. ಸದ್ವ್ಯಾಪಾರದಲ್ಲಿ ಪ್ರತಿ ಅರ್ಧನಿಮಿಷ ಎಚ್ಚರಪಟ್ಟ ಆತ್ಮನು ಸದಾ ತನ್ನ ಮನದಲ್ಲಿ ನಿಮಿಷನಿಮಿಷಕ್ಕೆ ಹೊಂದುತ್ತಿರುವ ಸ್ಥಿತಿಯನ್ನು ತೋರಿಸುವದಕ್ಕಾಗಿಯೇ, ಲೋಮವಿಲೋಮವಾಗಿ ಮೂವತ್ತೆರಡು ಅಕ್ಷಗಳ ಮಾಲಿಕೆಯನ್ನು ಕೊರಳಲ್ಲಿ ವೀರರು ಕುರುಹುರೂಪದಿಂದ ಧರಿಸುತ್ತಿರುವರು. ದೇಹವೇ ತಾವಾಗಿದ್ದ ಆತ್ಮರು ರಕ್ತರೇತಸ್ಸುಗಳ ಹಂಗಿನಲ್ಲಿ ಬೆಳೆದವರಾದುದರಿಂದ, ಮೇಲೆ ತೋರಿಸಿದ ಮಲಾಪಹಾರದ ಸ್ಥಿತಿಗೆ ವಿರುದ್ಧವಾಗಿ ಭರದಿಂದ ದೋಷಸಂಗ್ರಹವನ್ನು ಹೊಂದುತ್ತಿರುವರು. ಕಾರಣ ಅವರಿಗೆ ಏನು ಹೇಳಿದರೂ ತಲೆಯಲ್ಲಿ ಸೇರದು. ಏಕಂದರೆ ಹಣೆಯಲ್ಲಿ ಅದಕ್ಕೆ ಅವಕಾಶವಿದ್ದರಷ್ಟೇ ತಲೆಯಲ್ಲಿ ಸೇರುವದು; ಹೇಳಿದ ಸಂಗತಿಗೆ ಮೊದಲು ಮನವೇ ಇಂಬುಗೊಡುವದಿಲ್ಲ. ಅಂದಬಳಿಕ ಅಂತರಂಗದಲ್ಲಿ ಯಾವ ಸದ್ವ್ಯಾಪರಗಳಿಗೂ ಎಷ್ಟು ಅನುವಿಲ್ಲದೆ ಹೋಗುವದು. ಹೀಗಾಗಿ ಡಬ್ಬುಕೋಡದಮೇಲೆ ನೀರೆರಚಿದಂತೆ ಆಗುತ್ತಿರುವದರಿಂದ, ಅನಧಿಕಾರಿಗೆ ನಿಜಬೋಧೆಯನು ಮಾಡಬಾರದೆಂಬ ಅನುಭವೋಕ್ತಿಯುಂಟಾಗಿರುವದು. ಅದೇ ತಲೆತಾಗಿದ ಆತ್ಮನು ಮಹಾನುಭಾವಿಗಳ ದಿವ್ಯಾನುಭಾವಕ್ಕೆ ತನ್ನ ಮನದಲ್ಲಿ ಇಂಬುಗೊಡುವ ಹದವುಳ್ಳವನಾದುದರಿಂದ ಅವನ ತನುವಿನ ವ್ಯಾಪಾರಕ್ಕೂ ಅನುವು ದೊರೆಯುವದು. ಈ ಅಂತರಂಗದ ಸದ್ವ್ಯಾಪಾರವು ಕೆಡದಂತೆ ಎಲ್ಲಿಯವರೆಗೆ ಕಾಯ್ದುಕೊಳ್ಳುವನೋ, ಅಲ್ಲಿಯವರೆಗೆ ಮಂತ್ರಜಾಪಿಯಾಗಿರುವನು. ಈ ಮಂತ್ರಾನುಸಂಧಾನವು ತಪ್ಪಿದೊಡನೆಯೇ ಪುನಃ ಮೊದಲಿನ ಸ್ಥಿತಿಯು. ಬೇಸಿಗೆಯಲ್ಲಿ ತಿಳಿಯಾಗಿ ಹರಿಯುವ ಪ್ರವಾಹಗಳು ಮಳೆಗಾಲದ ಮೇರೆದಪ್ಪಿ ಒತ್ತಿಬರುವ ರಾಡಿನೀರಿನಿಂದ ಕೂಡಲೇ ಮಲಿನ ವಾಗುವಂತೆ, ಒಂದುನಿಮಿಷದಲ್ಲಿ ಎಲ್ಲವೂ ರಾಡಿ ಆದುದರಿಂದ ಈ ಮಂತ್ರಾನುಸಂಧಾನವು ಎಷ್ಟು ಕೆಡದ ಹಾಗೆ ಮಹಾನುಭಾವಿಗಳ ಸಂಗದೊಳಗಿದ್ದು ಆಚರಿಸಬೇಕಾಗುವದು. ಏಕಂದರೆ ಅಲ್ಲಿಯ ಪರಿಸ್ಥಿತಿಯಲ್ಲಿ ಒಳಗಿನ ಅನುಸಂಧಾನವು ಕೆಟ್ಟರೂ ಹೊರ

ಸರಿಗೊಳಿಸಿಕೊಳ್ಳುವ ಸತ್ತ್ವವು ಸೃಷ್ಟಿಯ ಧರ್ಮದಲ್ಲಿ ತಾನೇ ಉಂಟಾಗಿರುವದು. ಇದೇ, ಸೃಷ್ಟಿಯಲ್ಲಿ ಸಹಜವಾಗಿ ಪಡಕೊಂಡು ಆಚರಿಸುವದಾದ ನಿಜಧರ್ಮವು. ಅಂತೇ ಬಸವಣ್ಣನು "ಕೂಡಲಸಂಗಮನರಿವರೆ ಶರಣರ ಸಂಗವೇ ಮೊದಲು;" ಎಂದು ಹಾಡಿರುವನು.

ಈ ರೀತಿ ಮಂತ್ರಜಾಪಿಯಾಗಿ ಪರಿವರ್ತಿಸುವವನು, ಮಹಾನುಭಾವಿಗಳು ಯಾವಾಗಲು ತಮ್ಮ ನಡೆಯಿಂದ ಹೊಂದುತ್ತಿರುವ ಪವಿತ್ರತೆಯನ್ನೇ (ತೀರ್ಥ ಪ್ರಸಾದವನ್ನೇ) ಹೊಂದುತ್ತಿರುವದರಿಂದ ಈ ಪವಿತ್ರತೆಯು ಅವನ ಮಲಿನತೆಯನ್ನು ತೊಳೆಯಲುಪಕ್ರಮಿಸಿ ಮಲಾಪಹಾರಿಯು ಅವನ ಅಂತರಂಗದಲ್ಲಿ ಹರಿಯಹತ್ತುವದು. ದೋಷವು ತೊಳೆತೊಳೆದ ಮೇರೆಗೆ ಪ್ರತಿಕ್ಷಣದಲ್ಲಿ ಶುದ್ಧಿಯು ಉಂಟಾಗುತ್ತಿರುವದು. ಆ ಮೇರೆಗೆ ಲಿಂಗವು ಸ್ಪಷ್ಟ ತೋರುತ್ತಹೋಗುವದು. ಅಂದರೆ ಲಿಂಗವನ್ನು ನಿರೀಕ್ಷಿಸುವ ದೃಷ್ಟಿಯು ಹೆಚ್ಚೆಚ್ಚು ನಿರ್ಮಲವಾಗುತ್ತ ಹೋಗುವದು. ಕಟ್ಟಕಡೆಗೆ ಕೃಷ್ಣೆಗೆಹೋಗಿ ಕೂಡುವಾಗ್ಗೆ ದೋಷದಿಂದ ಪೂರಾ ಬಿಡುಗಡೆ ಹೊಂದಿದುದಾಗಿ, ಶುದ್ಧಾಂಗಸಿದ್ಧನಾದ ಆತ್ಮನು ನಿಜಲಿಂಗದೊಡನೆ ಬೆರೆತುಕೊಳ್ಳುವನು. ಈ ಮಲಾಪಹಾರಿಯು ಶುದ್ಧಿಯ ಕ್ರಮದಲ್ಲಿ, ಅದರ ಆರಂಭದಿಂದ ಕಡೆಯುವರೆಗೆ ಅಂದರೆ ಉಗಮಸ್ಥಾನದಿಂದ ಸಂಗಮದ ವರೆಗೆ ಉಂಟಾಗುತ್ತಿರುವ ಅಂಗಸ್ಥಿತಿಯಲ್ಲಿಯೂ, ಶುದ್ಧಿಯು ಉಂಟಾಗುತ್ತ ಹೋದಮೇರೆಗೆ ಲಿಂಗವು ಅಂಗನಿಗೆ ತೋರುತ್ತಿರುವ ಸ್ಥಿತಿಯಲ್ಲಿಯೂ ಪ್ರಾಮುಖ್ಯವಾಗಿ ಆರು ಭಾಗಗಳನ್ನು ಮಾಡಿ ಸತ್ಯಶರಣರು ಷಟ್‌ಸ್ಥಳಗಳನ್ನು ಏರ್ಪಡಿಸಿರುವರು.

ಶರೀರದಲ್ಲಿ ಅದರ ಆದಿಕಾಲದಿಂದ ಅಂತ್ಯದ ವರೆಗೆ ಒಂದೇಸವನೇ ನಡೆದಿರುವ ವ್ಯಾಪಾರವು, ಅರುವಿಡಿದಾಚರಿಸಿದಲ್ಲಿ ಮಲಾಪಹಾರಿಯೂ, ಪರಿವೆಗೆಟ್ಟಾಚರಿಸುವಲ್ಲಿ ಮಲವರ್ಧಕವೂ ಆಗಿರುವದು. ಕಾರಣ ದೇಹವೇ ತಾವೆಂದು ಸಹಜವಾಗಿ ಪರಿವೆಗೆಟ್ಟಾಚರಿಸುವ ಆತ್ಮರಿಗೆ ಅದರ ಮಲಾಪಹಾರಕ್ಕೆ ಕಾರಣವಾದ ಸಂಗತಿಗಳೇ ಮಲವರ್ಧನಕ್ಕೆ ಸಹಜ ಕಾರಣವಾಗಿರುವವು. ಆದುದರಿಂದ ಇವುಗಳನ್ನು ಆತ್ಮರ ಸಹಜವಾದ ಜಡಾವಸ್ಥೆಯನ್ನು ನಿರೀಕ್ಷಿಸಿ ವಿಶುದ್ಧವಾದ ಕಾರಗಳಲ್ಲಿ ವಿವರಿಸಬೇಕಾಯಿತು. ಬಸವಣ್ಣನು ಈ ಸ್ವಾಭಾವಿಕಕಾರಣಗಳಲ್ಲಿಯೇ ಲೋಕವನ್ನು ಉದ್ಧರಿಸಲು ಯತ್ನಿಸಿರುವನು ಇದೇ ಸಹಜವಾದಯಜ್ಞವು. ಕೆಳಗೆ ಕೊಟ್ಟಬಸವಣ್ಣನ ವಚನದಿಂದ ಈ ಮಾತಿನ ಸತ್ಯತೆಯು ಗೊತ್ತಾಗುವದು

"ಯಸ್ಯರ್ಥೇತಸ್ಯ ಭವತಿ" ಎಂದು ಕಟ್ಟಾಚಾರದಲ್ಲಿದ್ದು ನಾನು ಅನುಸರಿಸಿಕೊಂಡು ನಡೆವನ್ನಕ್ಕರ ಕರ್ಮಕಾಂಡಿಯಲ್ಲ. ಉತ್ಪತ್ತಿಸ್ಥಿತಿಭೋಗಭುಕ್ತಿಕಾಯವುಳ್ಳನ್ನಕ್ಕರ, ಭಕ್ತಿಕಾಂಡಿಯಲ್ಲ. ಪರವು ಸಾಧ್ಯವಾಯಿತೆಂದು ಕ್ರಿಯೆಯಲ್ಲ

ವ ಮೀರಿ ನಡೆವೆನು. ಪರತತ್ತ್ವವನರಿದೆನೆಂಬನಕ್ಕರ ಜ್ಞಾನಕಾಂಡಿಯಿಲ್ಲ. ಇಂ ಇಂತೀ ತ್ರಿವಿಧದಲ್ಲಿ ಪಂಚಸನ್ನಾದರಿ ಈಸುವಿಧದೊಳಗೆ ಅಂಗವಿಲ್ಲ. ಮೇಲೆ ಸತ್ಪುರುಷರ ಸಂಗವಿಲ್ಲ. ಯುಕ್ತಿಯಿಲ್ಲ. ಎನಗೆ ಭಕ್ತಿ ಎಂತಹುವಯ್ಯ; ಬಲ್ಲವರ ಬೆಸಗೊಂಡರೆ ಎನ್ನ ಬಿಮ್ಮು ಕೆಟ್ಟಿತ್ತಿಹುದೆಂದು ಮೆಲ್ಲನೆ ಪ್ರಸಂಗದಿಂದ ತಿಳಿದುನೋಡುವ

" ಪರಾಂಚಿ ಖಾನಿ ವ್ಯತೃಣತ್ ಸ್ವಯಂಭೂಃ ತಸ್ಮಾತ್ ಪರಾಙ್ ಪಶ್ಯತಿ ನಾಂತರಾತ್ಮನ್ " ಆತ್ಮರಿಗೆ ದಯಪಾಲಿಸಿದ ಇಂದ್ರಿಯಗಳು ಸ್ವಾಭಾವಿಕವಾಗಿ ಹೊರಮುಖವಾಗಿ ರಚಿಸಲ್ಪಟ್ಟಿರುವವು. ಆದುದರಿಂದ ಅವರು ತಮ್ಮ ಸರ್ವಸುಖದ ಸಾಧನಗಳನ್ನೆಲ್ಲ ಹೊರಗಿನ ಸೃಷ್ಟಿಯಲ್ಲಿಯೇ ಕಂಡುಕೊಳ್ಳುವ ಸಹಜಸ್ವಭಾವದವರಾಗಿರುವರು. ಮತ್ತು ಈ ಇಂದ್ರಿಯಗಳು ವಿಷಯೋಪಭೋಗಕ್ಕೆ ಕಾರಣವಾದುದರಿಂದಲು, ತೋರಿಕೆಯು ಪಂಚವಿಷಯಗಳನ್ನೆಲ್ಲ ಒಳಕೊಂಡು ಆತ್ಮರು ತಮ್ಮ ಸುಖಸಾಧನಗಳೆಲ್ಲ ತಮ್ಮಿಂದ ಹೊರತಾಗಿರುವವೆಂದು ಭಾವಿಸಲು, ಮೇಲಿನ ಸಹಜಸ್ವಭಾವವು ಮತ್ತಿಷ್ಟು ಕಾರಣವಾಗಿರುವದು. ಆದುದರಿಂದ ಅವರ ಅಂತಃಕರಣಗಳೆಲ್ಲ ಬಾಹ್ಯವಸ್ತುಗಳಲ್ಲಿಯೇ ತೊಡಕಿಕೊಂಡಿರುವವು. ಕಾರಣ ಅವುಗಳ ಹರಿದಾಟವು ಹೆಚ್ಚಾಗಿ, ಆತ್ಮರ ಶಾಂತಿವೃತ್ತಿಯು ನಷ್ಟವಾಗಿ ಬಿಟ್ಟಿರುವದು. ಆತ್ಮರು ತಮ್ಮ ದುಷ್ಕೃತಿಗಳ ಫಲವನ್ನು ಉಂಡು ನಿರ್ವಿಣ್ಣರಾಗಿ, ಮಹಾನುಭಾವಿಗಳ ಅನುಭವದಲ್ಲಿ ನಂಬುಗೆಯನ್ನು ಇಡುವ ಪಾತ್ರತೆಯನ್ನು ಹೊಂದಿದಾಗ್ಯೂ. ಇಂದ್ರಿಯಗಳ ಬೇಟದ ಮೂಲಕ, ಅಂತಃಕರಣಗಳು ವಿಷಯಗಳಿಗೆ ಎಳಿಸಿ, ಹಣೆಯಲ್ಲಿ ಮೂಡಿದ ವಿಭೂತಿಯನ್ನು ಅಳುಕಿಸಿ ಕ್ಷಣಕ್ಷಣಕ್ಕೆ ಅರುವಿನ ವ್ಯಾಪಾರಕ್ಕೆ ಕುಂದು ತಂದು ಅರುವುಗೆಡಿಸಲು ಎರಡನೆಯ ಕಾರಣವಾಗಿರುವದು- ಈ ಅಂತರಿಂದ್ರಿಯಗಳೂ ಬಾಹ್ಯೇಂದ್ರಿಯಗಳೂ ಒಂದಕ್ಕೊಂದು ಕಾರಣವಾಗಿ ಪಂಚವಿಷಯಗಳನ್ನು ವಿಸ್ತರಿಸಿ ಆತ್ಮನನ್ನು ನಾನಾಪರಿಯಾಗಿ ಬಂಧಿಸಿ ಬಿಟ್ಟಿರುವದರಿಂದ, ಆತ್ಮರಿಗೆ ಪ್ರಪಂಚವು ದಾಟಲಸಾಧ್ಯವಾದ ಮಹಾಸಾಗರವಾಗಿ ಬಿಟ್ಟಿರುವದು ಪಂಚವಿಷಯಗಳಿಂದಾದ ಈ ಪ್ರಪಂಚವು ಎಲ್ಲಿಹೋದರೂ ಬಿಡದೆಂಬದನ್ನು ಅರಿಯದೆ, ಎಷ್ಟೋ ಮರುಳಮಾನವರು ಊರ ಬಿಟ್ಟು ಅಡವೀ ಸೇರಿ ಕಂದಮೂಲಾದಿಗಳ ಮೇಲೆ ಉಪಜೀವಿಸುವರು. ಇದು ಪ್ರಪಂಚದಿಂದ ಬಿಡುಗಡೆ ಹೊಂದುವ ಉಪಾಯವಲ್ಲ; ಏಕಂದರೆ ಪ್ರಪಂಚಕ್ಕೆ ಕಾರಣವಾದ ಇಂದ್ರಿಯಗಳು ಎಲ್ಲಿಹೋದರೂ ಇದ್ದೇ ಇರುವವು ಪ್ರಪಂಚವನ್ನು ಬಿಟ್ಟ ಲಕ್ಷಣವು ಕೆಸರಲ್ಲಿದ್ದು ಕೆಸರುಮೆತ್ತಿಸಿಕೊಳ್ಳದ ಕುಂಬಾರದ ಹುಳದಂತಿರುವುದು. ವಿರಾಗವು, ಅಂತಃಕರಣಗಳನ್ನೂ ಇಂದ್ರಿಯಗಳನ್ನೂ ಆಳುವದಾದ ಮನವನ್ನು ಒಂದೇ ಕಡೆಗೆ ಬಿಗಿದು, ವಿಷಯಗಳಲ್ಲಿರುವದು. ರೀತಿಗೆಟ್ಟ ವಿಷಯಲಾಲಸೆಯೇ ಇಷ್ಟೊಂದು ವಿಕಾರವರ್ಧನಕ್ಕೆ ಕಾರಣವಾಗಿರುವದು. ತಲೆತಾಗಿ ಮಹಾನುಭಾ

ನಿಗಳ ಅನುಭವದಲ್ಲಿ ನಂಬುಗೆಯನಿಟ್ಟು ವರ್ತಿಸುವ ಪಾತ್ರತೆಯನ್ನು ಹೊಂದಿದ ಆತ್ಮರು, ತಾವು ಹದಗೊಂಡ ಸಮಯದಲ್ಲಿಯೇ, ಮನವನ್ನು ಆ ಪವಿತ್ರವಾದ ಅನುಭವದಲ್ಲಿ ಬಿಗಿದು, ಬಾಹ್ಯವಸ್ತುಗಳಲ್ಲಿ ತೊಡಕಿಕೊಂಡ ಅಂತಃಕರಣಗಳನ್ನು ತನ್ನ ಯೋಗ್ಯತಾನುಸಾರವಾಗಿ ಬಿಡಿಸಿಕೊಳ್ಳುತ್ತ ಹೊರಮುಖವಾದ ಇಂದ್ರಿಯ ಗಳನ್ನು ಒಳಮುಖವಮಾಡಿಕೊಳ್ಳುವ ಸಾಧನದಲ್ಲಿರತಕ್ಕದ್ದು. ಇದೇ ಪ್ರಪಂಚವ ನ್ನು ಗೆಲ್ಲುವ ಮೂಲಮಂತ್ರವಾಗಿರುವದು.

"ಕುಕ್ಷೌ ತಿಷ್ಠತಿ ಯಸ್ಯಾನ್ನಂ ತಸ್ಯ ಬುದ್ಧಿಃ ಪ್ರವರ್ತತೇ" ಈ ಶ್ರುತಿಯು ಸ್ಪರ್ಶದೋಷವನ್ನೆ ವ್ಯಕ್ತಪಡಿಸುತ್ತದೆ. ಲೋಕವು, ಸ್ಪರ್ಶದೋಷವು ಸೋಂಕದಂ ತೆ ಎಷ್ಟುದಕ್ಷತೆಯಿಂದ ನಡಕೊಂಡರೂ, ಈ ಅವಧಿಯಲ್ಲಿ ಎಲ್ಲರ ರಕ್ತವೂ ಒಂ ದೇ ಒರೆಗೆ ಬಂದು ಹತ್ತಿರುವದು. ಇದಕ್ಕಾಗಿಯೇ ಇಲ್ಲದ ಸಂಶಯಸಂಕಲ್ಪಗ ಳನ್ನು ತಂದುಕೊಂಡು, ಸೃಷ್ಟಿಯ ಧರ್ಮಕ್ಕೆ ವಿರೋಧವಾದ ಈ ಸಂಗತಿಯಲ್ಲಿ ನಿ ರರ್ಥಕವಾಗಿ ಬಡಿದಾಡಿ, ಕಡೆಗೆ ಸಂಕರವಸಗಿ ರಾಡಿಗಲಿಸಿಗೊಂಡಿರುವದು. ಲಿಂಗವು ತೋರಿಕೆಯನ್ನೆಲ್ಲ ತನ್ನಲ್ಲಿ ಒಳಕೊಂಡು, ಒಳಗೂ, ಹೊರಗೂ, ವ್ಯಾಪಿ ಮುಳ್ಳುವಮೂನೆಗಿಂಬಿಲ್ಲದಂತೆ ತುಂಬಾತುಂಬಿ ತುಳುಕುತ್ತಿದ್ದಾಗ್ಗೂ, ತನ್ನಲ್ಲಿ ಏ ನೊಂದು ದೋಷವಿಲ್ಲದೆ ನಿತ್ಯನಿರ್ಮಲವಾಗಿರುವದು. ಆ ಲಿಂಗಸಮರಸಯೋ ಗದಿಂದಲ್ಲದೆ, ಸ್ಪರ್ಶದೋಷವನ್ನು ಹಿಂಗಿಸಿಕೊಳ್ಳಲು ಬೇರೆ ಯಾವ ಉಪಾಯವೂ ಇಲ್ಲ. ಯಾರು ಲಿಂಗಸಮರಸದ ಅರುಹಿನ ಯೋಗವಿಲ್ಲದೆ ಪರಿವೆಗೆಟ್ಟು ಉಣ್ಣು ವರೋ, ಅವರು ತಮ್ಮ ಅಂಗದ ದೋಷಗಳನ್ನು ಅಂದರೆ ತಮ್ಮ ಮಲವನ್ನು ತಾವೇ ತಿನ್ನುವರು. ಏಕಂದರೆ ಮಾನವಸೃಷ್ಟಿಯು ಬುಡಮೇಲಾಗಿ ಬೆಳೆದ ಒಂ ವಿಚಿತ್ರವಾದ ವೃಕ್ಷವಾಗಿದ್ದು ಅದು ಕಣ್ಣಿಗೆಕಾಣದಂತಹ ಅತಿ ಸೂಕ್ಷ್ಮವಾದ ತನ್ನ ಗುಣಸ್ವಭಾವಾದಿಗಳ ಫಲಗಳನ್ನು, ಕೈಕಾಲು ಬೆರಳುಗಳ ತುದಿಗಳಿಂ ದ ಯಾವಾಗಲು ಸುರಿಸುತ್ತಿರುವದು. ಅಲ್ಲದೆ ಅನ್ನವು ತನ್ನ ಎಡೆಗೆ ಸಿದ್ಧವಾಗಿ ಬರಬೇಕಾದರೆ, ಒಬ್ಬಿಬ್ಬರ ಸ್ಪರ್ಶ ದೋಷದಿಂದ ಕೂಡಿದ್ದಲ್ಲ; ಅನಂತವ್ಯಕ್ತಿಗಳ ಸ್ಪರ್ಶದೋಷದಿಂದ ಕೂಡಿದ್ದ; ಅದರ ಪೂರ್ವಾಶ್ರಯವನ್ನಳಿದು, ತನ್ನದೋಷವೂ ಸಹ ಬೆರೆಯದ ಅನುಸಂಧಾನದಲ್ಲಿದ್ದ ಹೊರತು, ಸ್ಪರ್ಶದೋಷವನ್ನು ಹಿಂಗಿಸಿ ಕೊಂಡಂತಾಗಲಿಲ್ಲ; ಬರೇ ಮುಟ್ಟಬೇಡ, ಮುಟ್ಟಬೇಡ; ಅಂತ ಹಾಡುವದು, ಮೇಲಿನ ಶ್ರುತಿಯ ವಾಕ್ಯವನ್ನು ಎಷ್ಟೂ ಪರಿಪಾಲಿಸದ, ಕೇವಲ ನಿರಂತಃಕರಣದ ವೈರ ವ್ಯಾಪಾರ ವಾಗಿರುವದು. (ಇಂತಹವರು ಊರೊಳಗಿರದೆ, ಊರು ಬಿಟ್ಟು ಎಲ್ಲಾದರೂ ಒಂದು ದೂರ ಪ್ರದೇಶದಲ್ಲಿದ್ದರೂ ಅಲ್ಲಿ ಇರುವವರಿಂದ ಈ ದೋಷವು ತಪ್ಪದೆ ತಟ್ಟುವದು ಅದರಿಂದ "ಮುಟ್ಟಬೇಡ" "ಮುಟ್ಟಬೇಡ" ಅಂತ ಸುಮ್ಮ ಸುಮ್ಮನೆ ಜನರ ಕೂಡ ವೈರೆಯನ್ನು ಕಟ್ಟಿಕೊಳ್ಳುವದುಮಾತ್ರ ತಪ್ಪೀತು.) ಮೇ

ಲಾಗಿ ಪ್ರಾಣಿಗಳಿಗೆ ಉಣ್ಣಲಿಕ್ಕೆ ಇದೊಂದೇ ಮುಖವಲ್ಲ; ಪಂಚವಿಷಯುಗಳನ್ನು ಉಣ್ಣಲು ಪಂಚಮುಖಗಳು ಬೇರೆ ಬೇರೆ ಇರುವವು. ಕಿವಿಯಿಂದ ಸಪ್ಪಳದ ಊಟವೂ, ಚರ್ಮದಿಂದ ಮುಟ್ಟುವಿಕೆಯ ಊಟವೂ, ನಾಲಿಗೆಯಿಂದ ರುಚಿಯ ಊಟವೂ, ಮೂಗಿನಿಂದ ವಾಸನೆಯ ಊಟವೂ, ಆಗುತ್ತಿರುವವು. ಕಣ್ಣು; ಕಿವಿ, ಮೂಗು, ನಾಲಿಗೆ ಇವು ಮೋರೆಯಲ್ಲಿ ನಿಯಮಿತಸ್ಥಳದಲ್ಲಿದ್ದುಕೊಂಡು, ಚರ್ಮೇಂದ್ರಿಯವು ಮೈತುಂಬಾ ವ್ಯಾಪಿಸಿರುವದು. ಅಂತೇ ಒಂದು ಚಿಕ್ಕಾಡು ಕಡಿದರೂ ಕೂಡ ಗೊತ್ತಾಗುವದು. ಕಣ್ಣಿನ ಊಟವು ಕಣ್ಣುತೆರೆದು ಕಣ್ಣುಮುಚ್ಚುವ ವರೆಗೆ ನಡೆದೇ ಇರುವದು. ಕಿವಿಯ ಹಾಗು ಚರ್ಮಗಳ ಊಟವು ಗಾಢನಿದ್ರೆಯಲ್ಲಿದ್ದರೂ ಕೂಡ, ಮಂದವಾಗಿ ನಡೆದಿರುವದು. ವಾಸನೆಯ ಊಟವು ಕೇವಲ ಮುಟ್ಟುವಿಕೆಯಿಂದಲೇ ಉಂಟಾಗುವದು ಮಾನವನು ತನ್ನ ದೃಷ್ಟಿಗೆ ಶಕ್ಯವಾಗಿ ತೋರಿದ ಘನ ಮತ್ತು ಪ್ರವಾಹಿ ಪದಾರ್ಥಗಳ ಸ್ಪರ್ಶದೋಷದ ನಿವಾರಣದ ವಿಷಯವಾಗಿ ಹೊಳೆದಷ್ಟರ ಮಟ್ಟಿಗೆ ವಿಚಾರಿಸಿ, ಅಕ್ಷರಶಃ ಆ ವಿಚಾರಕ್ಕನುಸರಿಸಿ ಆಚರಿಸಿದರೂ, ಲೋಕವು ಸ್ಪರ್ಶ ದೋಷವನ್ನು ಹಿಂಗಿಸಿಕೊಳ್ಳುವ ಗುಟ್ಟನ್ನೇ ತಿಳಿಯದೆ ಹೋಯಿತು. ಪದಾರ್ಥಗಳೊಳಗಿನ ದೋಷವು ಅಗ್ನಿಯ ಮುಖದಿಂದಲೂ, ವಾತಾವರಣದ ದೋಷವು ಗಾಳಿಯಿಂದಲೂ ಶುದ್ಧವಾಗುವದೆಂದು, ತಿಳದದ್ದನ್ನು ಆರೋಗ್ಯದೃಷ್ಟಿಯಿಂದ ಒಪ್ಪಿಕೊಳ್ಳಬಹುದು- ಈಗ ಈ ವಿಷಯವಾಗಿ ವಿವರಿಸುವದು ಇಲ್ಲದಿರುವದರಿಂದಲೂ ಸಧ್ಯಾ ಲೋಕದ ಪ್ರಯೋಗಗಳಲ್ಲಿ ಈ ಸಿದ್ಧಾಂತಗಳಿಂದ ಪ್ರಯೋಜನವಾಗುತ್ತಿರುವದು. ಎಲ್ಲರ ಅನುಭವದಲ್ಲಿರುವದರಿಂದಲೂ, ಪ್ರಕಟವಾದ ಲಿಂಗವು ಲೋಕವನ್ನೇ ಭೂಕೈಲಾಸವನ್ನಾಗ ಮಾಡಲು, ಕೈಗೆ ಕಂಕಣವನ್ನೂ ನಡುವಿಗೆ ನಡಕಟ್ಟನ್ನೂ ಕಟ್ಟಿರುವದರಿಂದಲೂ, ಗುರುರಾಜ್ಯದಲ್ಲಿ ಈ ಬಗ್ಗೆ ವಿಚಾರವನ್ನು ಬೇರೆಯಾಗಿ ಮಾತುವ ಕಾರಣವು ಉಳಿಯುವದಿಲ್ಲವಾದುದರಿಂದಲೂ, ಲೋಕಕ್ಕೆ ಸರಿಗಂಡು ಬಳಿಕೆಯಲ್ಲಿರುವ ಈ ರೀತಿಯನ್ನೊಪ್ಪಿಕೊಂಡು, ಬರೇ ಸ್ಪರ್ಶದೋಷದ ವಿಷಯವಾಗಿ, ವಿಷಯಾಂತರವಾಗದಂತೆ ಸಿಗಬೇಕಾಗಿರುವದು. ಆರೋಗ್ಯದ ನೇಮಗಳಲ್ಲಿ ಅಗ್ನಿವಾಯುಗಳಿಂದ ಘನಪ್ರವಾಹಿಪದಾರ್ಥಗಳೂ, ವಾಯುರೂಪಪದಾರ್ಥಗಳೂ ಶುದ್ಧವಾಗುವವೆಂದು ಆರೋಗ್ಯದ ನಿಯಮಗಳನ್ನೇ ಸ್ಪರ್ಶದೋಷನಿವಾರಣದ ವಿಷಯವಾಗಿ ಬಳಿಸುವದು ಭ್ರಾಮಕವಾದುದು ಯಾವದೋಷಗಳು ಯುಗಯುಗಾಂತರ ಗಟ್ಟಲೆ ಬಲು ಸಾವಕಾಶವಾಗಿ ಹಬ್ಬುತ್ತಿರುವವೋ ಅವುಗಳು ಲೋಕದ ನಿದರ್ಶನಕ್ಕೆ ಬಂದ ಹೊರತು ಮಂದಿಡಲು, ಪ್ರಯತ್ನಿಸುವದು ಲೋಕ ವಿರುದ್ಧವಾದ ತಲೆತಿರುಕರ ಆಟವಾಗುವದು. ಸೃಷ್ಟಿಯ ಆದಿಕಾಲದಿಂದ ಈ ದೋಷವು ಮೆಲ್ಲನೆ ಹಬ್ಬುತ್ತ ವಾತಾವರಣ ಸಹಿತವಾಗಿ ಯಾವತ್ತೂ ಲೋಕವು ಸ್ಪರ್ಶ ದೋಷದಿಂದ ಕೆಟ್ಟು ಮುಲುಕೆದ್ದು ಸೀತಿದ್ದರಿಂದಲೂ ಅಂತಹ ತತ್ತ್ವಗಳ ಯೋಗದಿಂದ

ನಿರ್ಮಿತವಾಗಿರುವ ಪಿಂಡಗಳಿಂದುಂಟಾಗುತ್ತಿರುವ ವಿಕಾರದ ತರಂಗಗಳ ಕಷ್ಟದ ಅನುಭವವು ಪ್ರತಿಯೊಂದು ಮಾನವ ವ್ಯಕ್ತಿಯು ಅನುಭವಕ್ಕೆ ಬಂದಿರುವದರಿಂದ ಲೂ, ಈಗ, ನಿಜಧರ್ಮದ ಉದಾತ್ತ ವಿಚಾರಗಳಿಂದಲೂ ಪ್ರಯೋಗಗಳಿಂದಲೂ ಲೋಕದ ನಿದರ್ಶನಕ್ಕೆ ತಂದುಕೊಡುವದು ಉಚಿತವಾಗಿರುವದು. ನೀರು ಬೆಂಕಿಯ ಯೋಗದಿಂದ ಉಗಿಯಾಗಿ ಗಾಳಿಯು ಕೂಡ ಗಾಳಿಯಾಗಿ ಹವೆಯಲ್ಲಿ ಬೆರೆತರೂ ಅದು ತನ್ನಲ್ಲಿ ಉಂಟಾದ ಸ್ಪರ್ಶದೋಷವನ್ನು ಕಳೆದುಕೊಳ್ಳಲಾರದು. ಘನ ಪದಾರ್ಥಗಳು ಸುಟ್ಟು ಬೂದಿಯಾದರೂ, ಕರಗಿ ನೀರಕೂಡ ನೀರಾದರೂ ತಮ ಗುಂಟಾದ ಸ್ಪರ್ಶದೋಷಗಳನ್ನು ಕಳೆದುಕೊಳ್ಳಲಾರವು. ಪದಾರ್ಥಗಳು ಸುಟ್ಟು ಬೂದಿಯಾದರೂ ಆವುಗಳೊಳಗಿನ ಕ್ಷಾರಗಳ ತತ್ತ್ವವು ಎಷ್ಟೊ ನಾಶವಾಗದೆ ಉಳಿಯುತ್ತಿರುವದನ್ನು ಕಂಡುಕೊಂಡೇ ಶುದ್ಧಕ್ಷಾರಕ್ಕಾಗಿ ಧಾತುಗಳ ಬಸ್ಮಗಳ ನ್ನು ಔಷಧಗಳಿಗೆ ಉಪಯೋಗಿಸುತ್ತಿರುವರು. ಅಂದ ಬಳಿಕ ರುಚಿಯು ಕೆಡದ ಹಾ ಗೆಯೂ, ಹೊಟ್ಟೆಗೆ ಹತ್ತುವ ಹಾಗೆಯೂ ಒಂದು ಪ್ರಮಾಣದಲ್ಲಿ ಸುಟ್ಟು ಹಾಗು ಬೇಯಿಸಿ, ತಿನ್ನುವ ಪದಾರ್ಥಗಳಲ್ಲಿಯು ಸ್ಪರ್ಶ ದೋಷವು ಹಿಂಗಿತೆಂದು ಬಗೆ ಯುವದು ಕೇವಲ ಹುಚ್ಚುತನದ ಹಾಗು ತಿಳಿಗೇಡಿತನದ ಸಂಗತಿಯಾಗಿರುವದು. ಈ ದೋಷವನ್ನು ನಿವಾರಿಸುವ ಶಕ್ತಿಯು ಅಗ್ನಿಯಲ್ಲಿಲ್ಲ. ವೇದಗಳಲ್ಲಿ ಹೇಳಿರು ವ ಅಗ್ನಿಯು ಇದಲ್ಲ. (ಚೆನ್ನಬಸವ ತೈಜಸದ ಆರಂಭದಲ್ಲಿ ಕಂಡುಕೊಳ್ಳಬಹು ದು.) ನಿಜಲಿಂಗಕ್ಕೆ ಅಗ್ನಿಯೆಂದು ಹೇಳಿರುವದು. ಪಂಚಮಹಾಭೂತಗಳಲ್ಲಿ ಅಗ್ನಿತತ್ತ್ವದಿಂದಲೇ ಜೀವನಕಾರ್ಯವು ನಡೆದಿರುವದೆಂದು ಕಂಡುಕೊಂಡು ಆ ತತ್ತ್ವವನ್ನೇ ನಿಜಲಿಂಗಕ್ಕೆ ಕುರುಹಾಗಿಟ್ಟುಕೊಂಡು ಆಚರಿಸುವದರಿಂದ, ಆತ್ಮರಿ ಗೆ ಜೀವನಕಾರ್ಯದ ಆಲೋಚನೆಗಳು ಎಷ್ಟೋವಟ್ಟಿಗೆ ಕಡಿಮೆಯಾಗಿ, ನಿಜಾ ಗ್ನಿಯ ಅನುಸಂಧಾನಕ್ಕೆ ಹೆಚ್ಚು ಅನುಕೂಲವಾಗುವದೆಂದು ಪ್ರತಿಯೊಂದು ಧಾ ರ್ಮಿಕ ಕಾರ್ಯವನು ಮಾಡುವಾಗ್ಗೆ ಪ್ರಚಾರದಲ್ಲಿ ತಂದಿರುವದು. ಭೂತತ್ತ್ವವಾದ ಅಗ್ನಿಯೇ ಲಿಂಗವಾಗಿದ್ದರೆ ಆತ್ಮರ ದೇಹಗಳನ್ನು (ಹೆಣಗಳನ್ನು) ಸುಟ್ಟು ಕರಕು ಮಾಡಿ ದಂತೆ ಆತ್ಮರನ್ನಾದರೂ ಸುಟ್ಟು ಬಿಡುತ್ತಿತ್ತು. ಆದರಲ್ಲಿ ಆತ್ಮರನ್ನು ಸುಡುವ ಯೋಗ್ಯ ತೆಯು ಇಲ್ಲವೇ ಇಲ್ಲ; ಆತ್ಮರು ಅಗ್ನಿ ತತ್ತ್ವವನ್ನು ಮೀರಿದವರು ಅವರಿಗೆ ಅದು ದೇಹ ಪೋಷಣೆಗೆ ಉಪಯೋಗವಾದೀತೇ ಹೊರತು, ಅವರನ್ನು ನಾಶಮಾಡಲಿಕ್ಕಿಲ್ಲ; ಆ ತ್ಮಾನುಸಂಧಾನದ ವಿಷಯವಾಗಿ ಇರಬೇಕಾದ ರೀತಿಯಲ್ಲಿಟ್ಟುಕೊಂಡು, ಬಾಹ್ಯ ದಲ್ಲಿ ಅದರ ಕುರುಹಿಗಾಗಿ ಯಾವ ಭೂತವನ್ನು ಉಪಯೋಗಿಸಿದರೇನು; ಅವೆಲ್ಲ ಕುರುಹುಗಳಿಂದ ಆಗುವ ಪರಿಣಾಮವು ಒಂದೇ. ಇದನ್ನು ತಿಳಿದೇ ಗುಡಿಗುಂಡಾರ ಗಳಲ್ಲಿ ಭೂತತತ್ತ್ವವೆನಿಸಿದ ಕಲ್ಲುಗಳನ್ನು ದೇವರ ಕುರುಹಿಗಾಗಿ ಇಟ್ಟುಕೊಂಡರು. ಹಾಗಲ್ಲದಿದ್ದರೆ ಎಲ್ಲೆಲ್ಲೆಲ್ಲ ಅಗ್ನಿಯ ಕುಂಡಗಳೇ ಇರುತ್ತಿದ್ದವು. ಇರಲಿ; ಅಗ್ನಿಯನಿಕ

ನಿಜವಸ್ತುವಲ್ಲ; ಅವರಲ್ಲಿ ಆತ್ಮರನ್ನು ಸುಡುವ ಯೋಗ್ಯತೆಯಿಲ್ಲ; ಪದಾರ್ಥಗಳ ಸ್ಪರ್ಶದೋಷಗಳನ್ನು ನಾಶಮಾಡುವ ಶಕ್ತಿಯು ಮುನ್ನವೇ ಇಲ್ಲ; ಇದ್ದರೆ ಲೋಕದಲ್ಲಿ ವಿಕಾರವು ಇಷ್ಟು ಹೊತ್ತಿಗೆ ನಿಲ್ಲುತ್ತಿದ್ದಿಲ್ಲ; ಅದರಿಂದ ವಾತಾವರಣವೆಲ್ಲ ಈ ದೋಷದಿಂದ ಕೆಡಲು ಸಹಾಯವಾಯಿತೆಂದು ಕೈಯೆತ್ತಿ ಹೇಳಬಹುದು; ಸ್ವಾಭಾವಿಕವಾಗಿ ಚಲನವಿಲ್ಲದ ವಾತಾವರಣವು ಅಗ್ನಿತತ್ವದ ಯೋಗದಿಂದಲೇ ಚಲನವನ್ನು ಹೊಂದಿ ವಾಯುರೂಪದಲ್ಲಿ ಚಲಿಸುತ್ತಿರುವದು. ಗಾಳಿಯುನಕ ಇದ್ದುದನ್ನು ಹೊತ್ತುಕೊಂಡು ಒಯ್ಯುವದು. ಅವಕಾಶವನಕ ಯಾವತ್ತೂ ತತ್ತ್ವಗಳಿಗೆ ತನ್ನಲ್ಲಿಂಬುಕೊಡುವದು; ಇದೊಂದೇ ಅದರ ಧರ್ಮವು; ಅದು ಕೆಡುವದೂ ಅಲ್ಲ; ಕೆಡಿಸುವದೂ ಅಲ್ಲ; ಶುದ್ಧಿಸುವದೂ ಅಲ್ಲ; ಕೇವಲ ನಿರ್ಗುಣವಾದುದು. ಅಂತೇ ಯೋಗಿಗಳು, ನಿರ್ವಾತದಲ್ಲಿ ಯಾವದೊಂದು ಬಾಹ್ಯದೋಷವಿಲ್ಲದೆ, ಇರಲು ಬರುವದೆಂದು ಆತ್ಮನನ್ನು ಬ್ರಹ್ಮರಂಧ್ರಕ್ಕೆ ಏರಿಸಿಕೊಂಡು ಉಳಿಯಬೇಕೆಂದು ಪ್ರಯತ್ನಿಸಿದರೂ, ತಮ್ಮ ದೋಷವು ತಮ್ಮನ್ನೆ ಕಾಡಹತ್ತಿತು. ಈ ಮಾತಿಗೆ ಪ್ರಭುದೇವರು “ಹುಲಿಗಂಜಿ ಹುತ್ತವಹೊಕ್ಕರೆ ಸರ್ಪ ಕಚ್ಚದೆ ಮಾಣ್ಬುದೇ”ಎಂ ಎಂದು ಹಾಡಿದ್ದೇ ಸಾಕ್ಷಿ; ತೀದು ನೋಡಲು ಗಾಳಿಬೆಂಕಿಗಳು ಸ್ಪರ್ಶದೋಷವನ್ನು ತುಂಬಾತುಂಬಿ ವಿಸ್ತರಿಸಲು ಕಾರಣವಾಗಿರುವವೇ ಹೊರತು, ಪರಿಹರಿಸುವ ಸಾಮರ್ಥ್ಯವು ಯಾವ ಭೂತಗಳಲ್ಲಿಯೂ ಇಲ್ಲ;ಅನಾದಿ ಸಂಸಿದ್ಧವಾಗಿದ್ದ ಮಲದೋಷವನ್ನು ಪರಿಹರಿಸುವ ಕುರಿತು, ಇದೆಲ್ಲ ಲೀಲೆಯಿರುವದರಿಂದ,ಸ್ಪರ್ಶದೋಷವು ಆತ್ಮರ ಸಂಸರ್ಗದಿಂದ ಸಕಲಭೂತಂಗಳಲ್ಲಿ ವ್ಯಾಪಿಸಿಕೊಂಡು ಒಂದೇಸವನೆ ಬೆಳೆಯುವದೇ; ಸ್ಪರ್ಶದೋಷದಿಂದ ಭೂತಗಳು ಕೆಡಲು, ಸೃಷ್ಟಿಯು ಆದಿಕಾಲದಿಂದ ಆರಂಭವಾದುದು ಇನ್ನೂವರಿಗೆ ಅದಕ್ಕೆ ಏನೊಂದು ಚ್ಯುತಿಯಿಲ್ಲದೆ, ಮಹಾಸಾಗರಗಳ ನೀರು ಒಂದೇಸವನೆ ಉಪ್ಪಾಗುತ್ತ ನಡೆದಂತೆ, ನಡೆದಿರುವದು. ಈಗ ಅದು ಪರಮಾವಧಿ ಬೆಳೆದು ಮಲೆತುನಿಂತಿರುವದು. ಈ ಮಾತಿಗೆ ಈಗಿನ ಲೋಕವು ಜ್ಞಾನಕಲೆಯಲ್ಲಿ ವಿಪರೀತ ಬೆಳೆದು ಪೂರ್ವಜರಿಗಿಂತ ಹೆಚ್ಚುಜಾಣರಾಗಿ, ಹಿಂದಿನ ಅನುಭವಗಳನ್ನೆಲ್ಲ ಗ್ರಂಥರೂಪದಿಂದ ಸಂಗ್ರಹಿಸಿಕೊಂಡು ಅವುಗಳನ್ನು ತಿಳಕೊಳ್ಳುವಸಾವ ಧೈರ್ಯವುಳ್ಳದ್ದಾಗಿ, ಧರ್ಮಾಧರ್ಮಗಳನ್ನು ನಿರ್ಣಯಿಸುವ ಮತಿಯುಳ್ಳದ್ದಾಗಿದ್ದರೂ ಪ್ರತಿಯೊಂದು ವ್ಯಕ್ತಿಗೆ ಧರ್ಮದಿಂದ ನಡೆಯುವದು ಅಸಾಧ್ಯವಾಗಿ ಕೂತಿರುವದೇ ಸಾಕ್ಷಿ; ಶುಚಿಯುಕಾರ್ಯವು ಎಲ್ಲಿರುವದೋ ಆ ಪರಮಾತ್ಮನಿಗೇ ಗೊತ್ತು. ಇಂತಹ ವಿಕಾರಮಯವಾದ ಸ್ಥಿತಿಯಲ್ಲಿ ಎಲ್ಲಿಗೆ ಹಾರಿ ಯಾವ ಶುಚಿಯನ್ನು ಕಂಡುಕೊಳ್ಳುವದು? ಆರೋಗ್ಯದೃಷ್ಟಿಯಿಂದ ಮಲವೂ, ಅನ್ನವೂ, ಬಚ್ಚಲದ ಕೊಳೆಯೂ, ನೀರೂ, ಭಿನ್ನವಾಗಿ ಕಂಡಾಗ್ಯೂ, ಲಿಂಗದೃಷ್ಟಿಯಿಂದ ಅವೆಲ್ಲ ಸ್ಪರ್ಶದೋಷಮೂಲಕ ಒಂದೇಯಾಗಿರುವವು. ಈಗಿನ ಲೋಕದೊಳಗಿನ ಆತ್ಮರೆಲ್ಲ ತಮ್ಮನ್ನು ತಾವು ಒಳ್ಳೇ ಪರಿಶುದ್ಧರೆಂದು ಭಾವಿಸಿಕೊಂಡಾಗ್ಯೂ

ಸ್ಪರ್ಶದೋಷಮಯವಾದ ಭೂತಗಳಲ್ಲಿರುವದರಿಂದ ಪ್ರತಿಯೊಬ್ಬರು ಪ್ರತಿಸರಕಾಸುರರೇ ಆಗಿರುವರು. ಇಂತಹ ನರಕಾಸುರರು ಆತ್ಮಾನಾತ್ಮವಿಚಾರವನರಿಯದೆ ನಿಜಲಿಂಗದ ನೆಲೆಗಾಣದೆ ಜಗದ್ಗುರುಗಳೆಂದು ಸಾರುವದೂ, ಸಾರಿ ಸಾಧಿಸಲು ಯತ್ನಿಸುವದೂ ಎಷ್ಟು ನಾಚಿಕೆಗೇಡಿತನವ ಅಜ್ಞಾನವ ಅಹಂಕಾರವ ಕಲಹವಾಗಿರುವದೆಂಬದನ್ನು ವಾಚಕರೇ ಊಹಿಸಲಿ; ಇವರಿಗೆ ಅಂಬಿಗರ ಚೌಡಯ್ಯನೂ, ಕಾಡಸಿದ್ಧನೂ ಮಾತುಮಾತಿಗೆ ಹೇಳಿರುವ ಶಿಕ್ಷೆಯು ಇನ್ನೂ ಕಡಿಮೆಯಾಗಿಯೇ ಕಾಣುವದು. ಮುಸುರಿಯ ಎಲೆಯು ಕಾಲಿಗೆ ತಾಕಿದರೆ, ಇನ್ನೊಬ್ಬರ ಕೈಯೊಳಗಿನ ನೀರಹನಿಯು ಸಿಡಿದರೆ ಶುಚಿಗೆಟ್ಟು ಮೈಲಿಗೆಯಾಗುವೆವೆಂಬ ಎರಡೆರಡು ಮೂರುಮೂರು ನಾಲ್ಕುನಾಲ್ಕು, ಐದೈದು ಮೊಳ ಹಾರಾಡುವವರಲ್ಲಿ ಏನು ಶುಚಿಯುಳಿದಿದೆಯೋ ಅದನ್ನು ಲಿಂಗವೇ ಬಲ್ಲದು. ಯಾವತ್ತೂ ತತ್ತ್ವಗಳಿಗೆ ಮೀರಿ ನಿರ್ಮಲವಾಗಿ ತಾನೇತಾನಾಗಿದ್ದ ಲಿಂಗವೊಂದೇ ಸ್ಪರ್ಶದೋಷಪರಿಹಾರಕವಾದುದಲ್ಲದೆ, ಅದರ ವ್ಯತಿರಿಕ್ತವಾಗಿ ಬೇರೆ ಯಾವ ಅರ್ಥಗಳಲ್ಲಿಲ್ಲಿಯೂ ಇಲ್ಲ; ದೇವಾನುದೇವತೆಗಳೂ ಕೂಡ ಆತ್ಮದೋಷವನ್ನು ಹಿಂಗಿಸಿಕೊಳ್ಳದೆ, ಕೇವಲ ಸತ್ಕರ್ಮಗಳ ಯೋಗದಿಂದ ತಮ್ಮತಮ್ಮ ಫಲಪದಪದವಿಗಳನ್ನು ಹೊಂದಿದವರು. ಆ ಕರ್ಮದ ಫಲವು ತೀರಿದ ಕೂಡಲೆ ಮತ್ತೆ ತಮ್ಮ ದೋಷಗಳಿಂದ ಕೆಳಗಿಳಿದು, ಭವಚಕ್ರದಲ್ಲಿ ಸಿಲಕುವವರೇ ಹರಿಬ್ರಹ್ಮಾದಿಗಳು ಕೂಡ ದೋಷಮುಕ್ತರಲ್ಲ; ಈ ಬಗ್ಗೆ ಪ್ರಭುದೇವರು ಹಾಡಿನುದನು ನೋಡಿರಿ.

"ಬ್ರಹ್ಮನ ಘನವೆಂಬೆನೆ? ಬ್ರಹ್ಮನ ನುಂಗಿತ್ತು ಮಾಯೆ. ವಿಷ್ಣುವಿನ ಘನವೆಂಬೆನೆ? ವಿಷ್ಣುವಿನ ನುಂಗಿತ್ತು ಮಾಯೆ. ರುದ್ರನ ಘನವೆಂಬೆನೆ? ರುದ್ರನ ನುಂಗಿತ್ತು ಮಾಯೆ. ತಾ ಘನವೆಂಬೆನೆ? ತನ್ನನ್ನು ನುಂಗಿತ್ತು ಮಾಯೆ. ಒಬ್ಬರನ್ನೊಬ್ಬರೊಳ್ಳದಿತ್ತೇ? ಎಲ್ಲರೂ ನಿನ್ನ ಕಾಲುಗಾಹಿನ ಸಂವು ಕಾಣೋ ಗುಹೇಶ್ವರ."

ಆದುದರಿಂದ ಲಿಂಗಸಮರಸಯೋಗವೇ ಸಕಲ ದೋಷಗಳಿಂದ ಪರಿಶುದ್ಧವಾಗಲಿಕ್ಕೆ ನಿಜವಾದ ಉಪಾಯವಲ್ಲದೆ, ಇನ್ನೊಂದು ಕೇಳಬಾರದು. ಆವೆಲ್ಲ ಭ್ರಾಮಕವು. ಸೃಷ್ಟಿಯು ಆದಿಕಾಲದಿಂದ ಕೆಡುತ್ತಬಂದಿರುವ ಭೂತಗಳು ಇಲ್ಲಿಗೆ ಪರಮಾವಧಿ ಕಟ್ಟು, ಲೋಕವು ವಿಕಾರಮಯವಾಗಿರುವದು. ಇಂತಹ ದೋಷಯುಕ್ತವಾದ ಅಣುಗಳಿಂದ ನಿರ್ಮಿತವಾದ ಶರೀರಗಳಲ್ಲಿ ತತ್ಪರವಶರಾಗಿ ನಡೆಯುವ ದೋಷಯುಕ್ತ ಆತ್ಮರು, ಈ ಕಠಿಣ ನಿಯಮಗಳನ್ನು ಪರಿಪಾಲಿಸಲು ಎಷ್ಟು ಸಮರ್ಥರಾಗಿ ಉಳಿದಿರುವದಿಲ್ಲ. ವಿಕಾರದ ಶಕ್ತಿಯು ಯಾವ ಆತ್ಮರ ಶಕ್ತಿಗೂ ಹಣಿಯದಷ್ಟು ಬೆಳೆದು ನಿಂತಿರುವದು. ಇನ್ನೂ ಅದರಲ್ಲಿ ಅದೇ ಆಟನೆಂದರೆ ಯಾವದೂ ಸಾಗದ ಮಾತು. ಲಿಂಗಸಾಮರಸ್ಯಯೋಗದ ಹೊರತು, ಆತ್ಮರಿಗೆ ಗತಿಯೇ ಉಳಿದಿರುವದಿಲ್ಲವೆದ ಸಮಯವು ಈಗ ಬಂದುಬಿಟ್ಟ

ರುವದು. ಅದೇ ಬೇಕಾದರೆ ಸಾಯಿರಿ. ಬೇಡಾದರೆ ಲಿಂಗಸಾಮರಸ್ಯ ಯೋಗ ಕ್ಕೆ ಶರಣುಮಾರ್ಗವಿಡಿದು ಬದುಕಿಕೊಳ್ಳಿರಿ; ಇದು ನಿಮ್ಮ ನಿಮ್ಮ ಇಚ್ಛೆಯುಳ್ಳ ಮಾತು; ಇದ್ದಸ್ಥಿತಿಯನ್ನು ಮುಂದಿಟ್ಟಿರುವದು.

ಅಹಂಕಾರವು—ಇದು ಆತ್ಮರು ಹೇಗೆ ಹೇಗೆ ಅರುವಿನ ಸೃಷ್ಟಿಯಲ್ಲಿ ಬೆಳೆಯು ತ್ತಹೋಗುವರೋ ಹಾಗೆ ಹಾಗೆ ವಿಸ್ತರಿಸಿ ತೋರುತ್ತ ಹೋಗುವದೇ; ಕುಗ್ಗುವ ದಲ್ಲ; ಇದನ್ನು ಸಂಪೂರ್ಣವಾಗಿ ಲಯಮಾಡುವ ನಿಜಮಾರ್ಗವನ್ನು ಪ್ರಮಥರೇ ಕಂಡುಕೊಂಡು ಪ್ರಯೋಗದಲ್ಲಿ ತಂದು ತೋರಿಸಿದವರು. ವೀರಶೈವರಿಗೂ ಇದ ರ ಹಾದಿಯು ಸಿಕ್ಕಿದ್ದಿಲ್ಲ. ಸಾತ್ತ್ವಿಕವೃತ್ತಿಯಿಂದ ಅಹಂಕಾರವು ಕುಗ್ಗುವದೆಂದು ಲೌಕಿಕರು ನಂಬುವರು. ಇದನ್ನು ಲೋಕಕ್ಕೆ ಭೂತಧರ್ಮಿಗಳೇ ಹಾಕಿಕೊಟ್ಟ ರುವರಲ್ಲದೆ, ಇದು ಲಿಂಗಾಂಗಸಮರಸದ ಯೋಗದಲ್ಲಿ ಪರಿಣತರಾದ ನಿಜಧರ್ಮಿ ಗಳ ಮಾತಲ್ಲ; ಏಕಂದರೆ ಅದು ಗುರುಲಿಂಗಜಂಗಮದ ದಾಸೋಹದಿಂದಲ್ಲದೆ, ಮತ್ತ್ಯಾತರಿಂದಲೂ ಹಿಂಗದು. ಹೇಗೆ ಆತ್ಮರು ಸಾತ್ತ್ವಿಕವೃತ್ತಿಯಲ್ಲಿ ಬೆಳೆಯುತ್ತ ಹೋಗುವರೋ, ಹಾಗೆ ಅಹಂಕಾರದ ಕ್ಷೇತ್ರವು ವಿರಲವಾಗಿ ವಿಸ್ತರಿಸಿ ತೋರುತ್ತ ಹೋಗುವದು. ಈ ಅಹಂಕಾರಿಗಳು "ಸೋಽಹಂ" "ಸೋಽಹಂ' ಮಂತ್ರವ ನೋದಿ, ತಮ್ಮನ್ನು ತಾವೇ ಪರಮಾತ್ಮವೆಂದು ಬಗೆದುಕೊಂಡು, ನಿಜಲಿಂಗಸೃ ಷ್ಟಿಗೆ ಹೊರತಾಗಿರುವರು. ಇವರು ತಮ್ಮಷ್ಟಕ್ಕೆ ತಾವೇ ಕಂಟಕರಾಗಿರುವದಿಲ್ಲ; ಪುಣ್ಯಸಂಗ್ರಹವನ್ನು ಸೂರೆಮಾಡಿ ಪ್ರತಿಪರಮಾತ್ಮನಂತೆ ಕಾಣಿಸಿಕೊಳ್ಳಲು ಯ ತ್ನಿಸುವರಾದುದರಿಂದಲೂ, ಪರಮಾತ್ಮನನ್ನು ನೋಡಲಾರದ ಜಗತ್ತು ಇವರನ್ನೇ ಪರಮಾತ್ಮನೆಂದು ನಂಬಿ ಮುತ್ತಿಬೀಳುವದರಿಂದಲೂ, ಮೊರೆಬಿದ್ದವರಿಗೆಲ್ಲರಿಗೂ ತಮ್ಮ ಪುಣ್ಯವು ತೀರುವ ವರೆಗೆ ಕಂಟಕರಾಗಿ ಉಳಿದುಕೊಳ್ಳುವರು. ಈಗ ಅಂ ತಹ ಆತ್ಮರುಗಳೆಲ್ಲರೂ ಸತ್ತ್ವವನ್ನೆಲ್ಲ ಕಳೆದುಕೊಂಡು, ಆಕುಂಚನ ಹೊಂದಿ ಮಾನವಸೃಷ್ಟಿಯಲ್ಲಿ ತಲೆಯೆತ್ತಿದಾಗ್ಯೂ, ಸತ್ತವರ ವಿಷಯವಾಗಿ ಸುಡುಗಾಡಕ್ಕೆ ಹೋಗಿ ಅತ್ತತ್ತು ಬರುವ ಪೆದ್ದರಂತೆ ಕ್ಷೇತ್ರತೀರ್ಥಗುಡಿಗುಂಡಾರಗಳಿಗೆ ಹೋಗಿ, ತಲೆ ತಿಕ್ಕಿ ತಿಕ್ಕಿ ಹಣಿಗೆ ಮಣ್ಣುಮಾತ್ರ ಮೆತ್ತಿಸಿಕೊಂಡು ಬರುತ್ತಿರುವರು. ಡಬ್ಬಿ ಯೊಳಗಿನ ಕರ್ಪೂರವೆಲ್ಲ ತೀರಿದರೂ, ಅದರ ವಾಸನೆಗಾಗಿ ಅದನ್ನು ಬಳಿಸುತ್ತಿ ರುವವರಂತೆ, ಅಥವಾ ಮುಸರಿಯ ಆಶೆಗಾಗಿ ಬಾನಿಯನ್ನು ನೆಕ್ಕುತ್ತಿರುವ ಪಶುಗ ಳಂತೆ; ಇಂತಹ ಸಾತ್ವಿಕವೃತ್ತಿಯು ಆತ್ಮಿಕ ಅಹಂಕಾರಿಗಳನ್ನು ನಂಬಿ ನಡೆಯುವ ಅಂಧಭಕ್ತರ ಹಾಡಾಗಿರುವದು. ಆತ್ಮರಲ್ಲಿ ದೇವರು, ದೇವತೆಗಳು, ರಾಕ್ಷಸರು ಮಾನವರು, ಪಿಶಾಚಿಗಳು ಹೀಗೆ ಅನಂತವಿಧವಾಗಿ ತೋರಲು, ಅವರು ಅರುಹಿನ ಸೃಷ್ಟಿಯಲ್ಲಿ ಹಿಂದುಮುಂದಾಗಿ ತಲೆಯೆತ್ತುತ್ತಿರುವದೂ, ತಲೆಯೆತ್ತಿ ವ್ಯವಹರಿಸಿದ ಅವಧಿಯಪ್ರಮಾಣಕ್ಕನುಸರಿಸಿ ಜ್ಞಾನಕಲೆಯು ವಿಕಸಿತವಾಗುತ್ತಿರುವದೂ, ಅನ ರವರ ಕರ್ಮಾನುಸಾರವಾಗಿ ಆಯಾ ಆತ್ಮರಿಗೆ ಸಂಸ್ಕಾರವಾಗುತ್ತಿರುವದೂ, ಈ

ಗುಣಾತ್ಮಕ ಸೃಷ್ಟಿಯಲ್ಲಿ ಯಾರುಯಾರು ಯಾವಯಾವ ಭಾವಗಳಿಂದ ವ್ಯವಹರಿಸುವರೋ, ಅವರವರು ಅವವುಗಳ ಫಲಗಳನ್ನೇ ಹೊಂದುತ್ತಿರುವದೂ, [ ಬಿತ್ತಿದ್ದನ್ನು ಬೆಳಕೊಳ್ಳುತ್ತಿರುವದೂ] ಸಬಲವಾದ ಪರಿಸ್ಥಿತಿಯು [ಸೃಷ್ಟಿಯ ಸ್ವಾಭಾವಿಕ ಒಳುಗಳು ] ಆತ್ಮರನ್ನು ತನ್ನ ಬಲೆಯೊಳಗೆ ಕೆಡವಿಕೊಳ್ಳುತ್ತಿರುವದೂ,ನಾನು ನನ್ನದೆಂಬ ಭ್ರಮೆಯು ಮಾಯಾಪಾಶವನ್ನು ವಿಸ್ತರಿಸುತ್ತಿರುವದೂ, ಆತ್ಮಾನಾತ್ಮ ವಿವೇಕಾನುವರ್ತನವು ಈ ಪಾಶವನ್ನು ಹರಿಯುತ್ತಿರುವದೂ, ಇಷ್ಟಸಾಧ್ಯವಾದ ಮೇರೆಗೆ ಮನದಾಶೆಯು ಬೆಳೆಯುತ್ತಿರುವದೂ ಇತ್ಯಾದಿ ಸಂಗತಿಗಳು ಕಾರಣವಾಗಿರುವವು. ಈ ಕಾರಣಗಳ ಮೂಲಕ ಪ್ರವೃತ್ತಿಯ ಕಲೆಯು ಆತ್ಮರಿಗೆ ಹೆಚ್ಚುತ್ತಿರುವಮದದಿಂದಲೂ, ನಿವೃತ್ತಿಯ ಕಲೆಯು ಆತ್ಮರಿಗೆ ತೋರುತ್ತಹೋಗುವ ಅನುಭವದ ವಿವೇಕದಿಂದಲೂ, ಆತ್ಮರ ವೃತ್ತಿಯಲ್ಲಿ ಕ್ಷಣಕ್ಷಣಕ್ಕೆ ಬದಲಾಗುತ್ತಿರುವದು. ಆದುದರಿಂದ ಅವರು ಹಲವುವಿಧವಾಗಿ ತೋರುವರಲ್ಲದೆ, ಇದು ಅಹಂಕಾರದ ದೋಷವಲ್ಲ; ಆ ಅಹಂಕಾರವು ಆತ್ಮರ ಉನ್ನತಿಗಾಗಿರುವವಲ್ಲದೆ, ಅವರನ್ನು ಕೆಡಿಸಲಿಕ್ಕಲ್ಲ; ಆತ್ಮಾನಾತ್ಮವಿವೇಕಿಗಳು ಸಾತ್ತ್ವಿಕವೃತ್ತಿಯಿಂದ ಅದನ್ನು ಸದುಪಯೋಗಿಸಿಕೊಳ್ಳುತ್ತ, ಆತ್ಮೋನ್ನತ್ತಿಯನ್ನು ಮಾಡಿಕೊಂಡು, ನಿಜಲಿಂಗಾನುಸಂಧಾನದ ನಿಜಧರ್ಮಕ್ಕೆ ಅಡ್ಡಾಗಿ ಹಿತಶತ್ರುಗಳಾಗಿರುವರು ಆತ್ಮಾನಾತ್ಮವಿವೇಕಿಗಳಲ್ಲದವರು ಐಹಿಕ ಆಮುಷ್ಮಿಕ ಸಂಗತಿಗಳಿಗೆ ಬಲಿಬಿದ್ದು ತಮ್ಮ ನಿಜಸ್ಥಿತಿಯನ್ನು ಮರೆತು ಧರ್ಮಾಧರ್ಮದಿಂದ ಅಮೃತವನ್ನೂ (ಸುಖೋಪಭೋಗದ ಸಂಸಾರದಲ್ಲಿಯೇ ಬಾಳಿಕೊಂಡಿರುವ ವಿವೇಕದ ಸಾರವನ್ನೂ,) ಮದವನ್ನೂ ( ಸ್ವಾರ್ಥವನ್ನುಸಾಧಿಸುವ ಮರೆಮೋಸದಿಂದ ಕೂಡಿದ ಚತುರೋಪಾಯದ ಸಾರವನ್ನೂ) ಪಾನಮಾಡುತ್ತ ದೇವದಾನವಮಾನವರಾಗಿ ಪರಸ್ಪರರಲ್ಲಿ ಕದನಮಾಡುತ್ತ ಬಂದಿರುವ ಸಂಗತಿಗಳೇ ಪುರಾಣಾಂತರಗಳಲ್ಲಿ ತುಂಬಿತುಳುಕುತ್ತಿರುವವು. ಆತ್ಮೋನ್ನತ್ತಿಯನ್ನು ಸಾಧಿಸಿಕೊಂಡು ಮೂಲಾಹಂಕಾರದಲ್ಲಿ ಉಳಿದುಕೊಂಡವರೂ ಕೂಡ, ಒಮ್ಮೊಮ್ಮೆ ಈ ಮದಾಮೃತಗಳಿಗೆ ಮೋಹಿಸಿ, ಪಾನಮಾಡಿ ಬಡಿದಾಡಿದ ಉದಾಹರಣೆಗಳೂ ತುಂಬಿರುವವು. ಹರಿಬ್ರಹ್ಮಾದಿಗಳು ಕೂಡ ಈ ಮಬ್ಬಿಗೆ ಬಿದ್ದು ಬಡಿದಾಡಿದ ಉದಾಹರಣೆಗಳೂ ದೊರೆಯುವವು. ಆದುದರಿಂದ ಮೂಲಾಹಂಕಾರದಲ್ಲಿ ಅರಿತಾಗಲಿ ಮರೆತಾಗಲಿ ನಿಜಸುಖಕ್ಕೆ ಹೊರತಾಗಿ, ಆತ್ಮರು ತಮ್ಮ ಹಿಗ್ಗುಕುಗ್ಗುಗಳ ಅನುಕೂಲ ಪ್ರತಿಕೂಲ ಸ್ಥಿತಿಗಳಿಗೆ ಸುಖದುಃಖಗಳೆಂದು ಭ್ರಮೆಗೆ ಬಿದ್ದು, ಅವುಗಳನ್ನು ಹೊಂದುವದಕ್ಕಾಗಿಯೇ ತಮ್ಮತಮ್ಮ ಕರ್ಮಯೋಗದಿಂದ ಹೊಂದಿದ ಸರ್ವಶಕ್ತಿಗಳನ್ನೆಲ್ಲ ಉಪಯೋಗಿಸಿ, ಪರಸ್ಪರರಲ್ಲಿ ಬಡಿದಾಡುತ್ತ ಇರುವವರೇ; ಇವರೆಲ್ಲರೂ ಭವಪಾಶಕ್ಕೊಳಪಟ್ಟವರು. ನಿವೃತ್ತಿಯ ಕಲೆಯ ವಿವೇಕಿಗಳಲ್ಲಿ ಮುಂದರಿದವರು, ಇದೆಲ್ಲ ಸಂಗತಿಯನ್ನು ತಮ್ಮ ದಿವ್ಯಾನುಭವದಿಂದ ಕಂಡುಹಿಡಿದು, ಐಹಿಕ, ಆಮುಷ್ಮಿಕ, ಆತ್ಮಿಕ ಸಂಗತಿಗಳಿಂದ ದೂರಿದ್ದು ವ್ಯವಹರಿಸ

ಲು ಪ್ರಯತ್ನಿಸಿದರೂ, ಅವರಿಗೂ ಸ್ವಾಭಾವಿಕವಾದ ಮೂಲಾಹಂಕಾರವನ್ನು ಕುಗ್ಗಿಸಿಕೊಳ್ಳುವದಾಗಲಿಲ್ಲವು. ಲೋಕದಲ್ಲಿ ಈ ಮೆಟ್ಟಿಗೆ ಹಾರಿ, ಈರೀತಿ ಮೂಲಾಹಂಕಾರವನ್ನು ಕುಗ್ಗಿಸಿಕೊಳ್ಳುವ ಕಾರ್ಯದಲ್ಲಿ ಧುರಂಧರರಾಗಿ ಪ್ರಯತ್ನಿಸುವವರೇ ವೀರಶೈವರು. ಏಕೆಂದರೆ ಯೋಗಿಗಳೂ ತಪಸ್ವಿಗಳೂ ಲೋಕದ ಕೂಡ ಹಾಗು ತಮ್ಮ ತನುಕರಣೇಂದ್ರಿಯಗಳ ಕೂಡ ಕುಸ್ತೀಹಿಡಿಯುವದಾಗದೆ ಹೇಡಿಗಳಾಗಿ ಗುಡ್ಡಗಂವ್ಹರಗಳನ್ನು ಸೇರುವವರು. ಲೌಕಿಕಧರ್ಮಿಗಳು ಐಹಿಕ ಆಮುಷ್ಮಿಕ ಆತ್ಮಿಕ ಸಂಗತಿಗಳ ಹಂಗಿನಲ್ಲಿ ಬಿದ್ದು ಸತ್ವ ರಜತಮಗುಣಗಳಲ್ಲಿ ವ್ಯವಹರಿಸುವವರು. ಲೋಕದಲ್ಲಿ ಯಾವದರದೂ ಹಂಗು ಹಿಡಿಯದೆ ಕೇವಲ ಶಂಕರನ ಹಂಗಿನಲ್ಲಿ ಲೋಕದ ಕೂಡ ಹಾಗು ತನುಕರಣೇಂದ್ರಿಯಗಳ ಕೂಡ ಕುಸ್ತೀಹಿಡಿದು ಅಟ್ಟಿಂಸು ತಟ್ಟಿಹಾಯುವವರೇ ವೀರಶೈವರು.

"ಭಿಂದಂತಿ ಶೈಲಾನುದಧೀನ್ ಪಿಬಂತಿ ವ್ಯತ್ಯಾಸಯಂತಿ ಕ್ಷಿತಿಮಂತರಿಕ್ಷಂ। ತೃಣೀಕೃತಬ್ರಹ್ಮಪುರಂದರಾಣಾಂ । ಕಿಂ ದುಷ್ಕರಂ ಶಂಕರಕಿಂಕರಾಣಾಂ ॥"

ಇಂತಹವರಿಗೇ ಮೂಲಾಹಂಕಾರವನ್ನು ನಾಶಮಾಡಿಕೊಳ್ಳುವ, ಲಿಂಗಾಂಗಸಮರಸದ ರೀತಿಯನ್ನು ಪ್ರಯೋಗಪೂರ್ವಕವಾಗಿ ಕಲಿಸಿ, ಆ ನಿಜೈಕ್ಯತೆಯ ಪ್ರಯೋಗವನ್ನು ಲೋಕದ ಮುಂದಿಟ್ಟು, ನಿಜಾಂತಃಕರಣದ ವ್ಯಾಪಾರದಿಂದ ಒಳಕೊಂಡು ಲೋಕವನ್ನೇ ಉದ್ಧರಿಸಲು ಅವಕಾಶವಿರುವದು. ಏಕೆಂದರೆ ಮೂಲಾಹಂಕಾರದ ಅಭಿಮಾನವಿಡಿದು ಸಾತ್ತ್ವಿಕವೃತ್ತಿಯಿಂದ ಯೋಗತಪಸ್ಯಾದಿಗಳಲ್ಲಿ ಆತ್ಮೋನ್ನತಿಯನ್ನು ಸಾಧಿಸಿಕೊಂಡವರು ಸೋಽಹಂ ಮಂತ್ರವ ನೋದುವವರಾದುದರಿಂದ ತಾವೇ ಪರಬ್ರಹ್ಮನೆಂದು ಭಾವಿಸಿಕೊಂಡು, ನಿಜಧರ್ಮಕ್ಕೆ ಅಡ್ಡಾಗಿ ಉಳಿದವರು. ಕಾರಣ ಅವರಿಗೆ ಈ ಗೊಡವಿಯೇ ಬೇಕಿರುವದಿಲ್ಲ. ಇನ್ನು ಐಹಿಕ ಆಮುಷ್ಮಿಕ ಸಂಗತಿಗಳಲ್ಲಿ ಅಭಿಮಾನವಿಡಿದು ಮದಾವೃತಗಳ ಗುಂಗಿನಲ್ಲಿ ಸಂಸಾರಯಾತ್ರೆಯನ್ನು ಮಾಡುವವರು, ತನುಕರಣೇಂದ್ರಿಯಗಳನೆಲ್ಲ ವಿಷಯಗಳಿಗೆ ಮಾರಿಕೊಂಡವರಾದುದರಿಂದ ನಿಜವಾದ ಎಚ್ಚರವಿಲ್ಲದವರು. ಇವರಿಗೆ ಹೇಳುವದೂ ತೋರಿಸುವದೂ ನಿಷ್ಪ್ರಯೋಜನವು. ಈಗೆಂಟು ಶತಮಾನಗಳ ಹಿಂದೆ ವೀರಶೈವರು ಈ ಹದಕ್ಕೆ ಬಂದು ಪೇಚಾಡುತ್ತಿರುವದನ್ನು ಕಂಡು ಲಿಂಗಾಂಗಸಮರಸದಲ್ಲಿ ಬಲ್ಲಿದರಾದ ಪ್ರಮಥರು ಪರಮಾತ್ಮನಾಜ್ಞೆಯಿಂದ ಧರೆಗಿಳಿದು, ವೀರಶೈವರನ್ನು ಮುಂದೆ ಮಾಡಿಕೊಂಡು, ಲೋಕಕ್ಕೆ ಈ ಪ್ರಯೋಗವನ್ನು ತೋರಿಸಲು ಪ್ರಯತ್ನಿಸಿದರಷ್ಟೇ ; ಆಗ್ಗೆ ಇಡೀ ಲೋಕಕ್ಕೆ ತಕ್ಕ ಹದವಿಲ್ಲದುದರಿಂದ, ಈ ಪ್ರಯೋಗಕ್ಕೆ ಅಂತಃಕರಣಪೂರ್ವಕವಾಗಿ ತಾವಾಗಿಯೇ ಒಳಪಟ್ಟ ಯೋಗ್ಯರನ್ನಷ್ಟು ಹೊರತುಪಡಿಸಿ, ಮಿಕ್ಕುಳಿದ ದೊಡ್ಡ ಭಾಗಕ್ಕೆ ರುಚಿಸದೆ ಹೋ

ಯಿತು. ಅದನ್ನು ಕಂಡು ವ್ಯಕ್ತರೀತಿಯಿಂದ ಪ್ರಯೋಗಮಾಡುವದನ್ನು ತಡೆದು, ವೈಮರೆಯಾದವರಂತೆ ನಟಿಸಿ, ಸೃಷ್ಟಿಯ ಸ್ವಾಭಾವಿಕ ಕಾರ್ಯಗಳಲ್ಲಿ ಕೂಡಿಕೊಂಡು, ಅವ್ಯಕ್ತರೀತಿಯಿಂದ ಲೋಕವನ್ನು ಹದಗೊಳಿಸಲು, ಅಂದಿನಿಂದ ಬದ್ಧರಾಗಿಯೇ ಉಳಿದುಕೊಂಡಿರುವರು. ಉಳಿದಿರುವರೆಂದು ನಿಶ್ಚಯಿಸಿಕೊಳ್ಳಲಿಕ್ಕೆ ಉಳವಿಯ ಕ್ಷೇತ್ರವೇ ಸಾಕ್ಷಿ ! ಮತ್ತು ತಾವು ಅವ್ಯಕ್ತವಾಗಿ ಸೃಷ್ಟಿಯ ಧರ್ಮಕಾರ್ಯವಮಾಡುತ್ತಿರುವದು ಲೋಕಕ್ಕೆ ಗೊತ್ತಾಗಲೆಂದು ಕಾಲಜ್ಞಾನದಲ್ಲಿ ಕುರುಹಿಟ್ಟು ಹಾಡಿಕೊಂಡು, ಆ ಕುರುಹುಗಳನ್ನು ಅಂದಿನಿಂದ ಕಾಲಕಾಲಕ್ಕೆ ಆಯಾ ಪದವು ಬರಲೊಡನೆ ಮಾಡುತ್ತಬಂದಿರುವದೇ ಸಾಕ್ಷಿ!

ತಮೋಗುಣದವರ ಇಷ್ಟವು ಕಷ್ಟಸಾಧ್ಯವಾದುದರಿಂದಲೂ, ಅವರ ದರ್ಪನು ಮುರಿಬಡಿಯುವ ಪ್ರಯೋಗಗಳು ಮೇಲಿಂದ ಮೇಲೆ ಆಗುತ್ತಿರುದದರಿಂದಲೂ, ಮುರಿಬಡಿದ ಶಕ್ತಿಗಳವಿಷಯವಾಗಿ ಡಂಕಿಟ್ಟು, ಆಶಕ್ತಿಗಳಿಗಿಂತಲು ಹೆಚ್ಚಿನ ಶಕ್ತಿಯನ್ನುಹೊಂದುವ ವಿಷಯವಾಗಿಯೇ ಮುಂದಿನ ಪ್ರಯತ್ನಗಳು ಇರುವದರಿಂದಲೂ, ಮೂಲಾಹಂಕಾರದ ಅನುಭವವು ಅವರಿಗೆಷ್ಟೂ ಇರುವದಿಲ್ಲ. ಆದುವರಿಂದ ಅವರು ಅಭಿಮಾನವೇ ತಮ್ಮ ಪ್ರಾಣವಾಗಿ ಜೀವಿಸುತ್ತಿರುವರು. ಇಂತಹವರ ಅಭಿಮಾನವು ಸಂಪೂರ್ಣವಾಗಿ ನಾಶವಾಗುವ ಹಾಗೆ ಮಾಡುವದರಿಂದ ಅವರು ಸತ್ತತೆಂಲಗಿ, ಸಂಪೂರ್ಣವಾಗಿ ಗೆದ್ದವರ ವಶವರ್ತಿಯಾಗಿ ಬಿಡುವರು. ಅಥವಾ ಈ ರೀತಿಯಿರುವ ಪ್ರಸಂಗವು ಬರುವ ಘೋರಣವು ತಿಳಿದೊಡನೆಯೇ, ಸಾಯುವದೇ ಲೇಸೆಂದು ಆತ್ಮಘಾತಮಾಡಿಕೊಳ್ಳುವರು. ಇನ್ನು ರಜೋಗುಣದವರ ಇಷ್ಟವು, ಅಷ್ಟು ಕಷ್ಟಸಾಧ್ಯವಲ್ಲದ್ದರಿಂದಲೂ, ಪರರನ್ನು ಸಂಪಾದಿಸಿ ಅವರಿಂದ ತಮ್ಮ ಮರ್ಯಾದೆಯನ್ನು ಹೊಂದುವ ರಾದುದರಿಂದಲೂ, ಪರರನ್ನ ನೋಯಿಸುವದೇ ತಮ್ಮ ದುಃಖಕ್ಕೆ ಕಾರಣವೆಂದು ಅಂತವರಾದುದರಿಂದಲೂ ಇವರಿಗೆ ಮೂಲಾಹಂಕಾರದ ಸಂಪೂರ್ಣನೆಲೆಯು ನಿಲುಕದಿದ್ದರೂ. ಕವಿನೆರಳನ್ನಾದರೂ ಬಲ್ಲವರಾದುದರಿಂದಲೂ ಇವರಲ್ಲಿ ಅಭಿಮಾನವು ಸಾವಕಾಶವಾಗಿ ಬೆಳೆದು, ಅದನ್ನು ಮುರಿಬಡಿಯುವ ಪ್ರಯೋಗಗಳು ಸಾವಕಾಶವಾಗಿ ಜರುಗುತ್ತಿರುವವು. ಮತ್ತು ಇವರು ಸುಖೋಪಭೋಗವನ್ನು ಭೋಗಿಸುವವರಾದುದರಿಂದ, ಬಾಹ್ಯಾಪಮಾನಕ್ಕೆ ತಲೆಜೋಲದೆ, ಹೋದ ಮಾನವನ್ನು ತಿರುಗಿಸಿಕೊಳ್ಳಲು ಚತುರೋಪಾಯಗಳಿಂದಲೂ, ವಿವೇಕದಿಂದಲೂ ಪುನಃ ಮೊದಲಿನಂತೆ ಸರಿಮಾಡಿಕೊಳ್ಳುತ್ತಿರುವರು. ಆದರೂ ತಮೋಗುಣದವರಿಂದ ಆಗಾಗ್ಗೆ ಉಂಟಾಗುತ್ತಿರುವ ತಪ್ಪುಗಳನ್ನು ತಡೆಯಲಾರದೆ, ಒಮ್ಮೊಮ್ಮೆ ಅವರನ್ನು ಸಂಪೂರ್ಣನಾಶಮಾಡುವ ತಮೋಗುಣದ ಮುಬ್ಬಿಗೆ ಬಿದ್ದು, ತಮ್ಮನ್ನೇ ಸಂಪೂರ್ಣವಾಗಿ ನಾಶಮಾಡಿಕೊಳ್ಳುತ್ತಿರುವರು. ಇದೇ ಸಾತ್ವಿಕಗುಣದವರು ಇಹಲೋಕದ ಸಂಗತಿಗಳಲ್ಲಿ ಕೇವಲ ಉಪಜೀವದ ಪೂರ್ತಿ ಹರಿದಾಡಿ, ಪರಲೋಕದ ಸುಖಕ್ಕಾಗಿ ಇಹಲೋಕದ ಹೆಚ್ಚಿನ ಸುಖಸಾಧನಗಳನ್ನೆಲ್ಲ ಸೂರಿಗೊಡುವವರಾದುದರಿಂದ, ಇಹ

ಲೋಕದ ಯಾವಗುಣದವರಿಗೂ ಅಲ್ಲದವರಾಗಲಾರರು. ಆದರೆ ಇಹಲೋಕವ
ನ್ನೆಲ್ಲ ಗೆದ್ದು ಪರಲೋಕಕ್ಕೆ ಕೈಹಚ್ಚುವ ಸತ್ತ್ವವುಳ್ಳ ದಾನವರ ಕೂಡ ಮಾತ್ರ ಕದ
ನವಾಡುವದೂ, ಒಮ್ಮೊಮ್ಮೆ ಅವರಿಂದ ಸಂಪೂರ್ಣನಾಶವಾಗಿ ಇಹನಾಸ್ತಿ ಪರ
ನಾಸ್ತಿಯಾಗಿ ಕೂಡುವದೂ ತಪ್ಪವು. ಇವರಿಗೆ ಅಹಂಕಾರದ ನೆಲೆಯು ನಿಲುಕಿ
ದರೂ ತಮ್ಮ ಸುಖೋಪಬೋಗದ ಮುಂದೆ ಅದನ್ನು ಅಷ್ಟು ಮಹತ್ತ್ವದ್ದಾಗಿ ಗಣಿ
ಸುವದಿಲ್ಲ. ಇವೆಲ್ಲ ಸಂಗತಿಗಳಿಂದ ಹೊಳೆಯುವದೇನಂದರೆ ತಮೋಗುಣದವ
ರ ಸುಖದ ಬಾಳು ಆಗಾಗ್ಗೆ ಕೆಡುತ್ತಿರುವದು. ರಜೋಗುಣದವರದು ಅದಕ್ಕಿಂ
ಸಾವಕಾಶವಾಗಿ ಮಂದಗತಿಯಿಂದ ಕೆಡುತ್ತಿರುವದು ಸಾತ್ತ್ವಿಕಗುಣದವರದು
ಪರಕ್ಕೊಡರುವ ಸತ್ತ್ವಶಾಲಿಗಳಾದ ದಾನವರ ಉಪಟಳವೆದ್ದಾಗ ಮಾತ್ರ ಕೆಡುತ್ತಿ
ರುವದು. ಆದುದರಿಂದ ತಮೋಗುಣದವರಗಿಂತ ರಜೋಗುಣದವರ, ರಜೋ
ಗುಣದವರಿಗಿಂತ ಸಾತ್ತ್ವಿಕ ಗುಣದವರ ಆಯುಷ್ಯವು ಹೆಚ್ಚೆಂದು ಹೇಳುತ್ತಿರು
ವರು. ಆದರೂ ಸೃಷ್ಟಿಯು ಲೋಕವನ್ನೆಲ್ಲ ತನ್ನ ನಿಜಧರ್ಮಕ್ಕೆ ತರುವದಕ್ಕಾಗಿ
ತನ್ನ ಸ್ವಾಭಾವಿಕ ಧರ್ಮದಲ್ಲಿ ಈ ಯಾವತ್ತೂ ಗುಣದವರ ದರ್ಪಗಳನ್ನು ಕುಂ
ದಿಸಲು ಯತ್ನಿಸುತ್ತಿರುವದು. ಈ ಸೃಷ್ಟಿಯ ಧರ್ಮವನರಿತು ಆದರ ಬಲಿಗೆ ಸಿಲು
ಕದಂತೆ ಆತ್ಮಾನಾತ್ಮವಿವೇಕದಿಂದ ಅತ್ತಿತ್ತ ಹರಿಯುವ ಕರಣಗಳನ್ನು ತಡೆದು
ಮೂಲಾಹಂಕಾರದ ಯೋಗದಿಂದ ವ್ಯವಹರಿಸುವವರೇ ಗುರುರಾಜ್ಯಕ್ಕೆ ಹಿತಶತ್ರು
ಗಳಾಗಿರುವರು. ಇಂತಹವರನು ಹಾದಿಗೆ ಹಚ್ಚುವದು ಬಲು ಬಗಿಯಾದುದು.
ಇವರ ಪುಣ್ಯರಾಶಿಯು ತೀರುವ ವರೆಗೆ ಇವರನ್ನು ಯಾವರೀತಿಯಿಂದಲೂ ಮುಟ್ಟ
ಲು ಬರುವದಿಲ್ಲ! ಮತ್ತು ಇವರು ಸಂಪೂರ್ಣವಾಗಿ ಸಾಯುವ ವರೆಗೆ ಲೋಕವು
ಇವರ ಮೇಲಿಟ್ಟ ವಿಶ್ವಾಸವನ್ನು ತೆಗೆದು, ಲಿಂಗದ ಕಡೆಗೆ ತಿರುಗಿಸುವದಿಲ್ಲ. ಆದು
ದರಿಂದ ಇವರ ಪುಣ್ಯರಾಶಿಯು ತೀರುವ ವರೆಗೆ ಹೇಗಿದ್ದರೂ ಇವರನ್ನು ನಂಬಿದ
ವರು ಇವರ ಹಂಗಿನಲ್ಲಿಯೇ ಪೇಚಾಡುತ್ತ ಉಳಿದುಕೊಳ್ಳುವರು ಇವರ ಪೇ
ಚಾಟದಿಂದ ಅವರ ಪುಣ್ಯರಾಶಿಯು ಕರಗುವದಾದುದರಿಂದ, ಅಧಿಕಾರಿಗಳ
ಪುಣ್ಯಕ್ಷಯಕ್ಕೆ ಅಧಿಕಾರಕ್ಕೊಳಪಟ್ಟವರ ನಿಗ್ರಹದ ಹೆಚ್ಚುವಿಕೆಯೇ ಮೂಲ
ಮಂತ್ರವಾಗಿರುವದು. ಈಗ ಲೋಕದಲ್ಲಿ ಅಧಿಕಾರಿಗಳಿಂದ ಅಧಿಕಾರಕ್ಕೊ
ಳಪಟ್ಟವರಿಗುಂಟಾದ ನಿಗ್ರಹದ ಹೆಚ್ಚುವಿಕೆಯು, ಅಧಿಕಾರಿಗಳ ಪುಣ್ಯರಾಶಿ
ಯನ್ನೇ ನಿಃಶೇಷ ಮಾಡುವದರ ಕುರುಹಾಗಿರುವದು. ತಾಮಸ
ಗುಣದ ರಾಕ್ಷಸರ ಕಾಟಕ್ಕಿಂತಲೂ ಇವರ ಕಂಟಕತನದಿಂದ ಲೋಕವ್ಯಾಪ್ತಿ
ಯಾಗಿ ಉಂಟಾಗುವ ಕಾಟವು ಹೆಚ್ಚಿನದೂ, ದೀರ್ಘಸೂತ್ರಿಯದೂ, ಆಗಿರುವ
ದು. ಆದುದರಿಂದ ಸೃಷ್ಟಿಯು ಸ್ವಾಭಾವಿಕಧರ್ಮದಲ್ಲಿ ಲೋಕದ ವಿಕಾರದ
ಕಸುವು ಹೆಚ್ಚಾಗಿ, ಗುಣಾತ್ಮಕವಾದ ಈ ಲೌಕಿಕಧರ್ಮಗಳ, ಹಾಗು ಸೃಷ್ಟಿಯ
ಧರ್ಮದ ವಿರುದ್ಧವಾಗಿ ಆತ್ಮೋನ್ನತಿಯನ್ನು ಸಾಧಿಸುವದಾದ ಯೋಗತಪಸ್ಸ
ಯಾದಿಗಳ ಆಟವು ತಾನಾಗಿಯೇ ಸಿಲ್ಲುವಹಾಗೆ ಆಗುವ ವರೆಗೆ ಲಿಂಗವು ತಡೆ
ದು, ಆ ಹದವ ನೋಡಿ ಪ್ರಕಟವಾಗಿ, ಮೊದಲು ಅಧಿಕಾರಿಗಳ ಪುಣ್ಯರಾಶಿಯ

ನ್ನೇ ನಿಃಶೇಷವಮಾಡಿ,ಅವರಿಗೆ ಕೈಹಚ್ಚುವದಕ್ಕಾಗಿಯೇ ಈಗಿನ ಲೀಲೆಯಿರುವದು. ಈ ಲೀಲೆಯು ಮುಗಿದೊಡನೆಯೇ ಲಿಂಗಪವಾಡವೇ ಪವಾಡವು. ಅದರಲ್ಲಿಯೇ ಅಹಂಕಾರವು ನಾಶವಾಗುವ ಯೋಗವಿರುವದು.

## ೪ ಕಾಯಸ್ಮುಕ್ತಿಯ ತತ್ತ್ವಗಳು

ಈ ವಿಚಾರದಲ್ಲಿ "ಪಾಣಿಮಂತ್ರಂ ಪವಿತ್ರಂ" ಎಂಬ ವೇದವಚನದ ಸಹ ಪಸಿದ್ಧತೆಯಾಗುವದು. ಅಲ್ಲದೆ ಈ ತತ್ತ್ವಾನುವರ್ತನದಿಂದಲೇ ಮೇಲಿನ ವಿರುದ್ಧವಾದ ಸಂಗತಿಗಳೆಲ್ಲ ಸಹಜ ಪರಿಹಾರವಾಗಿ, ಲಿಂಗಾನುಸಂಧಾನಕ್ಕೆ ಬಲವಾದ ಸಾಧನಗಳಾಗುವವು.

ಅಹಂಕಾರವು ಕುಂದಿದ ಹೊರತು, ಏನು ಮಾಡಿದುದೆಲ್ಲ ನಿರರ್ಥಕವೂ, ಪ್ರತ್ಯಕ್ಷ ಪರೋಕ್ಷ ರೀತಿಗಳಿಂದ ಅಕಲ್ಯಾಣಕ್ಕೆ ಕಾರಣವೂ ಎಂಬದನ್ನು ಸೃಷ್ಟಿಯ ಆದಿ ಕಾಲದಿಂದ ಇಂದಿನವರೆಗೆ ಲಭಿಸಿದ ಐತಿಹ್ಯವೇ ಸಾಕ್ಷಿಭೂತನಾಗಿ ಸಿದ್ಧಿಸುವದು. ಮತ್ತು ಇಲ್ಲಿಯವರೆಗೆ ಉಂಟಾದ ಅನುಭವವೇ ಆ ಸಾಕ್ಷಿಯನ್ನು ಒಪ್ಪುವದು. ಈ ಅಹಂಕಾರವನ್ನು ನಿರ್ಮೂಲ ಮಾಡಿಕೊಂಬುವದೇ ಮೊದಲನೆಯ ಕಾರ್ಯವಾಗಿ ಮುಂದೆ ನಿಲ್ಲುವದರಿಂದಲೂ, ಲಿಂಗಸಾಮರಸ್ಯಯೋಗಕ್ಕೆ ಇದೇ ಮಹಾ ಕಂಟಕವಾಗುಳಿದಿರುವದರಿಂದಲೂ ಇದನ್ನು ನಿಃಶೇಷ ಮಾಡಿಕೊಂಡ ಹೊರತು ಗತ್ಯಂತರವಿಲ್ಲ! ವೀರಶೈವಸ್ಥಾಪನಾಚಾರ್ಯರು ಎಷ್ಟೋ ಕಾಲದಿಂದ ಬಡಕೊಂಡು ಶಿವಭಕ್ತಿಯನಾಚರಿಸಿದರೂ, ಈ ಅಹಂಕಾರವನ್ನು ಮುರಿಬಡಿಯುವದಾಗದೆ, ಶಿವಜೀವರ ದ್ವಂದ್ವಭಾವದಿಂದಲೇ ಉಳಿದವರಾಗಿ, ಆಚರಣೆಯನ್ನೆಲ್ಲ ತಮ್ಮ ಅಂಗಕ್ಕಾಗಿಯೇ ಪರಿವರ್ತಿಸಿಕೊಂಡು, ತಮ್ಮನ್ನೇ ಲಿಂಗೋದ್ಭವರೂ ಭೂರುದ್ರರೂ ಎಂದು ಹೊಗಳಿಕೊಂಡರಲ್ಲದೆ,ಲಿಂಗದ ನೆಲೆಗೆ ಹಾರುವದಾಗದೆ, ಭೂತಗಳ ದವಡಿಯಲ್ಲಿ ಸಿಕ್ಕವರಾಗಿದ್ದರು. ಅವರು ಲಿಂಗದ ನೆಲೆಗೆ ಹತ್ತದೆ ಧರ್ಮಾಚರಣೆಯಲ್ಲಿ ಬಹುದಿವಸ ಆಚರಿಸಿ ಆಚರಿಸಿ ತೀರ ನಿರ್ವಿಣ್ಣವಾದ ಸ್ಥಿತಿಗೆ ಬರಹತ್ತಿದ್ದರು. ಶ್ರೀಮದ್ಬಸವಾದಿಪ್ರಮಥರು ಧರೆಗೆ ಬರುವಕಾಲದಲ್ಲಿ, ಅವರ ನಿರ್ವಣ್ಣತೆಯು ಪರಮಾವಧಿ ಕಡೆಯ ಮೆಟ್ಟಗೆ ಹೋಗಿ ಬಿಟ್ಟಿತ್ತು. ಅವರು "ನಾವು ಅಷ್ಟೇ ಏಕೆ ಹೀಗೆ ತಪ್ಪುಮಾಡಿದವರಂತೆ ಲೋಕದ ಬಳಿಕೆಯಿಂದ ದೂರಿರುವದು? ಇದರಿಂದ ಸತ್ತು ಸುಡುಗಾಡ ಸೇರಿದಂತಲ್ಲ! ಇದ್ದು ಸುಖವುಂಡಂತಲ್ಲ!" ಎಂಬುದು ಆ ತಂಡಕ್ಕೆಲ್ಲ ಅನಿಸಹತ್ತಿ, ಒಬ್ಬೊಬ್ಬರೇ ಲೋಕದ ಬಳಿಕೆಯಲ್ಲಿ ಕಾಲಿಡುವ ಸ್ಥಿತಿಗೆ ಬಂದಿದ್ದರು. ಇಂತಹ ಸಮಯದಲ್ಲಿ ಪ್ರತ್ಯಕ್ಷ ಧರ್ಮವೇ ಮೂರ್ತಿಗೊಂಡು, ತನ್ನ ಸರ್ವಸಮ್ಮೇಲನದಿಂದ, ವೀರಶೈವಸಿದ್ಧಾಂತಗಳನ್ನೇ ಮುಂದೆಮಾಡಿ, ಲೋಕದ ಬಳಿಕೆಯಲ್ಲಿ ಲಿಂಗಾಂಗತತ್ತ್ವಗಳನ್ನು ಪ್ರಯೋಗಿಸಿ ತೋರುವ

ಮಹಾಭಾಗ್ಯವೇ ದೊರೆತ ಬಳಿಕ ಕೇಳುವದೇನು ? ಶ್ರೀಮದ್ಬಸವಾದಿಪ್ರಮಥರು ವೀರಶೈವರಲ್ಲಿ ಕೊರತೆಯಿದ್ದ ಲಿಂಗಾಂಗಿಧರ್ಮಕ್ಕೆ ಬೇಕಾದ ಕೆಲವು ತತ್ತ್ವಾನುವರ್ತನಗಳನ್ನು ಜೋಡಿಸಿ, ಅದನ್ನು ಪರಿಪೂರ್ಣಗೊಳಿಸಿ, ಲಿಂಗಾಂಗಿಧರ್ಮವನ್ನಾಗಿಸಿ, ಪ್ರಯೋಗಿಸಿ ತೋರಿದುದರಿಂದ ಲೋಕದಲ್ಲಿ ವೀರಶೈವರ ಪ್ರತಿಷ್ಠೆಯು ಹೆಚ್ಚಾಯಿತು.

ಕಾಯಕದಿಂದಲೇ ಗುರುಲಿಂಗಜಂಗಮದ ದಾಸೋಹ ನಡಿಸುವದು. ಈ ತತ್ತ್ವಾನುವರ್ತನವು ಹೊರಗಿನ ಸಂಗತಿಗಳಿಂದ ಅಭಿಮಾನವನ್ನು ಎಷ್ಟೂ ಬೆಳೆಯಗೊಡದೆ, ಒಳಗಿನ ಮೂಲಾಹಂಕಾರವನ್ನು ಕ್ರಮೇಣ ಕೊಲ್ಲುವದಾಗಿರುವದು. ಆತ್ಮರಿಗೆ ದುಡ್ಡು ಬಾಹ್ಯಪ್ರಾಣವಾಗಿರುವದು. ದುಡ್ಡಿಗೆ ಪ್ರಾಣಕೊಟ್ಟಿರುವ, ಕೊಡುತ್ತಿರುವ, ಕೊಡುವ ವ್ಯಕ್ತಿಗಳೇ ಹೆಚ್ಚಾಗಿರುವರು. ಕಾಯಕದಿಂದಲೇ ದಾಸೋಹ ನಡಿಸುವದಾದ ಮೇಲೆ, ಪ್ರತಿಯೊಂದು ವ್ಯಕ್ತಿಯು ತನ್ನ ಮನೆಯೊಳಗೆ ದುಡ್ಡು ಇರಲಿ, ಇಲ್ಲದೆ ಇರಲಿ ಅದಕ್ಕೆ ಅವನೇನು ಸಂಬಂಧವಾದಂತಾಗಲಿಲ್ಲ. ತನ್ನ ಧರ್ಮದ ಕಟ್ಟಳೆಯ ಮೇರೆಗೆ, ಅದನ್ನು ತನಗಾಗಿ ಯಾವ ರೀತಿಯಿಂದಲೂ ಬಳಸಬಾರದಾಯಿತು. "ತನಗೆ ಸಲ್ಲದ ಹೊನ್ನು ಎಲ್ಲಿದ್ದರೇನು!" ಎಂದು ಬಸವಣ್ಣನು ಹಾಡಿದ ಈ ವಚನವನ್ನು ಸಾರ್ಥಕಗೊಳಿಸುವದೇ ಕಾಯಕದ ಮುಖ್ಯ ಧ್ಯೇಯವಾಗಿರುವದು. ಕಾಯಕವನಾಚರಿಸಿಯೇ ಗುರುಲಿಂಗಜಂಗಮದ ದಾಸೋಹ ಮಾಡುವದಾದಮೇಲೆ, ಅಂದಿಗೆ ಬೇಕು; ಇಂದಿಗೆ ಬೇಕು; ನಾಳಿಗೆ ಬೇಕು; ನಾಡಿದ ಬೇಕು; ಇತ್ಯಾದಿ ಯಾವಚಿಂತೆಗೂ ಆಸ್ಪದ ಉಳಿಯಲಿಲ್ಲ. ಲೋಕದಲ್ಲಿ ಕಾಯಕವ್ಯವಸ್ಥೆಯು ಕೆಟ್ಟಿದುದರಿಂದ ಅರ್ಥಶಾಸ್ತ್ರದ ಉತ್ಪತ್ತಿಗೆ ಕಾರಣವಾಯಿತು. ಈ ಶಾಸ್ತ್ರದ ಉತ್ಪತ್ತಿಯಾದದ್ದೇ ಲೋಕದಲ್ಲಿ ಧರ್ಮವು ಕೆಟ್ಟು ನಾಸ್ತಿಕತ್ವವು ಹಬ್ಬಿದುದರ ಕುರುಹಾಗಿರುವದು. ವಿನಿಮಯಕ್ಕೆ ವಿಘ್ನತೆಯು ಬರಬಾರದೆಂದು ನಾಣ್ಯಗಳು ಪ್ರಚಾರದಲ್ಲಿ ಬರಲು ವ್ಯಾಪಾರದ ಕ್ಷೇತ್ರವು ಬೆಳೆಯಹತ್ತಿ ದುಡ್ಡಿನಾಶಗೆ ಬಿದ್ದು ಯಂತ್ರಗಳ ರಚನೆಯಾಗಹತ್ತಿದವು. ಈ ಯಂತ್ರಗಳು ಪ್ರಚಾರದಲ್ಲಿ ಬಂದಮೇರೆಗೆ ಉದ್ಯೋಗಕ್ರಾಂತಿಯು ಆಗುತ್ತನಡೆದು, ಈಗ ಅವುಗಳ ಪರಮಾವಧಿ ಬೆಳವಣಿಗೆಯಾಗಿರುವದು. ಕಾಯಕದ ವ್ಯವಸ್ಥೆಯು ಲೋಕದಲ್ಲಿ ಉದ್ಯೋಗಕ್ರಾಂತಿಯು ಆಸುರೀಕೃತಿಗೆ ದಿಗ್ಬಂಧನವಾಗಿರುವದು. ಎಲ್ಲಿಯವರೆಗೆ ಧರ್ಮದ ಸೂತ್ರಕ್ಕೆ ಎಷ್ಟೂ ಚ್ಯುತಿಯುಂಟಾಗದಂತೆ ಆ ಸಮಾಜದಲ್ಲಿ ಧರ್ಮಾನುವರ್ತನವು ಕಾಯ್ದುಕೊಳ್ಳುವದೋ, ಅಲ್ಲಿಯವರೆಗೆ ಲೋಕದಲ್ಲಿ ಎಷ್ಟು ಯಂತ್ರಗಳಾದರೇನು! ಎಷ್ಟು ಉದ್ಯೋಗಕ್ರಾಂತಿಯಾದರೇನು ಕಾಯಕವ್ಯವಸ್ಥೆಯು ಆ ಸಮಾಜದ ಪೂರ್ತಿ ತನ್ನಿಂದ ತಾನೇ ಉಳಿದುಕೊಳ್ಳುವದು. ಕಾಯಕವ್ಯವಸ್ಥೆಗೆ ಅನುಕೂಲವಿಲ್ಲದಂಥಹ ಪರಿಸ್ಥಿತಿಯು ಅಧರ್ಮವು ನೆಲೆಗೊಂಡುದರ ಕುರುಹಾಗಿರುವದು, ಧರ್ಮದ ಕೋಟೆಗೆ ಕಾಯ

ಕದ ವ್ಯವಸ್ಥೆಯೇ ಮೊದಲನೆಯ ಸುತ್ತಿನ ಗೋಡೆಯೂ, ಅಗಳಾರಿಯೂ ಆಗಿರುವದು. ಕೋಟೆಯ ಭದ್ರತೆಗೆ ಇದೇ ಪ್ರಾಮುಖ್ಯವಾದುದು. ಆ ದುರ್ಗಕ್ಕೆ ಒಳಗೆ ಏನು ಒಳಸುತ್ತಿನ ಗೋಡೆಗಳಿದ್ದರೂ, ಹೊರಸುತ್ತಿನ ಗೋಡೆಯಷ್ಟು ಭದ್ರತೆಯನ್ನುಂಟು ಮಾಡಲಾರವು. ಒಂದು ಹೊರಸುತ್ತು ಶತ್ರುಗಳ ವಶವರ್ತಿಯಾದುದಾದರೆ, ಕೋಟೆಯೇ ಶತ್ರುಗಳ ವಶವರ್ತಿಯಾಯಿತೆಂದು ತಿಳಿಯತಕ್ಕದ್ದು. ಕೆಟ್ಟುಹೋದ ದುರ್ಗವನ್ನು ಪುನಃ ಭದ್ರಪಡಿಸಿಕೊಳ್ಳಬೇಕೆನ್ನುವವರು ಮೊದಲು ಹೊರಸುತ್ತಿನ ಗೋಡೆಯನ್ನು ಕಟ್ಟಿಕೊಂಡು, ಹಿಂದಿನಿಂದ ಒಳಸುತ್ತಿನ ಗೋಡೆಯನ್ನು ಕಟ್ಟಿಕೊಳ್ಳುತ್ತಿರುವಂತೆ, ಧರ್ಮಸುಧಾರಿಸಿಕೊಳ್ಳಬೇಕೆನ್ನುವವರು ಮೊದಲು ಈ ಕಾಯಕದ ವ್ಯವಸ್ಥೆಯನ್ನು ಮಾಡಿಕೊಂಡೇ ತೀರಬೇಕಾಗಿರುವದು. ಈ ವ್ಯವಸ್ಥೆಯನ್ನು ಮಾಡಿಕೊಳ್ಳದೆ,ಉಳಿದ ವ್ಯವಸ್ಥೆಗಳನ್ನು ಮಾಡಿಕೊಳ್ಳುವೆವೆಂದರೆ ಆದಾಗದು. ಮಾಡುವ ಪ್ರಯತ್ನಗಳೆಲ್ಲ ಗುಡ್ಡಕ್ಕೆ ಕಲ್ಲು ಹೊತ್ತಂತಾಗುವವು. ಈ ವಿಷಯವಾಗಿ "ಏನು ಮಾಡಬೇಕು ಹೇಗೆ ಮಾಡಬೇಕೆಂ"ದು ಏನೊಂದು ಅಳಿದುಹಾಳುಸದಿರುವದಿಲ್ಲ. ಬಸವಣ್ಣನು ಹಾಕಿಕೊಟ್ಟ ಈ ವ್ಯವಸ್ಥೆಯು ಇಡೀ ಲೋಕವೇ ಇವರ ಅನುಕರಣವನ್ನು ಮಾಡಿಕೊಂಡು ತಮ್ಮ ತಮ್ಮ ಕಲ್ಯಾಣವನ್ನು ಕಂಡುಕೊಳ್ಳುವದಾಗಿರುವದು. ಈ ವಿಷಯವಾಗಿ ಆಗಾಗ್ಗೆ ಹೇಳುವ ಪ್ರಸಂಗವು ಇರುವದರಿಂದಲೂ,ಇದನ್ನೇ ವಿವರಿಸುವದಿರುವದರಿಂದ ಮುಖ್ಯ ವಿಷಯವು ಅವಾಂತರವಾಗುವದರಿಂದಲೂ ಇಲ್ಲಿಗೆ ತಡೆದು, ಕಾಯಕದ ನಿಜಸ್ವರೂಪದ ಕಡೆಗೆ ತಿರುಗುವಾ.

ಬರೇ ಕಾಯಕಷ್ಟಕ್ಕೆ ಬಸವಣ್ಣನು ಕಾಯಕವೆಂದು ಅನ್ನುವದಿಲ್ಲ. ಕಾರ್ಯನಿರ್ವೇಶದಲ್ಲಿ ಅಂತಃಕರಣಗಳು ಗುರುಲಿಂಗಜಂಗಮದ ಚಿಂತನದ ವ್ಯತಿರಿಕ್ತವಾಗಿ, ಸುಳ್ಳುಸಂಗತಿಗಳಿಗೆ ಎಷ್ಟೂ ಹರಿಯದಂತೆ, ಕಾಯ್ದುಕೊಂಡೇ ಉಳಿದದ್ದವಾದರೆ, ಅದಕ್ಕೆ ಕಾಯಕವೆನ್ನುವನು. ಹಾಗಲ್ಲದೆ ಸುಳ್ಳು ಸಂಗತಿಗಳಿಗೆ ಹರಿದು, ಚಿತ್ತಪಲ್ಲಟವಾಗಿ, ಚಂಚಲವೃತ್ತಿಯಿಂದ ಹರಿದಾಡುವವಾದರೆ ಅದಕ್ಕೆ ಉದ್ಯೋಗವೆನ್ನುವನು. ಏಕಂದರೆ ಉದ್ಯೋಗದಿಂದ ಅಭಿಮಾನವು ಎಷ್ಟೂ ಕುಂದದೆ ಹಾಗೆ ಬೆಳೆಯುವ ಕ್ರಮವನ್ನೇ ಹಿಡಿಯುವದು. ಈ ಅಭಿಮಾನಕ್ಕೆ ಎಷ್ಟೂ ಆಸ್ಪದವು ಸಿಗದ ಹಾಗೆ,ಶರೀರವನ್ನು ಕಾಯ್ದುಕೊಂಡು ಹೋಗುವ ಪೂರ್ತೆ, ಅದರ ಧರ್ಮಕ್ಕನುಸರಿಸಿ, ತದ್ವಿಷಯವಾಗಿ ಮಾಡಬೇಕಾದ ಅತ್ಯವಶ್ಯದ ಕಾರ್ಯಗಳಲ್ಲೆಲ್ಲ ಅಂದರೆ ಪ್ರತಿಯೊಂದು ಶ್ವಾಸೋಚ್ಛ್ವಾಸಗಳಲ್ಲಿಯೂ ಕೂಡ, ಗುರುಲಿಂಗಜಂಗಮದ ಚಿಂತನವು ಎಷ್ಟೂ ಕೆಡದ ಹಾಗೆ,ಕಣ್ಣುತೆರೆದು ಕಣ್ಣುಮುಚ್ಚುವವರೆಗೆ ಎಚ್ಚರದ ಸಮಯವನ್ನೆಲ್ಲ ಕಾಯ್ದುಕೊಳ್ಳುವದೇ ದಾಸೋಹವು. ಅಭಿಮಾನಕ್ಕೆ ಅನುವು ದೊರೆತಲ್ಲಿ, ಗುರುಲಿಂಗಜಂಗಮದ ಚಿಂತನವು ತಪ್ಪಿ, ಅವು ಕೂಡಲೇ ಮರೆಯಾಗುವವು. ಅಂತೆ ಬಸವಣ್ಣನು 'ಉದ್ಯೋಗ ಮನಮರೆಸಿಂಬುಗೊಂ

ದಲ್ಲಿ ಲಿಂಗ ತಾನೆಲ್ಲಪ್ಪುದೋ?" ಎಂಬ ವಚನದಿಂದ ಭಕ್ತಿಸಾಧಕರನ್ನು ಆಗಾಗ್ಗೆ ಎಚ್ಚರಿಸಿರುವನು. ಅಂತರಂಗದ ಸ್ವಾಭಾವಿಕವ್ಯಾಪಾರವನ್ನು ಕಂಡುಹಿಡಿದು, ಅವುಗಳನ್ನು ಹೇಗೆ ಬಿಗಿಹಿಡಿದು ಆಚರಿಸಲಿಕ್ಕೆ ಬಂದೀತೆಂಬದನ್ನು ಬಸವಣ್ಣನು ಹೇಳಿರುವದನ್ನು ನೋಡಿರಿ.

ಭಾವದಲ್ಲಿ ಯಾವದೊಂದು ಸಂಗತಿಯು ಮೂಡಿದೊಡನೆಯೇ ಅಂತಃಕರಣಗಳು ಅದನ್ನು ಹಿಡಿದುಬಿಡುವವು. ಅಂತಃಕರಣಗಳು ಯಾವದೊಂದನ್ನು ಹಿಡಿದು ತನುವಿನ ವ್ಯಾಪಾರವು ನಡೆದಿರುವದೋ, ಅದು ಅಂಗಕ್ಕೆ ಭೇದಿಸಿ ಮನಸ್ಸಿನಲ್ಲಿ ಮನೆಗಟ್ಟುವದು. ಅಂತೇ "ಯಥಾ ಭಾವಸ್ತಥಾ ಲಿಂಗಂ" ಎಂಬ ಅನುಭವೋಕ್ತಿಯಿರುವದು. ಅದೇ ತದ್ವಿಪರೀತವಾಗಿ ಅಂತಃಕರಣಗಳು ಇಷ್ಟವನ್ನೇ ಹಿಡಿದು ಆಚರಿಸುವ ಹಾಗೆ ಕಾಯ್ದುಕೊಂಡಲ್ಲಿ, ಮಾಡುವ ಕಾರ್ಯ ಶುದ್ಧವಾಗಿ ಭಕ್ತಿ ಎನಿಸುವದು. ಭಕ್ತಿಯಿಂದ ಮನಸ್ಸಿನಲ್ಲಿ ಇಷ್ಟವೇ ಮನೆಗಟ್ಟುತ್ತಿರುವದರಿಂದ, ಆ ಮನೆಗಟ್ಟುತ್ತಿರುವ ಕಾರ್ಯದಲ್ಲಿಯೇ ತೊಡಕಿಕೊಂಡಿರುವ ಅಂತಃಕರಣಗಳು ಎಲ್ಲಿಯ ವರೆಗೆ ಗುಂಗಾಗಿಬಿಟ್ಟಿರುವವೋ ಅಲ್ಲಿಯ ವರೆಗೆ, ಭಾವದಲ್ಲಿ ಯಾವ ಅನಿಷ್ಟ ಸಂಗತಿಗಳು ಮೂಡಿದರೂ, ಅವುಗಳ ಬೆಳವಣಿಗೆಗೆ ಏನೊಂದು ತೆರವು ಸಿಗದೆ, ಅವು ಅಲ್ಲಿಂದಲ್ಲೇ ನಾಶವಾಗುತ್ತಿರುವವು. ಆದರಿಂದ ಅನಿಷ್ಟ ಪರಿಹಾರದ ಕಾರ್ಯವು ಸಹಜವಾಗಿ ನಡೆದು, ಮನಸಿನಲ್ಲಿ ಮನೆಗಟ್ಟುತ್ತಿರುವ ಇಷ್ಟದ ಪರಿಣಾಮವು ಭಾವದ ಮೇಲೆ ಮೂಡಿ ಮೂಡಿ ಆತ್ಮರ ಜಡತ್ವವನ್ನು ಹಿಂಗಿಸಲು ಕಾರಣವಾಗುವದು. ಇದೇ ಸಿದ್ಧಿಯ ಕ್ರಮವು. ಈ ಸಂಗತಿಯೇ "ಯಥಾ ಭಕ್ತಿಸ್ತಥಾ ಸಿದ್ಧಿಃ" ಎಂಬುಕ್ತಿಗೆ ಕಾರಣವಾಯಿತು. ಇವೆರಡೂ ಕಾರ್ಯಗಳಿಗನುಸರಿಸಿ, ಬಸವಣ್ಣನು ಕಾಯಕದಲ್ಲಿ ಆಂತರಿಕ ವಿಷಯವಾಗಿ ಹೇಳಿರುವ ಆಚಾರಕ್ರಮವನ್ನು ನೋಡಿ! ಗುರುಧ್ಯಾನಪರವಶತೆಯಲ್ಲಿ ಕಾಯಕವ ಮಾಡುವದೇ ಗುರುದಾಸೋಹ. ಲಿಂಗಧ್ಯಾನ ಪರವಶತೆಯಲ್ಲಿ ಭೋಗಿಸುವದೇ ಲಿಂಗದಾಸೋಹ. ಭಾವದಲ್ಲಿ ಗುರುಲಿಂಗಸಂಗತಿಗಳ ಹೊರತು, ಏನೊಂದು ಮೂಡದೆ, ಬರೇ ಗುರುಲಿಂಗಗಳ ಚಿಂತನದಲ್ಲಿಯೇ ಗುಂಗಾಗಿ, ಯಾವದರಲ್ಲಿಯೂ ತಾನು ಇರದಂತೆ ಆಗಿ ವ್ಯವಹರಿಸುವದೇ ಜಂಗಮದಾಸೋಹ.

ಬಾಹ್ಯದಲ್ಲಿ ಇಂದ್ರಿಯಗಳಿಗೆ ಗೋಚರವಾಗುತ್ತಿರುವ ವಿಷಯಗಳೇ ಆಗಾಗ್ಗೆ ಮನವನ್ನು ಸೆಳೆದುಕೊಳ್ಳುತ್ತಿರುವದರಿಂದ, ಚಿತ್ತಪಲ್ಲಟವಾಗಿ ದಾಸೋಹಕ್ಕೆ ಕುಂದನ್ನುಂಟುಮಾಡುವವು. ಕಾರ್ಯನಿವೇಶದಲ್ಲಿ ಅಂತಃಕರಣಗಳು ಸ್ಥೂಲವಸ್ತುಗಳನ್ನಾಗಲಿ, ಅವುಗಳ ಸಂಬಂಧದ ಕಾರ್ಯವಿಚಾರವನ್ನಾಗಲಿ ಹಿಡಿಯಬಲ್ಲವು; ಏಕಂದರೆ ಅವುಗಳಿಗೆ ಬಹುಕಾಲದಿಂದ ಸ್ಥೂಲವಸ್ತುಗಳಲ್ಲಿ ಬಳಿಸ್ಯಾಡಿ ಸ್ವಭಾವಗುಣವಾಗಿರುವದು. ಮತ್ತು ಅಂತಃಕರಣಗಳು ಹಿಡಿದ ಸಂಗತಿಯಲ್ಲಿ

ಮನವು ಗುಂಗ್ಗಾಗಿ ಬಿಟ್ಟಿತೆಂದರೆ, ತದ್ವ್ಯತಿರಿಕ್ತವಾಗಿ ಇಂದ್ರಿಯಗಳ ಮುಖದಿಂದ ಯಾವ ಸಂಗತಿಗಳನ್ನೂ ಮನವು ಗ್ರಹಿಸಲಾರದು. ಇವೆರಡೂ ಸ್ವಭಾವಧರ್ಮಕ್ಕನುಸರಿಸಿ, ತನ್ನ ಪರಿಸ್ಥಿತಿಯು ಗುರುಮಯವಾಗಿರುವಂತೆ ಮಾಡಿಕೊಳ್ಳುವದರಿಂದಲೂ, ಅಂತಃಕರಣವು ಗುರುವಿನ ವ್ಯತಿರಿಕ್ತ ಇನ್ನೊಂದು ಸಂಗತಿಯನು ಹಿಡಿಯದಂತೆ ಎಚ್ಚರಪಡುವದರಿಂದಲೂ ಒಂದಕ್ಕೊಂದು ಕಾರ್ಯಕಾರಣರೂಪದಿಂದ ಸಂಬಂಧವಾದ ಅಂತರ್ಬಾಹ್ಯಸಂಗತಿಗಳು ಏಕಾಗಿ, ಮನವು ಸಹಜವಾಗಿ ತನ್ನ ಸ್ವಾಧೀನದಲ್ಲುಳಿಯುವದು. ಪರಿಸ್ಥಿತಿಯು ಗುರುಮಯ ಮಾಡಿಕೊಳ್ಳುವದೆಂದರೆ, ಭಕ್ತರನ್ನೆಲ್ಲ ಗುರುಸ್ವರೂಪದಲ್ಲಿ ಭಾವಿಸಿ, ಸುತ್ತುಮುತ್ತು ಭಕ್ತರೇ ಇರುವ ಸ್ಥಳದಲ್ಲಿ ಕಾಯಕವನ್ನು ನಡಿಸುವದು ತಾನು ಕಾಯಕದಲ್ಲಿ ಉಪಯೋಗಿಸುವ ಪ್ರತಿಯೊಂದು ಮುಟ್ಟೂ (ಆಯುಧವೂ) ಮೈಮೇಲಿನ ಬಟ್ಟೆಗಳೂ, ಮೆಟ್ಟುವ ಜೋಡೂ, ಮನೆಯೊಳಗೆ ಬಳಿಸುವ ಯಾವತ್ತೂ ಒಡವೆಗಳೂ ಭಕ್ತರೇ ಮಾಡಿದಂತಹವುಗಳುವಾಗಿರಬೇಕೇ ಹೊರತು. ಭವಿಯಿಂದ ಅದವುಗಳನ್ನು ಮುಟ್ಟಕೂಡದು, ಬಳಿಸಕೂಡದು. ಒಳಗೂ ಹೊರಗೂ ಈ ರೀತಿ ಬಂಧಿಸಿಕೊಂಡರು,ತನಗೇನೊಂದು ಕೆಲಸವಿಲ್ಲದೆ,ಮನವು ಅವುಗಳ ಬಂಧನದಲ್ಲಿ ಉಳಿಯಲಾರದು. ಕೆಲಸವಿಲ್ಲದ ಮನವು ಏನೊಂದು ತಿಳಿಯದ ಹಾಗೆ,ಎಲ್ಲಿಯೋ ಹೋಗಿ ಬಿಡುವದು. ಆದುದರಿಂದ ಅದನ್ನು ಎಂದೂ ಮುಗಿಯದ ಶಿವಮಂತ್ರಚಿಂತನೆಯಲ್ಲಿ ತೊಡಗಿಸುವದೇ ಮದ್ದು.

ಮಂತ್ರಜಪದಲ್ಲಿ ವಾಚಿಕ ಉಪಾಂಶು, ಮಾನಸಿಕವೆಂದು ಮೂರುಪ್ರಕಾರಗಳಿರುವವಷ್ಟೇ! ಇವುಗಳಲ್ಲಿ ಒಂದಕ್ಕಿಂತ ಒಂದು ಹೆಚ್ಚಿನವಾಗಿರುವವು. ಕಡೆಯದಾದ ಮಾನಸಿಕಜಪವೇ ಶ್ರೇಷ್ಠವಾದುದು. ಏಕೆಂದರೆ ಮೊದಲಿನ ಎರಡು ಜಪಗಳು ಮನವು ಆ ಜಪಾನುಸಂಧಾನದಿಂದ ಎಲ್ಲಾದರು ಜ್ಯಾರಿದ್ದರೂ ನಾಲಿಗೆಯು ನುಡಿಯುತ್ತಿರುವದು; ಆದರೆ ಚಿಂತನೆಯ ಕಾರ್ಯವನ್ನು ನಾಲಿಗೆಯು ಬಿದ್ದರೂ ಮನವು ಮಾಡುತ್ತಿರುವದು ಮೊದಲಿನ ಎರಡು ಪ್ರಕಾರಗಳಿಗೆ ಮಂತ್ರವನ್ನು ಕಿವಿಯಲ್ಲಿ ಊದಿದರೆ ಸಾಕು ಕೆಲಸವಾಯಿತು. ಆದರೆ ಚಿಂತನೆಗೆ ಅಷ್ಟರಿಂದ ಕೆಲಸವಾಗದು.ಶಿವನ ನೆಲೆಯನ್ನು ಕಂಡು ಅವನ್ನು ಅಂಗವಿಸಿಕೊಂಡು ಪ್ರತ್ಯಕ್ಷಶಿವಮೂರ್ತಿಯಾದ ವಸ್ತುವು, ತನ್ನಲ್ಲಿ ಅಂಗವಿಸಿದ್ದುದರ ಅನುಭವವನೆಲ್ಲ ಪ್ರತ್ಯಕ್ಷ ನಡೆನುಡಿಯಿಂದ ಕಣ್ಣೊಳಗೂ ಕಿವಿಯೊಳಗೂ ಕಟ್ಟುವಂತೆ ಮಾಡಿ, ಶಿವಸ್ವರೂಪದ ನಿಜವಾದ ಸ್ಥಿತಿಯು ಅಂತರಂಗದಲ್ಲಿ ಬಿಂಬಿಸಿ,ಅದರಲ್ಲಿ ಪರವಶತೆಯಾಗುವಂತೆ ಮಾಡಬೇಕಾಗುವದು. ಮಂತ್ರದ ನಿಜಸ್ವರೂಪವು ಎಷ್ಟು ಗೊತ್ತಿಲ್ಲದ, ಇಷ್ಟೇ ಅಲ್ಲ! ಅವದಲ್ಲಿರುವ ಐದೇ ಐದು ಅಕ್ಷರಗಳನ್ನು ಸರಿಯಾಗಿ ಉಚ್ಚರಿಸಲಿಕ್ಕೆ ಬಾರದ ಟೊಣಪರು ಮಂತ್ರೋಪದೇಶ ಮಾಡುವದೆಂದರೆ,ಬರೇ ಅದರ ಮಾರಾಟವುಮಾಡುವ ಕೆಲಸವೇ ಸೈ! ಎಲ್ಲೆಲ್ಲಿಲ್ಲ ಇಂತಹವರೇ ತುಂಬಿತುಳುಕು

ತ್ತಿರುವರು. ಇಂತಹವರ ಉಪದೇಶದಿಂದ ಆತ್ಮನ ಮೇಲೆ ಏನೊಂದು ಪರಿಣಾಮವಾಗದು; ಏಕಂದರೆ ಇಂತಹವರ ಮಂತ್ರೋಪದೇಶಕ್ಕೆ ಒಳಪಟ್ಟಮಾತ್ರದಿಂದ ನಾಲಿಗೆಯು ಮಂತ್ರವನ್ನು ವಟವಟಿಸುವದಾಗುವದು; ಕರಾಂಗುಲಿಗಳು ಜಪಮಾಲಿಕೆಯೊಳಗಿನ ಒಂದೊಂದೇ ಮಣಿಗಳನ್ನು ಸರಿಸುವವಾಗುವವು. ಆದರೆ ಮನವು, ಆತ್ಮರ ಚಿತ್ತವೃತ್ತಿಯು ಯಾವ ವಿಷಯದಲ್ಲಿ ನೆಟ್ಟುಬಿಟ್ಟಿರುವದೋ, ಅದನ್ನು ಚಿಂತಿಸುವದಾಗುವದು. ಪ್ರತಿಯೊಂದು ವ್ಯಕ್ತಿಯು ಮಾತಾಡಿದ್ದುದರ ನಿಜವಾದ ಅರ್ಥವು ಅವರ ಮನದಲ್ಲಿ ( ಹೃದಯದಲ್ಲಿ ) ಚಿಂತನರೂಪದಿಂದಿರುವದು. ಆ ವ್ಯಕ್ತಿಯ ಮನದ ಇಂಗಿತವನರಿಯದೆ ಬರೇ ಕಿವಿಗೆ ಬಿದ್ದ ಶಬ್ದಗಳ ಅರ್ಥವನ್ನು ವಿವರಿಸುವದರಿಂದ ಪೂರ್ಣಕೆಲಸವಾಗಲಿಲ್ಲ; ಇಷ್ಟೇ ಅಲ್ಲ! ಅನರ್ಥವನ್ನು ಕಟ್ಟಿಕೊಂಡಂತಾಗುವದು. ಅನ್ಯವಿಷಯದಲ್ಲಿ ಚಿತ್ತವೃತ್ತಿಯನೆಲ್ಲ ತೊಡಗಿಸಿ, ಬರೆ ನಾಲಿಗೆಗೆ ಶಿವಮಂತ್ರವನ್ನು ವಟಗುಡಲಿಕ್ಕೆ ಹಚ್ಚಿದರೆ, ಅದು ಶಿವಮಂತ್ರವಾಗಲಿಲ್ಲ.! ಅವನು ಹೃದಯದಲ್ಲಿ ಹಿಡಿದ ವಿಷಯದ ಮಂತ್ರವಾಗಿರುವದು. ಏಕಂದರೆ ಆ ವ್ಯಕ್ತಿಯು ಆ ಮಂತ್ರದಲ್ಲಿದ್ದ ಅಕ್ಷರಗಳನ್ನು ಅದೇ ಅರ್ಥದಲ್ಲಿ ಪ್ರಯೋಗಿಸುತ್ತಿರುವನು. ಶಿವನ ನಿಜಸ್ವರೂಪವು ಪ್ರತ್ಯಕ್ಷ ಕಣ್ಣಿಗೆ ಕಟ್ಟಿದಂತೆ ಆಗಿ, ತತ್ಸ್ವರೂಪದಲ್ಲಿ ಆತ್ಮರು ತಮ್ಮನ್ನು ಮರೆಯುವಂತೆ ಮಾಡಿದ ಹೊರತು, ಆತ್ಮರಿಗೆ, ನಿಜಬೋಧೆಯನ್ನು ಮಾಡಿದಂತೆ ಆಗಲಿಲ್ಲ. ಈ ರೀತಿ ಮಾಡುವವೇ ವೇಧಾದೀಕ್ಷೆಯಾಗಿರುವದು. ಸಹಜಅಧಿಕಾರವಿಲ್ಲದೆ ವಿಧಾನಪೂರ್ವಕವಾಗಿ ಮಾಡಬಲ್ಲವರು ತಮ್ಮ ಅಭಿಮಾನವನ್ನು ಬೋಧಿಸುವರಲ್ಲದೆ, ಶಿವಸ್ವರೂಪವು ಎಲ್ಲಿಯೋ ಉಳಿದು ಬಿಟ್ಟಿರುವದು. ಏಕಂದರೆ ಆ ವಿಧಾನ ಹೇಳುವವರ ಹೃದಯಸ್ಥವಾದ ಅಧಿದೇವತೆಯು ಅವರವರ ಅಭಿಮಾನವಾಗಿರುವದು. ದೀಕ್ಷೆಯಲ್ಲಿ ಪ್ರಾಮುಖ್ಯವಾಗಿ ಮಾಡುವದೆಂದರೆ, ದೀಕ್ಷೆಗೆ ಒಳಪಡುವ ಆತ್ಮರನ್ನು ನಿಜವಾದ ಶಿವಸ್ವರೂಪದಲ್ಲಿ ತನ್ನ ಶಕ್ತಿಯಿಂದ ಬೆರಗುಮಾಡೋಣ. ಈ ರೀತಿ ನಿಜಸ್ವರೂಪದಲ್ಲಿ ಬೆರಗುಮಾಡಬಲ್ಲವನು, ತಾನು ಯಾವರೀತಿಯಲ್ಲಿ ಅವನನ್ನು ಬೆರಗುಮಾಡುವನೋ, ಆ ರೀತಿಯೇ ವಿಧಾನವಾಗಿರುವದು. ಅಂತರಂಗದಲ್ಲಿ ಒಂದೊಂದು ವಿಷಯವನ್ನು ಕಟ್ಟಿಕೊಂಡು ಮೂರೇಳುಪ್ರಕಾರದ ವಿಧಾನಗಳನ್ನು ಮಾಡುವದು, ಒಂದುನಾಟಕವಾಗಿರುವದು. ನಿಜದ ನೆಲೆಗಂಡು ನಿಜಮೂರ್ತಿಯಾದ ಸಹಜಅಧಿಕಾರಸಂಪನ್ನವಾದ ವಸ್ತುವು ದೊರೆತ ಹೊರತು, ನಿಜಬೋಧೆಯನ್ನು ತೆಗೆದುಕೊಳ್ಳುವ ಹಾಳು ಉಸಾಬರಿಗೆ ಬೀಳದಿರುವದೇ ಒಳಿತಾದುದು. ಏಕಂದರೆ ದೀಕ್ಷೆಯಲ್ಲಿ ಇದ್ದ ದೆವ್ವವನ್ನು ಬಿಡಿಸಿ ನಿಜಸ್ವರೂಪದಲ್ಲಿ ತಂದಿರಿಸುವದಿರುವದು; ಇದು ಒತ್ತಟ್ಟಿಗುಳಿದು, ಅನಧಿಕಾರಿಯು ವೇಧಾದೀಕ್ಷೆಗೆಂದು ತಲೆಯಮೇಲೆ ಕೈಯಿಡಲೊಡನೆಯೇ ಅವನಲ್ಲಿದ್ದ ಮತ್ತೊಂದು ದೆವ್ವವು ಬಡಿದುಕೊಳ್ಳುವದು. ಅಂದ ಬಳಿಕ ಶಿವಸ್ವರೂಪವು ಎಲ್ಲಿ ಉಳಿಯಿತು? ಗುರುವರ್ಗದವರು ಪಜಾ

ವುರಿಗಿಂತ ಕಡೆಯಾಗಿರುವರೆನ್ನಲಿಕ್ಕೆ, ಹಡಪದವರು ಭವಿಗಳ ತಲೆಗಳನ್ನೂ ಬೋಳಿ
ಸಹತ್ತಿರುವದೂ, ಹಜಾಮರು ಭಕ್ತರ ತಲೆಗಳನ್ನೂ ಬೋಳಿಸಹತ್ತಿರುವದೂ
ಸಾಕ್ಷಿಯಾಗಿವೆ. ಕುಲದಭಿಮಾನಕ್ಕೆ ಬಿದ್ದು, ಹಡಪದವರು ಭವಿಗಳ ತಲೆಯ
ನ್ನು ಹಿಡಿಯಹತ್ತುವಂತೆ ಮಾಡಿದ್ದೇ ಅಯ್ಯಗಳು ಅನಧಿಕಾರಿಗಳಾದುದರ ಕುರು
ಹಾಗಿರುವದು. ವೇಧಾದೀಕ್ಷೆಯು ಪರಿಣಾಮವು ಆತ್ಮರ ಮೇಲೆ ಏನೊಂದು ಆಗ
ದಿದ್ದರೆ ದೀಕ್ಷೆಯನ್ನೇ ಮಾಡಿದಂತಾಗಲಿಲ್ಲ! ಮನೋರೂಪಿಯಾಗಿ ಮನಸಿಗೂ
ತಮಗೂ ಏನೊಂದು ಭೇದವಿಲ್ಲದಿರ್ಪ ಆತ್ಮರಮೇಲೆ ಸಂಸ್ಕಾರವಾದುದರ ಕುರು
ಹು ಮನಸಿನ ಮೇಲೆ ಸಂಸ್ಕಾರವಾದುದಾಗಿರುವದು. ಇದು ಆತ್ಮರಿಗೆ ಭೇದಿಸಿದ
ಹೊರತು, ಮನದಲ್ಲಿ ನಡುವದಿಲ್ಲ. ಮನದಲ್ಲಿ ನಟ್ಟ ಹೊರತು ಕ್ರಿಯೆಗೆ ತರುವ
ದಾಗುವದಿಲ್ಲ ಆತ್ಮರು ಕಾರಣತನುವಿನೊಂದಿಗೆ ವ್ಯವಹರಿಸುವ ಸಹಜಸ್ವಭಾವದವ
ರಾಗಿರುವರು. ಆದ್ದರಿಂದ ಕಾರಣತನುವಿಡಿದು ನಿದ್ರೆಯಲ್ಲಿದ್ದ ಆತ್ಮರು ಕನಸಿನಲ್ಲಿ
ಆ ಕಾರಣತನುಸಹಿತವಾಗಿ ಸೂಕ್ಷ್ಮತನುವಿನಲ್ಲಿರುವರು. ಕನಸಿನಲ್ಲಿ ಕಾರಣತನು
ಸಹಿತವಾಗಿ ಸೂಕ್ಷ್ಮತನುವಿಡಿದಾಚರಿಸುವ ಆತ್ಮರು, ಜಾಗ್ರದಲ್ಲಿ ಕಾರಣತನುಸಹಿ
ತವಾಗಿ ಸೂಕ್ಷ್ಮತನುವಿಡಿದು ಸ್ಥೂಲಕಾಯದಲ್ಲಿರುವರು. ಆದುದರಿಂದ
ಆತ್ಮರು ಕಾರಣತನುವಿಡಿದಿರುವದು ಯಾವ ಅವಸ್ಥೆಗಳಲ್ಲಿಯೂ ಚ್ಯುತಿಯಾಗದೆ
ಅಖಂಡವಾದುದಾಯಿತು. ಈ ಅಖಂಡ ತನುವಿಗೆ ಭೇದಿಸುವಂತೆ ಮಾಡದ ಉ
ಪದೇಶವು ಏತಕ್ಕೆ ಬೀಳುವದು? ಇದಿಲ್ಲದೆ ಬರೇ ತಲೆಯಮೇಲೆ ಹಸ್ತವಿಟ್ಟು,
ಕಿವಿಯಲ್ಲಿ ಬರೆ ಐದಕ್ಷರಗಳನ್ನು ಊದಿ ಮಾಡಿದ ಮಂತ್ರದೀಕ್ಷೆಯೂ, ಕರದಲ್ಲಿ
ಇಷ್ಟವಕೊಟ್ಟು ಮಾಡಿದ ಕ್ರಿಯಾದೀಕ್ಷೆಯೂ ಉಪಯೋಗವಾಗವು. ಅನಧಿ
ಕಾರಿಗಳು ವಿಧಾನಪೂರ್ವಕ ಮಾಡುವ ಉಪದೇಶದಿಂದ ಆತ್ಮರಿಗೆ ಸಂಸ್ಕಾರವಾ
ಗುವದೆಂದು ಅನ್ನುತ್ತಿದ್ದರೆ, ಹಾದಿಕಾರರು ಬೇಸಿಗೆಯ ತಾಪಕ್ಕೆ ಮೈಮೇಲಿನ ಒಲ್ಲೆ
ಯನ್ನು ನೀರಲ್ಲಿ ಹಿಂಡಿ, ಡುಬ್ಬದಮೇಲೆ ಹಾಕಿಕೊಂಡು ದಾರೀ ಹಿಡಿದ ಪರಿಯಲ್ಲಿ
ವಿಧಾನಕಾಲದಲ್ಲಿ ಮಾತ್ರ ಆಗುತ್ತಿರಬಹುದು. ಹಿಂದಿನಿಂದ ಅದೂ ಒಂದು ಕನ
ಸಿನ ಪರಿಯಾಗಿ ಕಾರ್ಯನಿವೇಶದಲ್ಲಿ ಮರೆತುಹೋಗುವದು. ಏಕಂದರೆ ಆತ್ಮ
ರು ತಮ್ಮ ಭಾವದಲ್ಲಿ ಮೂಡಿದ ಸಂಗತಿಗಳಲ್ಲಿ ಯಾವಾಗಲು ಕಾರಣತನುಸಹಿ
ತವಾಗಿ ಗುಂಗಾಗಿರುವರು. ಒಳ್ಳೇ ಜೀವ ಹರಿದು ಮಾಡಿಸಿದ ಪಕ್ವಾನ್ನವನು
ಪೂರಾ ಉಣ್ಣುವ ವರೆಗೆ ಆತ್ಮರು ತಮ್ಮ ಮೂರೂ ತನುಗಳಿಂದ ಇರಬಲ್ಲರೆ, ಇಂತ
ಹ ಅನಧಿಕಾರಿಗಳು ಈ ವಿಧಾನಪೂರ್ವಕವಾಗಿ ಮಾಡುವ ದೀಕ್ಷೆಯಲ್ಲಿ ಇರ
ಬಹುದು. ಊಟಕೂಟಗಳಲ್ಲಿಯೂ ಸಹ ಕಡೆತನಕ ತಮ್ಮ ಮೂರು ತನುವಿ
ಡಿದು ಉಳಿಯದ ಆತ್ಮರು ಇಂತಹ ಅನಧಿಕಾರಿಗಳ ದೀಕ್ಷಾಕಾಲದಲ್ಲಿ ಕಡೆತನಕ
ಉಳಿದಾರೆಂದು ಎಂದೂ ಊಹಿಸಲಿಕ್ಕಾಗದು. ಏಕಂದರೆ ಊಟಕೂಟಗಳಲ್ಲಿ
ಆತ್ಮರು ತಮ್ಮ ಐದೂ ಇಂದ್ರಿಯಗಳ ಪರಿಪೂರ್ಣವಾದ ಭೋಗಸುಖದಲ್ಲಿ ಇರು

ವ ಸಂಭವವು ಹೆಚ್ಚಿರುವದು. ಆತ್ಮರು ಮಾಡಿದುದೆಲ್ಲ ಇವೆರಡೇ ಇಂದ್ರಿಯ ಸುಖಕ್ಕಾಗಿ, ಹೊಟ್ಟೆಗಾಗಿ ಬಟ್ಟೆಗಾಗಿ ಎಂದು ಹೇಳುವದು ಉಪಚಾರದ ಮಾತಾಗಿರುವದು. ಹೊಟ್ಟೆಗಾಗಿಯೇ ತಿನ್ನುವವನಾಗಿದ್ದರೆ ದನಗಳ ಹಾಗೆ ಹಾಕಿದ್ದನ್ನು ತಿಂದು ಹೊಟ್ಟೆತುಂಬಿಕೊಳ್ಳುತ್ತಿದ್ದನು. ನೀಡಿದ್ದರೊಳಗೆ ಏನೂ ಆರಿಸುತ್ತಿದ್ದಿಲ್ಲ! 'ಊಟದಲ್ಲಿ ಆರಿಸುವ ಆತ್ಮರಿಗೆ ಪ್ರಸಾದದನುಸಂಧಾನವು ಎಂದೂ ಸ್ಥಿರಪಡಲಾರದೆಂದು ಅನುಭವಿಗಳು ಹೇಳುವ ಮಾತು ಇದಕ್ಕಾಗಿಯೇ. ಅಂತವೆಗಾಗಿಯೇ ಇರುತ್ತಿದ್ದರೆ, ಊಟಕಾಲದಲ್ಲಿ ಆತ್ಮರು ಗೇಣು ಬಿಟ್ಟು, ಅದರೊಳಗಿನ ಒಂದು ಎಳೆಯನ್ನೂ ಸಹ ಅಪೇಕ್ಷಿಸುವದಿಲ್ಲ. ಈ ಮಾತು ಮನುಷ್ಯೇತರಪ್ರಾಣಿಗಳನ್ನು ನಿರೀಕ್ಷಿಸಿದರೆ ತಾನೇ ವ್ಯಕ್ತವಾಗುವದು- ವೇಧಾದೀಕ್ಷೆಯ ಪರಿಣಾಮವು ಪರಿಪೂರ್ಣವಾದರೆ ಆತ್ಮರು ತಮ್ಮ ಮೂರೂ ತನುಗಳಿಂದ ಗುರುವಿನ ವಶವರ್ತಿಯಾಗಿ, ಉಳಿದ ಎರಡೂ ತನುಗಳ ದೀಕ್ಷೆಯು ಪರಿಣಮಿಸಿ, ಅವರು ಕಾಯಕವನ್ನು ಆಚರಿಸಲು ತಕ್ಕವರಾಗುವರು. ದೀಕ್ಷೆಯ ಮಾಡುವದೆಂದರೆ ಬರೆ ವಿಧಾನ ಹೇಳಿ ಹಾಸೀಲು ತಕ್ಕೊಂಡು ಹೋಗುವದಲ್ಲ! ಹೀಗೆ ಮಾಡುವವರೆಲ್ಲರೂ, ಮಾತಾಡಿಸುತ್ತ ಕಿಸೆಯನ್ನು ಕತ್ತರಿಸುವ ಠಕ್ಕರಿಗಿಂತ ಠಕ್ಕರು. ದೀಕ್ಷೆಯನ್ನು ಹೊಂದುವವನು ತನ್ನೊಳಗೆ ಇದ್ದುದನೆಲ್ಲ ನೀಡದ ಹೊರತು, ಬರೆಮನಿಯಾಗಿ ಜೋಳಿಗೆಗೆ ಅಧಿಕಾರಿಯಾಗಲಿಲ್ಲ. ಗುರುವು ತನ್ನ ಶಕ್ತಿಪಾತಪ್ರಯೋಗದಿಂದ ಉಪದೇಶವನ್ನು ಮಾಡಿ ತನ್ನ ದಿವ್ಯಕಿರಣಗಳ ಯೋಗದಿಂದ ಶಿಷ್ಯನು ನೀಡಿದ ತನು ಕರಣಾದಿಗಳನ್ನು ಸ್ವೀಕರಿಸಿ, ತನ್ನ ಪರಿಶುದ್ಧವಾದ ಕರಣಜ್ಞಾನಪ್ರಸಾದಗಳನು ಶಿಷ್ಯನಿಗೆ ನೀಡಿದ ಹೊರತು, ತನ್ನ ಕೆಲಸವನ್ನು ಪೂರ್ಣಮಾಡಿದಂತಾಗಲಿಲ್ಲ. ಈ ಕಾರ್ಯವು ಒಮ್ಮೆಲೆ ಆಗತಕ್ಕುದಲ್ಲ. ವೇಧಾದೀಕ್ಷಾಧಿಕಾರಸಂಪನ್ನನಾದ ಸದ್ಗುರುವು ತನ್ನ ಶಕ್ತಿಪಾತಪ್ರಯೋಗದಿಂದ ಶಿಷ್ಯನ ಆತ್ಮನ ಮೇಲೆ ನಿಜಸ್ವರೂಪವು ಪರಿಣಮಿಸುವಂತೆ ಮಾಡಿ ಅವನ ತನುಕರಣಾದಿಗಳಿಂದ ತನ್ನ ಜೋಳಿಗೆಯನ್ನು ತುಂಬಿಸಿಕೊಂಡ ಬಳಿಕ, ಶಿಷ್ಯನ ಯೋಗ್ಯತೆಯನ್ನೂ ಸಮಾಜದಲ್ಲಿದ್ದ ಕುಂದುಕೊರತೆಗಳನ್ನೂ ಲಕ್ಷಿಸಿ, ತಾನು ಕರುಣಿಸಿದ ಕರಣಗಳ ಯೋಗದಿಂದ (ಶಿಷ್ಯನ ತನುಕರಣಾದಿಗಳ ದೋಷಗಳನ್ನು ತೊಳೆದುಕೊಳ್ಳಲು, ನಿಜತನುಕರಣಾದಿಗಳ ನಿಜಸ್ವರೂಪವನ್ನು ಇಂದ್ರಿಯಂಗಳಲ್ಲೆಲ್ಲ ನಡುವಂತೆ ಮಾಡಿ, ಆ ಅರುಹಿನ ಯೋಗದಿಂದ ) ತಾನುಕೊಟ್ಟ ಕಾಯಕದಲ್ಲಿ ಗುರುಲಿಂಗಜಂಗಮದ ದಾಸೋಹವನ್ನು ನಡಿಸಲು ಬರುವಂತ ಮಾಡುವದಿರುವದು.

ಜನ್ಮಜನ್ಮಾಂತರದ ಸಂಸ್ಕಾರವು ಬಲು ದೊಡ್ಡದೂ ಕಸುವಿನದೂ ಆಗಿರುವದು. ಆತ್ಮರ ವಿವೇಕಕ್ಕೆ ತಮ್ಮಲ್ಲಿ ವ್ಯಯುಂಟಾದ ದೋಷಗಳು ತಮಗೆ ಗೊತ್ತಾಗುತ್ತಿದ್ದರೂ, ಅವುಗಳನ್ನು ಪರಿಹರಿಸಿಕೊಳ್ಳಬೇಕೆಂದು ಅವರು ಪ್ರಯತ್ನಿಸುತ್ತಿದ್ದರೂ, ಅವರ ವಿವೇಕವನ್ನೂ ಪ್ರಯತ್ನಗಳನ್ನೂ ತಳ್ಳಿಬಿಟ್ಟು, ತನ್ನದನ್ನೇ ಮೇ

ಉಮಾಡಿ, ತನ್ನ ಬಲೆಯೊಳಗೆ ಕೆಡವಿಕೊಳ್ಳುತ್ತಿರುವದು. ಸಿದ್ಧಿಯ ಕಸುವು ಹೆಚ್ಚಾಗಿ ಸಂಸ್ಕಾರದ ಕಸುವು ಕಡಿಮೆಯಾಗುವವರೆಗೂ, ಸತ್ಸಂಗದಲ್ಲಿರಬೇಕೆಂದು ಅನುಭವಿಕರು ಹೇಳುವ ಮಾತಿನ ಇಂಗಿತವಾದರೂ ಇದೇ. ಬಸವಣ್ಣನು ಕರಣೇಂದ್ರಿಯಗಳ ಸ್ವಾಭಾವಿಕವಾದ ಗುಣಧರ್ಮಗಳನ್ನರಿತು, ಅವುಗಳಿಗನುಸರಿಸಿ ಅವುಗಳನ್ನು ಗುರುಲಿಂಗಜಂಗಮದ ದಾಸೋಹಕ್ಕೆ ಯೋಜಿಸಿದನು ಆದರಿಂದ ಅಂತರಂಗದ ತನುಕರಣಾದಿಗಳಿಗೆ ಬಾಹ್ಯಸಂಗತಿಗಳ ಕಡೆಗೆ ಹರಿಯಲು ತೆರವು ದೊರೆಯದಾಯಿತು. ಆದರೂ ಒಳಗಿನ ಈ ಕೀಲವು ತಪ್ಪದಂತೆ ಹೊರಗಿನ ಸಂಗತಿಗಳನ್ನು ಭದ್ರಪಡಿಸಿಕೊಳ್ಳಬೇಕಾಯಿತು. ಏಕೆಂದರೆ ಸಂಸ್ಕಾರದ ಬಲವಾದ ಕಸುವಿನ ದೋಷವು ಈ ಕೀಲದ ಆಟವನ್ನು ನಡೆಯಗೊಡಲಾರದು. ಆತ್ಮರಿಗೆ ಹೀನಸಂಸ್ಕಾರವು ಲಿಂಗಬಾಹ್ಯವಾದ ವ್ಯಾಪಾರದಿಂದ ಉಂಟಾಗಿರುವದು. ಏಕೆಂದರೆ ಅಂತರಂಗದಲ್ಲಿ ಮನಕ್ಕೂ, ಭಾವಕ್ಕೂ ಸಂಬಂಧವಿರುವಂತೆ, ಬಹಿರಂಗದಲ್ಲಿ ಕಾರ್ಯಕ್ಕೂ ಮನಕ್ಕೂ ಸಂಬಂಧವಿರುವದು. ಆದುದರಿಂದ ಮನವು ಭಾವದಿಂದ ಬಂದುದುದನೂ, ಕಾರ್ಯದಿಂದ ಬಂದುದುದನೂ ತನ್ನಲ್ಲಿ ಸಂಗ್ರಹಿಸಿ, ಅವುಗಳ ಕೊರತೆಯನ್ನು ಪೂರಯಿಸುತ್ತ ಸಮಗೊಳಿಸುತ್ತಿರುವದು; ಅಂದರೆ ಭಾವದಿಂದ ಬಂದುದನು ಕಾರ್ಯಕ್ಕೂ, ಕಾರ್ಯದಿಂದ ಬಂದುದನು ಭಾವಕ್ಕೂ ತುಂಬುತ್ತಿರುವದು; ಅಲ್ಲದೆ ತನ್ನಕೂಡ ತನ್ನಂತೆ ಆಗಿ, ಏನೊಂದು ಭೇದವಿಲ್ಲದೆ ತನ್ನಲ್ಲಿ ಕೂಡಿಕೊಂಡ ಆತ್ಮನು, ತನ್ನ ಸಂಗ್ರಹಸಂಚಯದಿಂದ ಯಾವಾಗಲು ಸಂಸ್ಕರಿಸುತ್ತಿರುವದು. ಇಷ್ಟಾನಿಷ್ಟಸಂಸ್ಕರಣಗಳಿಂದ ಆತ್ಮರ ಜಡಾಜಡತತ್ತ್ವಗಳು ಹಿಂಗುತ್ತಿರುವವು; ಅದರಿಂದ ಮನವೇ ಆತ್ಮರ ಬಂಧನಕ್ಕೂ ಬಿಡುಗಡೆಗೂ ಕಾರಣವಾಗಿರುವದು. ಆತ್ಮರು ಸೃಷ್ಟಿಯ ಆದಿಕಾಲದಿಂದ ಅನಿಷ್ಟಪರಿಸ್ಥಿತಿಯಲ್ಲಿಯೇ ಬೆಳೆಯುತ್ತಿರುವರು. ಕಾರಣ ಬರೇ ಅಂತರಂಗದ ಸಕೀಲವು ಸಾಧಕರಿಗೆ ಬಲವಾದ ಸಾಧನವಾಗಲಾರದು. ಇಷ್ಟೇ ಅಲ್ಲ! ತಾನೇ ಕೆಟ್ಟುಹೋಗುವ ಸಂಭವವೇ ಹೆಚ್ಚು. ಒಂದೇ ಸವನೆ ಕೂಡಬಿದ್ದು ಬೆಳೆಯುತ್ತಿರುವ ಲೋಕದ ಸೆಳವಿನ (ಓಘದ) ಪ್ರವಾಹದಪ್ರಭಾವವೇ ಅಂತಹದ್ದಾಗಿರುವದು. ಅದು,ಸಾಧಕನವೃತ್ತಿಯವರನು ಅಷ್ಟೇ ಏಕೆ! ದೇಹವನ್ನು ಹಿಡಿದು ಆಚರಿಸುವ ಪ್ರತ್ಯಕ್ಷ ತ್ರಿಮೂರ್ತಿಗಳನ್ನೂ ಎಲ್ಲಿಗೆ ಒಯ್ದು ಎಲ್ಲಿಗೆ ಚಲ್ಲೀತೆಂಬ ನಿಯಮವಿಲ್ಲ. ಈಗನಕ ಈ ವಿಕಾರಸಂಗ್ರಹವು ಮಿತಿಮೀರಿ ಬೆಳೆದು ನಿಂತಿರುವದು. ಈ ಸಮಯದಲ್ಲಿ ಪ್ರಕಟವಾಗಿ, ಜಗದ್ವ್ಯಾಪಕಕ್ರಿಯಾಮೂರ್ತಿಯಾಗಿ ವ್ಯಕ್ತಾವ್ಯಕ್ತರೀತಿಯಿಂದ ಲೋಕಕಲ್ಯಾಣವನ್ನು ಮಾಡಲುನಿಂತ, ಚೆನ್ನಲಿಂಗನ ಶಕ್ತಿಪಾತದ ನಿಜಸೂತ್ರ ಸಂಬಂಧವಿಲ್ಲದೆ, ಯಾರಿಂದಲೂ ಸಹಜವಾದ ಲಿಂಗಸಮಾಧಿಯಲ್ಲಿ ಕೂಡಿಕೊಳ್ಳಲು ಶಕ್ಯವೇ ಇಲ್ಲ! ಅಂತಹ ಪರಿಸ್ಥಿತಿಯನ್ನು ಲೋಕವು ತಾನಾಗಿಯೇ ತನ್ನ ಕರ್ಮದಿಂದ ಪಡೆದುಕೊಂಡಿರುವದು. ಲೋಕದ ಸ್ಥಿತಿ

ಯು, ನಿಜಸೃಷ್ಟಿಯಿಂದ ಕಿಚ್ಚಿನೊಳಗಿನ ಕೀಡಿಗುಂತೆ ಆಗಿರುವದು. ಎಲ್ಲಿಯು ವರೆಗೆ ಲೋಕವು ಬೆಂದು ಬೆಂಡಾಗಿ, ತನ್ನ ಉಪಾಯುಗಳೆಲ್ಲ ನಿಂತ ? ಏಕಭಾವ ದಿಂದ ಕೂಡಿಕೊಂಡು ಲಿಂಗದ ಮೊರೆಯನ್ನು ಬೀಳಲಾರದೋ, ಅಲ್ಲಿಯುವರೆಗೆ ನಿಗ್ರಹವು ಹೆಚ್ಚಾಗುತ್ತ ಹೋಗುವದೇ. ಲಿಂಗಪವಾಡದ ಕ್ಷೇತ್ರವು ಬೆಳೆದು ಲೋಕವನ್ನು ತನ್ನಲ್ಲಿ ಒಳಕೊಳ್ಳುವ ಸಾಮರ್ಥ್ಯವುಳ್ಳದ್ದಾಗಲು, ಲಿಂಗವು ಲೋಕವನ್ನು ಆ ಕ್ಷೇತ್ರಕ್ಕೆ ಒಳಪಡಿಸಿ, ಲೋಕದ ವಿಕಾರವನ್ನೆಲ್ಲ ಸುಟ್ಟು, ತನ್ನ ನಿಜಸೂತ್ರಕ್ಕೆ ಯೋಜಿಸಿಕೊಂಡರೂ, ಆತ್ಮರು ತಮ್ಮ ಸಂಸ್ಕಾರದೋಷವನ್ನೇನು ತೊಳಕೊಳ್ಳುವದು ತಪ್ಪಿದ್ದಲ್ಲ! ಆದುದರಿಂದ ಮುಂದೆ ಹೇಳುವ ನುಡಿಯು ಅಬಾಧಿತ ವಾದುದು.

ಲೋಕದವರು ಸತ್ಸಂಗವನ್ನು ಮಾಡು ಎಂದು ಹೇಳುವ ಅನುಭವೋಕ್ತಿಯಾದರೂ, ನಿರ್ದೋಷವಾದುದಲ್ಲ! ಏಕೆಂದರೆ ಅವರು ಇಲ್ಲಿಯುವರೆಗೆ ದುಡಕೊಂಡ ರೀತಿಯೂ, ಆ ರೀತಿಯಿಂದ ಕಂಡುಕೊಂಡ ಕಡೆಯ ಮೆಟ್ಟೂ ಪರಿಪೂರ್ಣವಾದವಲ್ಲ ! ಅವು ಪರಿಪೂರ್ಣವಾದವಾಗಿದ್ದರೆ, ಲೋಕಕ್ಕೆ ಈ ಅನಿಷ್ಟವು ಸಂಭವಿಸುತ್ತಿರಲಿಲ್ಲ! ಆದರೆ ಮಾನವನು ಲಿಂಗದ ಹಂಗಿನಲ್ಲಿರದೆ, ತಾನು ಸ್ವತಂತ್ರವಾಗಿ ಎಷ್ಟು ಕಾರ್ಯವನ್ನು ಮಾಡಿತೋರಿಸಲು ಸಮರ್ಥನೋ, ಅಷ್ಟನ್ನೆಲ್ಲ ಮಾಡಿ ಮನಗಂಡುದಾಯಿತು. ಹೀಗೆ ಮನಗಾಣುವದಕ್ಕಾಗಿಯೇ ಪರಮಾತ್ಮನು ಅದರ ಇಚ್ಛೆಯಲ್ಲಿಯೇ ಅದರ ಬೆನ್ನು ಹತ್ತಿ ಅನುಗ್ರಹಿಸಬೇಕಾಯಿತು. ಹಾಗಲ್ಲದೆ ಲೋಕವು ಸೃಷ್ಟಿಯ ಸ್ವಾಭಾವಿಕಧರ್ಮದಲ್ಲಿ ತಾನಾಗಿಯೇ ಲಿಂಗದ ಹಂಗಿಗೊಳಪಡಲಾರದು. ಈಗ ಲೋಕದಲ್ಲಿ ಲಿಂಗದ ಹೊರತು ಯಾವ ದೇವರೂ ಉಳಿದಿರುವದಿಲ್ಲ. ಇದ್ದರೂ ಈ ವಿಕಾರದಲ್ಲಿ ಅವರ ಸತ್ತ್ವವೆಲ್ಲ ನಿಂತುಹೋಗಿರುವದು. ತ್ರಿಮೂರ್ತಿಗಳೂ ಮೊದಲುಗೊಂಡು ಎಲ್ಲ ಆತ್ಮರು ಸತ್ತ್ವಹೀನರಾದ ಹೊರತು, ಲಿಂಗಕ್ಕೆ ಮೊರೆ ಬೀಳುವ ಪ್ರಸಂಗವು ಬರಲಾರದು. ಏಕಂದರೆ ಯಾವದೊಂದು ದೇವತೆಯಲ್ಲಿ ತುಸು ಸತ್ತ್ವವು ಉಳಿದದ್ದಾದರೆ, ತನ್ನನ್ನು ನಂಬಿ ನಡೆಯುವ ಆತ್ಮರುಗಳನ್ನೆಲ್ಲ ತನ್ನ ಕೈಲಾದಷ್ಟು ಉಂಟಾಗುತ್ತಿರುವ ಕಷ್ಟದಿಂದ ದೂರಮಾಡಲು ಹೆಣಗಾಡಬೇಕಾಗುವದು. ಲಿಂಗವ ಬಿಟ್ಟು ಯಾವ ದೇವರ ಹೆಸರಲೆ ಶಂಖವಾದ್ಯಮಾಡಿದರೂ, ಅವುಗಳಿಂದೇನು ಆಗುವಂತಿಲ್ಲ! ಬಹಳವಾದರೆ ಅವೂ ನಮ್ಮ ಕೂಡ ಕಷ್ಟಸೋಸಲು ಪಾಲುಗೂಡುವವಾಗಿರುವವು. ಲೋಕಹಿತ ಮುಂದಾಳುಗಳೆಲ್ಲ ದೇವಕೋಟಿಯೊಳಗಿನ ಆತ್ಮರುಗಳೇ ! ಈ ಮುಂದಾಳುಗಳಲ್ಲಿ ಆತ್ಮಿಕಬಲದ ಹೊರತು ಯಾವ ಸತ್ತ್ವವೂ ಉಳಿದಿರುವದಿಲ್ಲ. ಕಣ್ಣಿ ಮುಂದೆ ಪ್ರತ್ಯಕ್ಷವಾಗಿ ಪ್ರಯೋಗದಿಂದ ಮನವರಿಕೆಯಾಗುತ್ತಿರುವ ಸಂಗತಿಗಳನ್ನು ತತ್ತ್ವದೃಷ್ಟ್ಯಾ ವಿಚಾರ ಮಾಡಹೋಗುವದು, ಕೈಯಲ್ಲಿ ಕನ್ನಡಿ ಯಿದ್ದು, ನನ್ನ ಮೋರೆಗೆ ಮಸಿಹತ್ತಿರುವದೇನೆಂದು ಮುಂದಿಯನು ಕೇಳುತ್ತ ತಿರು

ಣಾಡಿದಂತಾಗುವದು. ಇರಲಿ, ಈ ವಿಚಾರವು ಇಷ್ಟಕ್ಕೆ? ಕನ್ನಡಿಯನ್ನು ನೋ
ಡಿಕೊಂಡು ಮನವರಿಕೆಮಾಡಿಕೊಂಡಂತೆ ; ಈ ಪ್ರತ್ಯಕ್ಷ ಪ್ರಯೋಗಗಳಿಂದ ಲೋ
ಕದವರು ಇಲ್ಲಿಯ ವರೆಗೆ ಕಂಡುಕೊಂಡ ರೀತಿಯೂ, ಆ ರೀತಿಯಿಂದ ಕಂಡು
ಕೊಂಡ ಕಡೆಯುಮೆಟ್ಟ್ಲೊ ಪರಿಪೂರ್ಣವಾದವುಗಳಲ್ಲೆಂದು ನಂಬಿ, ಮುಂದಿನ ನಿಜ
ಮೆಟ್ಟಿಗೆ ಹಾರುವ ನಿಜಮಾರ್ಗದ ಕಡೆಗೆ ತಿರುಗುವಾ.

ಕಟ್ಟಿಗೆಯೊಳಗಿನ ಅಗ್ನಿತತ್ತ್ವವು ಪ್ರಕಟವಾಗಿ ಕಟ್ಟಿಗೆಯನ್ನೆಲ್ಲ ಆವರಿಸಿ
ಕೊಂಡ ಹೊರತು, ಕಟ್ಟಿಗೆಯು ಸುಟ್ಟು ಬೂದಿಯಾಗಲಾರದು. ಈ ತತ್ತ್ವಾ
ನುಸಾರವಾಗಿ ಆತ್ಮರ ಆತ್ಮಭಾವಕ್ಕೆ ಕಾರಣವಾದ ಸಂಸ್ಕಾರದೋಷವೂ ಆತ್ಮಭಾ
ವವೂ ಸುಟ್ಟು ಬೂದಿಯಾಗಬೇಕಾದರೆ, ಸಕೀಲದಲ್ಲಿ ಸಹಜವಾಗಿ ಸಿದ್ಧಿಸುವ
ಪವಿತ್ರತೆಯು, ಬಾಹ್ಯಪರಿಸ್ಥಿತಿಯ ವ್ಯವಹಾರದಲ್ಲಿಯೂ ಸಹಜವಾಗಿ ಇರಬೇ
ಕಾಯಿತು. ಸಹಜವೇಧಾಧಿಕಾರಸಂಪನ್ನನಾದ ಸದ್ಗುರುರಾಯನು ಆತ್ಮರಿಗೆ
ನಿಜಸ್ವರೂಪದ ಪರಿಣಾಮವು ಜಾಗ್ರಸ್ವಪ್ನ ಸುಷುಪ್ತಿಗಳಲ್ಲಿಯೂ ಉಳಿಯುವಂತೆ;
ತ್ರಿವಿಧದೀಕ್ಷೆಗಳಿಂದ ತ್ರಿವಿಧತನುಗಳನ್ನು ಶುದ್ಧೀಕರಿಸಿ, ಸ್ಥೂಲತನುವಿನ ಕರಕೆ
ಇಷ್ಟವ ಕೊಡಬೇಕಾಗುವದಷ್ಟೇ! ಆ ಮೇರೆಗೆ ಶಿಷ್ಯನು ಇಷ್ಟವ ಹಿಡಿದು ಶ್ರೀ ಸದ್ಗು
ರುರಾಯನು ಕೊಟ್ಟ ಕಾಯಕದಲ್ಲಿ ಆತನು ತೋರಿಸಿದ ರೀತಿಯಲ್ಲಿ ಆಚರಿಸಿ,
ಕ್ರಿಯಾಶುದ್ಧಿಯಿಂದ ಬಾಹ್ಯಪವಿತ್ರತೆಯನ್ನು ಕಾಯ್ದುಕೊಳ್ಳಬೇಕಾಗುವದು.
ಈ ಪವಿತ್ರತೆಯನ್ನು ಕಾಯ್ದುಕೊಳ್ಳುವದೇ ನಿಗ್ರಂಥನವಾಗಿರುವದು. ಅಂತರಂ
ಗದ ಪವಿತ್ರತೆಯನ್ನು ಕಾಯ್ದುಕೊಳ್ಳುವ ಕಾರ್ಯಕ್ಕೆ ಸಂಸ್ಕಾರದೋಷವೂ ಬಹಿ
ರ್ಮುಖವಾದ ಇಂದ್ರಿಯಗಳೂ, ದೇಹಾಭಿಮಾನವೂ ವಿಘ್ನವಾಗುವಂತೆ, ಬಹಿರಂ
ಗದ ಪವಿತ್ರತೆಯನ್ನು ಕಾಯ್ದುಕೊಳ್ಳುವಕಾರ್ಯಕ್ಕೆ, ದುಷ್ಟಾತ್ಮರ ವಿಕಾರಮಯ
ವಾದ ಪಿಂಡಗಳ ಸ್ಪರ್ಶದೋಷದಿಂದ ಪಂಚಮಹಾಭೂತಗಳಲ್ಲಿ ಕ್ಷಣಕ್ಷಣಕ್ಕೆ
ಕೂಡಿಬಿದ್ದು, ಸಾಮಾನ್ಯಸ್ವರೂಪಗೊಂಡು, ಲೋಕದಲ್ಲಿ ಪ್ರವಹಿಸುತ್ತಿರುವ ವಿಕಾ
ರದ ಓಘವೂ, ದುಷ್ಟಾತ್ಮರ ಪರಿಸ್ಥಿತಿಯೂ, ತನ್ನಂಗದೋಷವೂ ವಿಘ್ನವಾಗಿರುವವು.
ಆತ್ಮನಿಗೆ ಪರಿಣಮಿಸಿದ ನಿಜಸ್ವರೂಪವು ಮನದ ಚಿಂತನೆಗೆ ನಿಜಮಂತ್ರಮೂ
ರ್ತಿಯಾಗಿ ಅಂತರಂಗದ ಸಾಧನಗಳನ್ನೆಲ್ಲ ಸಕೀಲದಲ್ಲಿ ಒಳಕೊಂಡು ಪವಿತ್ರತೆ
ಯನ್ನು ಕಾಯ್ದುಕೊಳ್ಳುವಂತೆ, ಗುರುದತ್ತವಾದ ಇಷ್ಟವು ನಿಜೇಷ್ಟಮೂರ್ತಿಯಾಗಿ
ಆತ್ಮರ ಸ್ವಾಭಾವಿಕವಾದ ವೃತ್ತಿಗಳನ್ನೆಲ್ಲ ಬಹಿರಂಗದ ಶಿಷ್ಟವಾದ ನಡೆಯಲ್ಲಿ
ಒಳಕೊಂಡು ಪವಿತ್ರತೆಯನ್ನು ಕಾಯ್ದುಕೊಳ್ಳುವದು. ಈ ಅಂತರ್ಬಾಹ್ಯಪವಿ
ತ್ರತೆಗಳು ಒಂದಕ್ಕೊಂದು ಕಾರ್ಯಕಾರಣವಾಗಿ ಪರಿಣಮಿಸುತ್ತಿರುವವು. ಇವು
ಗಳಲ್ಲಿ ಒಂದು ತಪ್ಪಿದರೆ, ಇನ್ನೊಂದು ತನ್ನಿಂದ ತಾನೇ ಜಾರುವದು. ಆದುದರಿಂ
ದ ಸಾಧಕರು ಅಂತರ್ಬಾಹ್ಯ ಪವಿತ್ರತೆಗಳು ಎಷ್ಟೂ ಕೆಡದಂತೆ ಎಚ್ಚರ ಪಡುವ
ದೇ ಲೋಮವಿಲೋಮವಾಗಿ ಪೋಣಿಸಿದ ಮಣಿಮಾಲಿಕೆಯ ಜಪಾನುಸಂಧಾನ

ವಾಗಿರುವದು. ಬಾಹ್ಯಪವಿತ್ರತೆಯನ್ನು ಕಾಯ್ದುಕೊಳ್ಳಲು ಪಂಚಾಚಾರಪರಾಯಣತೆ ಅಷ್ಟಾವರಣನಿರತತೆ ಷಟ್ಸ್ಥಲಸಂಪನ್ನತೆಗಳೇ ಸಾಧನವಾಗಿರುವವು.

ಮಲಾವರಣದಿಂದ ತುರ್ಯಾತೀತಾವಸ್ಥೆಯಲ್ಲಿ ಕಲ್ಲುಗಳ ಹಾಗೆ ಬಿದ್ದುಬಿಟ್ಟಿರುವ ಆತ್ಮರು ಸೃಷ್ಟಿಯ ಸ್ವಾಭಾವಿಕವಾದ ಚಕ್ರದಲ್ಲಿ ಸಿಕ್ಕು ಅಸಂಖ್ಯಾತ ಯೋನಿಗಳ ಮುಖದಿಂದ ಬಂದು ಬಂದು, ಮಲಾವರಣವನ್ನು ಮೆಲ್ಲನೆ ಹರಿದುಕೊಳ್ಳುವ, ಜಾಗರಾವಸ್ಥೆಯ ಜ್ಞಾನಕಲೆಯುಳ್ಳ ಅರವಿನ ಮಾನವನ ಜನ್ಮಕ್ಕೆ ಬರುತ್ತಿರುವರಷ್ಟೇ! ಈ ಜ್ಞಾನಕಲೆಯುಳ್ಳ ಮಾನವಸೃಷ್ಟಿಯು, ಕೇವಲ ಲಿಂಗವಾಗಿ ಲಿಂಗದಲ್ಲಿಯೇ ಬೆರೆತು ಹೋಗುವದಕ್ಕಾಗಿರುವದರಿಂದ, ಯಾವ ಸಕಲಸಾಧನಗಳನ್ನು ಹೊಂದಿ ಬಂದಿರುವದೋ ಅವೇ ಸಾಧನಗಳನ್ನು ಅವರು ಆತ್ಮಾನಾತ್ಮವಿವೇಕಶೂನ್ಯಸ್ಥಿತಿಯಲ್ಲಿ, ಅಂತಃಕರಣಗಳು ಹೋದ ಮೇರೆಗೆ ಬಳಿಸುತ್ತ ಬಂದಿರುವದರಿಂದ, ಅನಿಷ್ಟಸಂಸ್ಕಾರದಿಂದ ಇಷ್ಟು ಜಡರಾಗಿರುವರು. ಇದರಿಂದ ಫಲಿಸುವದೇನಂದರೆ ಅನಿಷ್ಟಕ್ರಿಯೆಗಳೇ ಅನಿಷ್ಟಸಂಸ್ಕಾರಕ್ಕೆ ಕಾರಣವಾಗಿರುವವು. ಆತ್ಮರು ಇಲ್ಲಿಯ ವರೆಗೆ ಹೊಂದಿದ ಜಡತ್ವವನ್ನೆಲ್ಲ ನಿಜೇಷ್ಟ ಕ್ರಿಯಾಶುದ್ಧಿಯ ಆಚಾರದಿಂದಲೇ ನೀಗಲಾಡಿಕೊಳ್ಳಬೇಕಲ್ಲದೆ, ಮತ್ತಾವುದರಿಂದಲೂ ಇಲ್ಲ. ಈ ಗುಟ್ಟು ತಿಳಿಯದೆ, ಯೋಗಿಗಳು ಅನಂತಕಾಲ ಜೀವಗಳ್ಳರಾಗಿ ಬಾಳಿದರೂ ಅವರಿಗೂ, ತಪಸ್ವಿಗಳು ಅನಂತ ಕಾಲದವರೆಗೆ ಒಣಗಿದ ಶರೀರದಲ್ಲಿ ಜೀವ ಹಿಡಿದು ಸತ್ತವರಂತೆ ಬಿದ್ದುಕೊಂಡರೂ ಅವರಿಗೂ, ಬಹಳ ಹೇಳುವದೇನು ಹರಿಬ್ರಹ್ಮಾದಿಗಳಿಗೂ ಈ ಸಂಸಾರಭೀತಿಯು ಬಿಡಲಿಲ್ಲ; ಮತ್ತು ಭವಚಕ್ರದಿಂದ ಪಾರಾಗುವದಾಗಲಿಲ್ಲ. ಎಷ್ಟೋ ಜನರು ಸತ್ಕರ್ಮವನ್ನು ಆಚರಿಸಿದರೂ ಅದರಿಂದ ಪುಣ್ಯವನ್ನು ಪಡಕೊಂಡರಲ್ಲದೆ, ಹೊಂದಿದ ಜಡತ್ವವನ್ನು ಹಿಂಗಿಸಿಕೊಳ್ಳುವದಾಗಲಿಲ್ಲ! ಜಡತ್ವವನು ಹಿಂಗಿಸಿಕೊಳ್ಳುವ ಕ್ರಿಯೆಗಳು ಬೇರೆಯಾಗಿರುವವು. ಇವುಗಳನ್ನು ಕಂಡು ಹಿಡಿದು ಪ್ರಚಾರದಲ್ಲಿ ತಂದವರೇ ಸತ್ಯಶರಣರು. ಅವರೇ ಈಗ ಲಿಂಗಕಾಯರಾಗಿ, ಲಿಂಗಕ್ಷೇತ್ರವನ್ನು ವಿಸ್ತರಿಸಿ, ಭೂಕೈಲಾಸವನ್ನಾಗಮಾಡಬಂದು ಮೆರೆಯುಲ್ಲಿ ನಿಂತವರು. ಲಿಂಗಕಾಯರಾಗಿ ವ್ಯವಹರಿಸುವದೇ ಕಾಯನ್ಸತ್ಕ್ರಿಯು. ಈ ಕಾಯನ್ಸತ್ಕ್ರಿಯ ಸತ್ಯಶರಣಮಾರ್ಗಾನುವರ್ತನವೇ ಆತ್ಮರಲ್ಲಿ ಇದ್ದೂ ಇಲ್ಲದ ಪರಿಯಲ್ಲಿರುವ ಲಿಂಗವನ್ನು, ಕಟ್ಟಿಗೆಯಲ್ಲಿ ಅಡಗಿಕೊಂಡಿದ್ದ ಅಗ್ನಿತತ್ತ್ವವನ್ನು ಹೇಗೋ ಹಾಗೆ, ಪ್ರಕಟಮಾಡಿ ಸಂಸ್ಕಾರದೋಷವನ್ನು ಪರಿಹರಿಸುವ ನಿಜವಾದ ಉಪಾಯವು.

ಆತ್ಮರು ಈ ತೋರಿಯಡಗುವ ದೃಷ್ಟವೇ ನಮ್ಮ ಸುಖಕ್ಕೆ ಸಾಧನವೆಂದು ಬಗೆದು, ಅದಕ್ಕಾಗಿಯೇ ತನುಕರಣಾದಿಗಳನ್ನೆಲ್ಲ ಮಾರಿಕೊಳ್ಳುವರು. ಅವುಗಳನ್ನು ಹೊಂದಲು ವಿಶ್ವಪ್ರಯತ್ನವನ್ನು ಮಾಡುವರು ನಂಬುಗೆಯನಿಡುವರು. ಆ ಪ್ರಯತ್ನಕ್ಕೆ ಎಷ್ಟು ವಿಘ್ನಗಳು ಸಂಭವಿಸಿದರೂ, ಅವುಗಳಿಗೆಷ್ಟೂ ಸೊಪ್ಪುಹಾಕ

ದೆ ಸೆಹಿಸಿಕೊಂಡು ತಮ್ಮ ಕಾರ್ಯದಿಂದ ಹಿಂಜರಿಯರು. (ನಿಸ್ಮೆಯನ್ನು ತಾಳುವರು.) ಅವು ಸಾಧ್ಯವಾಗಲು ತಮ್ಮ ಕೈಯೊಳಗಿಂದ ಯಾವ ರೀತಿಯಿಂದಲೂ ಜಾರಿಹೋಗದಂತೆ ಎಚ್ಚರಪಡುವರು. (ಅವಧಾನ ಹೊಂದುವರು) ಅವುಗಳನ್ನು ತಾವೇ ಭೋಗಿಸಲು ಇಚ್ಛಿಸುವರು. ಭೋಗಿಸಿ ಆನಂದದಿಂದ ನಲಿಯುವರು. ಇನ್ನು ಭೋಗಗಳ್ಕೆ ಕಾರಣವಾದ ಹೆಣ್ಣುಗಂಡಿಗೆ, ಗಂಡು ಹೆಣ್ಣಿಗೆ ಒಂದು ಮೆಟ್ಟು ಮುಂದಕ್ಕೆ ಒಯ್ದು ಏಕಜೀವವನ್ನಾಗಿಸುವವು. ಬಾಹ್ಯವಸ್ತುಗಳ ಸಂಬಂಧವಾಗಿ ಆತ್ಮರಲ್ಲಿದ್ದ ಸ್ವಾಭಾವಿಕವೃತ್ತಿಯು ಈ ಧರ್ಮವನ್ನು ಬಸವಣ್ಣನು ಸತ್ಯಧರ್ಮದ ನಿಜಾಚರಣೆಗೆ ಯೋಜಿಸಿಕೊಂಡು, ಷಟುಸ್ಥಲದ ವ್ಯವಸ್ಥೆಗೊಳಿಸಿದನು. ಆತ್ಮರ ಯಾವ ಸ್ವಾಭಾವಿಕವೃತ್ತಿಗಳು ದುರುಪಯೋಗದಿಂದ ವಿಷಯಬದ್ಧತೆಗೆ ಕಾರಣವಾಗಿರುವವೋ, ಅವುಗಳ ಸದುಪಯೋಗದಿಂದ ಕಾಯುವ್ಯಾಪಾರವು ವಿಷಯವಿಮುಕ್ತತೆಗೆ ಕಾರಣವಾಗಿರುವದನ್ನು ಲೋಕಕ್ಕೆ ಮಾದರಿಯಾಗಿ ತೋರಿಸಿಕೊಟ್ಟನು. ಆತ್ಮರಲ್ಲಿದ್ದ ಪಂಚಕಂಚುಕಗಳಲ್ಲಿ ರಾಗವನ್ನು ಕೆಡಿಸಿಕೊಂಡ ಹೊರತು, ವಿರಾಗವಿಲ್ಲೆಂಬುದನ್ನು ಈ ಷಟುಸ್ಥಳದ ಆಚರಣೆಯಿಂದ ಲೋಕದ ನಿದರ್ಶನಕ್ಕೆ ತಂದುಕೊಟ್ಟನು. ಈ ವಸ್ತುಗಳಿಂದ ನನಗೆ ಸುಖವಿರುವದು ಆ ವಸ್ತುಗಳಿಂದ ನನಗೆ ಕಷ್ಟವಿರುವದು ಎಂದು ಬಗೆಯುಹಚ್ಚಿ, ಅವುಗಳಲ್ಲಿ ಪ್ರೀತಿ ವೈರಗಳನ್ನು ಮಾಡಹಚ್ಚುವದೇ ರಾಗವು. ಅದರಿಂದಲೇ ನಾನು ನನ್ನದೆಂಬ ಭಾವದ ಏಳ್ಗೆಯೂ, ಷಡ್ಗುಣಗಳ ವರ್ಧನವೂ, ಅರ್ಥಾತ್ ಮಾಯಾವಿಸ್ತಾರವೂ. ಈ ಮಾಯೆಯು ಸುಳ್ಳುವಸ್ತುಗಳಲ್ಲಿ ಆತ್ಮರನ್ನು ಭ್ರಮಗೊಳಿಸಿ, ಸತ್ಯವಸ್ತುವಿನಿಂದ ದೂರ ಒಯ್ಯುತ್ತಿರುವದು. ಅರಿಷಡ್ವರ್ಗವು ಆತ್ಮರನ್ನು ಪಂಚಮಹಾಪಾತಕಕ್ಕೆಳಸುವವು. ನಾನುನನ್ನದೆಂಬ ಭಾವವು ಪಂಚಸೂತಕಗಳಿಗೆ ಗುರಿಮಾಡುವದು. ಸಾರಾಂಶ, ರಾಗವೇ ಈ ಪ್ರಪಂಚಕ್ಕೆ ಬೀಜವಾಗಿರುವದು. ಈ ಬೀಜಕ್ಕೆ ಮೂಲಾಹಂಕಾರವೇ ಕಾರಣವು. ಈ ರಾಗವೇ ಆತ್ಮರಲ್ಲಿ ಉದ್ಧಾರಾರ್ಥವಾಗಿ ಸ್ವಾಭಾವಿಕವಾಗಿದ್ದ ವೃತ್ತಿಗಳನ್ನು ತನಗಾಗಿಯೇ ಉಪಯೋಗಿಸಿ, ಒಳಗಿನ ಸಕೀಲದ ದೇಣಿಗೆಗಳನ್ನೆಲ್ಲ ನಿಜವ್ಯವಹಾರದಿಂದ ದೂರಮಾಡಿ, ಪ್ರಪಂಚದಲ್ಲಿ ಕೀಲಿಸಿಕೊಂಡು ಆತ್ಮರನ್ನು ಈಷಣತ್ರಯಗಳಿಗಾಗಿ (ಹೊನ್ನು ಹೆಣ್ಣು ಮಣ್ಣಿಗಾಗಿ) ನಾನಾವಿಕಾರಗಳಿಗೆ ಗುರಿಮಾಡಿ, ಮಣ್ಣುಗೂಡಿಸುತ್ತಿಹುದು. ಆದುದರಿಂದ ಈ ಪ್ರಪಂಚಕ್ಕೆ ಬೀಜವಾದ ರಾಗದ ಕೈಯೊಳಗೆ ಸಿಕ್ಕ ಆತ್ಮರ ದೇಣಿಗೆಗಳನ್ನು ಸತ್ಸಂಗತಿಯು ಕಡೆಗೆ ತಿರುಗಿಸಿ, ಸ್ವಾಭಾವಿಕವೃತ್ತಿಗಳನ್ನು ಆ ಸದ್ವಸ್ತುವಿನ ವಿಷಯವಾಗಿಯೇ ಬಳಸಿಕೊಳ್ಳುವಹಾಗೆ ಯೋಜನೆಯು ಇಲ್ಲದ ಹೊರತ್ತು ಆತ್ಮರು ಈ ಪ್ರಪಂಚದಲ್ಲಿ ವಿರಾಗಿಗಳಾಗಿ ಇರಲು ಶಕ್ಯವಿಲ್ಲೆಂಬುದನ್ನು ಬಸವಣ್ಣನೇ ಪ್ರಯೋಗಪೂರ್ವಕವಾಗಿ ಲೋಕದ ಮುಂದಿಟ್ಟನು. ಲೋಕದಲ್ಲಿ ಏಕಜೀವವನ್ನಾಗಿಸುವ ಪಾತಿವ್ರತ್ಯದ ರೀತಿಯನ್ನು, ನಿಜಲಿಂಗದ ಅಂಗರಿಂದಾದ ಆತಂ

ಗೆಲ್ಲ ಯೋಜಿಸಿ ನಿಷ್ಕೃಕೃತಿಗೆ ಕಾರಣವಾದ ಲಿಂಗಪಾತಿವ್ರತ್ಯದ ತತ್ತ್ವಾನುವರ್ತ ನವೇ ನಿಜಧರ್ಮವಾಗಿರುವದೆಂಬದನ್ನು ಉದಾಹರಿಸಿದನು.

ವಿಶ್ವರೂಪಿಯಾದ ಪರಮಾತ್ಮನ ಆರಾಧನೆಗೆ ಪಂಚಸೂತಕಗಳೇ ಅಡ್ಡಬ ರುತ್ತಿರುವವು. ಈ ಪಂಚಸೂತಕಗಳನ್ನು ಬಿಟ್ಟ ಹೊರತು, ರಾಗವೂ ಕೆಡುವ ದಿಲ್ಲ. ವಿಶ್ವರೂಪಿಯಾದ ಪರಮಾತ್ಮನನ್ನು ಪೂಜಿಸುವದೇ ಗುರುಪೂಜೆಯು. ನಿರ್ವಿಕಾರಸೃಷ್ಟಿಯಲ್ಲಿ ಕ್ರಿಯಾರೂಪದಿಂದ ವ್ಯಕ್ತವಾಗಿ ತೋರುವ ಗುರುಲಿಂಗವು ವಿಕಾರಮಯಸ್ಥಿತಿಯಲ್ಲಿ, ಬಚ್ಚಲದ ಕೊಳಚಿಯಲ್ಲಿ ಶುದ್ಧನೀರು ಹೇಗೋ ಹಾಗೆ, ಅಥವಾ ಸ್ವಾಭಾವಿಕ ರೀತಿಯಿಂದ ಶುದ್ಧವಾಗಿ ಹರಿಯುವ ಹವೆಯು ಕೊಳೆಯುವ ಪದಾರ್ಥಗಳಿಂದ ಕ್ಷಣಶಃ ಹೊರಬೀಳುತ್ತಿರುವ ಪರಮಾಣುಗಳ ಯೋಗದಿಂದ ಹೇಗೋ ಹಾಗೆ, ಲೋಕದವರ ದೃಷ್ಟಿಗೆ ಮರೆಮಾಜುವದು. ಮುಸುಕಿದ ವಿಕಾ ರವನ್ನು ಸತ್ಯಾಚರಣೆಯಿಂದ ಪರಿಹರಿಸುತ್ತ ಹೋಗುವದೇ. ಆಚಾರ ಲಿಂಗಪೂಜೆ ಯಾಗಿರುವದು. ಈ ಆಚಾರಲಿಂಗವು ತೋರದೆ ಒಳಗಿನ ಶಿವಲಿಂಗದ ನೆಲೆಯು ಹತ್ತದು. ಲಿಂಗದ ಪವಿತ್ರತೆಗೆ ಏನೊಂದು ಕುಂದುಕೊರತೆಯು ಇಲ್ಲದಿದ್ದರೂ, ಕಾಮಿನಿಯ ರೋಗಿಗೆ ಜಗವೆಲ್ಲ ಹಳದೀ ಬಣ್ಣದ್ದಾಗಿ ತೋರುವಂತೆ ವಿಕಾರವು ಯ ಲೋಕಕ್ಕೆ ಆಚಾರಲಿಂಗವೇ ವಿಕಾರಮಯವಾಗಿ ತೋರುವದು. ಆದುದ ರಿಂದ ಲೋಕವು ತನ್ನ ಯಾವಕಾರ್ಯಗಳಿಂದ ವಿಕಾರದ ಫಲವನ್ನು ಉಣ್ಣುತ್ತಿ ರುವದೋ, ಅದೇ ಕಾರ್ಯಗಳಿಂದ ಲಿಂಗವು ತನ್ನ ಸೃಷ್ಟಿಸ್ಥಿತಿಲಯಾದಿಗಳನ್ನು ಜರಗಿಸುತ್ತಿರುವದು. ಅಂದರೆ ಲಿಂಗವು ತನ್ನ ಪೂಜೆಯನ್ನು ತಾನೇ ಮಾಡಿಕೊ ಳ್ಳುತ್ತಿರುವದು; ಲೋಕವು ತನ್ನ ಕರ್ಮವನ್ನು ತಾನೇ ಉಣ್ಣುತ್ತಿರುವದು. ಕಾರ ಣ ವಿಕಾರವನ್ನು ಪರಿಹರಿಸಿಕೊಂಡ ಹೊರತು, ಲಿಂಗಸಾಮರಸ್ಯಯೋಗದ ಲಿಂಗ ಕ್ಷೇತ್ರವು ನಿಲುಕದು. ಅಂತೇ "ಕಿಂಮೇ ಪೂರ್ಣಸ್ಯ ದೀಯತೆ ಭಕ್ತಿತುಷ್ಟೋ ಸ್ಮಿ" ಎಂದು ಶಿವವಚನವಿರುವದು. ಆದುದರಿಂದ ನಾಟ್ಯಕ್ಕೆ ನಿಂತ ಶಿವತತ್ತ್ವದ ಚೈತನ್ಯವು, ನಿರ್ವಿಕಾರಮಯ ಶಾಂತಿಯೋಗದ ಕ್ರಿಯಾಚಾರದಲ್ಲಿ ವ್ಯಕ್ತವಾಗು ವದರಿಂದಲೂ, ವ್ಯಕ್ತವಾದ ಶಿವಚೈತನ್ಯದ ಯೋಗದಿಂದ ಶಿವತತ್ತ್ವದ ನೆಲೆಯು ನಿಲುಕುವದರಿಂದಲೂ, ಅಂತರ್ಬಾಹ್ಯವಿಕಾರಮಯ ಸ್ಥಿತಿಯನ್ನು ಹಿಂಗಿಸಿಕೊಂ ಡು ನಿರ್ವಿಕಾರವನ್ನು ವ್ಯಕ್ತಪಡಿಸುವದೇ ವಿಶ್ವರೂಪಿಯಾದ ಗುರುಲಿಂಗದ (ಚುರ್ಕಾಗಿ ಇಷ್ಟರೂಪನಿಂದ ಅಂಗೈಯಲ್ಲಿ ಬಂದ ಶಿವನ) ಪೂಜೆಯಾಗಿರುವದು. ಪೂಜಿಸುವ ಹಾಗು ಪೂಜಿಸಲ್ಪಡುವ ಸಹಜ ಅಧಿಕಾರವುಳ್ಳದ್ದಾಗಿ ಅನಾದಿಯಿಂದ ಅಖಂಡವೂ ಅಚ್ಯುತವೂ ಆಗಿ, ತನ್ನನ್ನು ತಾನೇ ಪೂಜಿಸುವದೂ, ತನ್ನಿಂದ ತಾನೇ ಪೂಜಿಗೊಳ್ಳುವದೂ ಆದ ಆ ಲಿಂಗದ ನೆಲೆಗೆ ಆತ್ಮನನ್ನು ನಿಲುಕಿಸದ ಹೊರತು, ಅದಕ್ಕೆ ಲಿಂಗಸಾಮರಸ್ಯಯೋಗವು ಲಭಿಸದು ಆಚಾರಲಿಂಗಪೂಜೆ ಯು ಒಳಗೂ ಹೊರಗೂ ಆತ್ಮನನ್ನು ದಿಗ್ಬಂಧಿಸಿ, ನಿಜದ ನೆಲೆಗೆ ನಿಲುಕಿಸುವದೂ

ದುದರಿಂದ, ಗುರುಮುಖದಿಂದ ಇಷ್ಟದ ನೆಲೆಯರಿತು, ಸಕಲ ಕಾಯಕವ್ಯಾಪಾರದಲ್ಲಿ ಒಳಹೊರಗೂ ನಿರ್ವಿಕಾರವನ್ನು ಸಾಧಿಸಿಕೊಳ್ಳುವದೇ ಲಿಂಗಪೂಜೆಯ ದಿಗ್ಬಂಧನಮಂತ್ರವಾಗಿರುವದು ಆವ್ಹಾನವಿಸರ್ಜನಾದಿ ಕಾರ್ಯಗಳಿಲ್ಲದೆ, ಸದಾ ಲಿಂಗಸಂಗದಲ್ಲಿ ನಿರತರಾದವರಿಗೆ ದಿಗ್ಬಂಧನಮಂತ್ರರೂಪವಾದ ಶಿವಪೂಜೆಯೇ ಅಂಗವಾಗಿರಲಿಕ್ಕೆಬೇಕು. ಫಲಪದವಿಗಳನ್ನೆಲ್ಲ ಒದ್ದು, ಶಿವಪೂಜೆಯೇ ಅಂಗವಾಗುವಂತೆ ಸಾಧಿಸುವವರೇ ವೀರಶೈವರು. ವೀರಶೈವಮತಸ್ಥಾಪನಾಚಾರ್ಯರೆಂದು ಕರೆಯಲ್ಪಟ್ಟ ಆಚಾರ್ಯರ ಜ್ಞಾನಸೃಷ್ಟಿಗೆ ಈ ತತ್ತ್ವಗಳ ವಿಚಾರವು ನಿಲುಕಿದಾಗ್ಯೂ, ಕ್ರಿಯಾಸೃಷ್ಟಿಯಿಂದ ಕೂಡಿಕೊಂಡು, ಸೃಷ್ಟಿಯ ಆದಿಕಾಲದಿಂದ ಬೆಳೆದ ಅಂಗವನ್ನು ತನ್ಸಮರಸಗೊಳಿಸಿ, ಲಿಂಗದ ನೆಲೆಗೆ ನಿಲುಕಿಸುವದ್ಾಗದೆ ಪೇಚಾಡಿ ನಗಸೋತವರಾದುದರಿಂದ ಬಸವಣ್ಣನು ನಡೆಗಲಿಸಬಂದ ಆದಿದೇಶಿಕನಾಗಿರುವನು. ಆದುದರಿಂದ ಇವನಿಂದಲೇ ನಿಜಲಿಂಗಾಗಿಧರ್ಮದ ನಿಜಪ್ರಯೋಗವು ಜಗಕೆ ದೊರೆವಂತಾಯಿತು. ಈ ಆದಿದೇಶಿಕನೇ ಅನಾದಿ ಭಕ್ತನ ವ್ಯಕ್ತಸ್ವರೂಪನು. ಆದುದರಿಂದ ಬಸವನೇ ಜಗದ್ಭರಿತನೂ, ಜಗದ್ಗುರುವೂ, ಜಗದುದ್ಧಾರಕನಾದ ದ್ವಿತಿಯಶಂಭುವೂ.) ನಿಜದ. ನಿಜಸೃಷ್ಟಿಯಿಂದ ಆತ್ಮರೆಲ್ಲರೂ ಅಂಗವಾಗಿರುವದಷ್ಟೇ! ಹೀಗಿದ್ದು ತಮ್ಮಷ್ಟಕ್ಕೆ ತಾವು ಸ್ವತಂತ್ರವೆಂಬ ಭಾವಕ್ಕೆ ನಾನು ನನ್ನದೆಂಬ ಭ್ರಮೆಯೇ ಕಾರಣವಾಗಿರುವದು. ಇದು ವಿಶ್ವರೂಪಿಯಾದ ಪರಮಾತ್ಮನ ದಾಸೋಹದಿಂದಲ್ಲದೆ, ಮತ್ತ್ಯಾತರಿಂದಲೂ ಕೆಡಲಾರದೆಂಬುದನ್ನು ಬಸವಣ್ಣನೇ ತೋರಿಸಿಕೊಟ್ಟನು. ಎಲ್ಲ ಆತ್ಮರ ಸೃಷ್ಟಿಯು ಪರಮಾತ್ಮನಿಂದಲೇ ಆಗಿದ್ದರೂ, ಕಾಯದಲ್ಲಿ ದಯಪಾಲಿಸಿದ ಸಕಲಸಾಧನಗಳನ್ನೂ, ಆತ್ಮರ ಸ್ವಾಭಾವಿಕವೃತ್ತಿಗಳನ್ನೂ ನಿಜದನುಸಂಧಾನಕ್ಕಾಗಿಯೂ, ವ್ಯಾಪಾರಕ್ಕಾಗಿಯೂ ಬಳಿಸದೆ ದುರುಪಯೋಗಿಸಿಕೊಳ್ಳುತ್ತಿರುವವರೆಲ್ಲ ನಿಜಕೆ ಹೊರತಾದವರು. ಸದುಪಯೋಗಿಸಿಕೊಳ್ಳುತ್ತಿರುವವರೆಲ್ಲ ನಿಜದ ರೂಪವನ್ನೇ ವ್ಯಕ್ತಪಡಿಸುವವರು. ಆ ವಿಶ್ವರೂಪಿಯಾದ ಪರಮಾತ್ಮನು ಇಂತಹ ನಿಜದ ವ್ಯಾಪಾರದಲ್ಲಿ ತೊಡಗಿರುವದರಿಂದಲೇ ತನ್ನ ಅಜಡಸ್ವರೂಪದಿಂದ ವ್ಯಕ್ತನಾಗುವನಲ್ಲದೆ, ಸುಳ್ಳುಸಂಗತಿಗಳಲ್ಲಿ ಮುಳುಗಿರುವದರಿಂದ ಜಡಸ್ವರೂಪಗೊಂಡು ಅವರವಂಗೆ ಅವರಂತೇ ಆಗಿಬಿಟ್ಟಿರುವನು. ಅದರಿಂದ ಲೋಕದಲ್ಲಿ ನಿಜದೃಷ್ಟಿಯಿಂದ ನಾಸ್ತಿಕತ್ತ್ವವೇ ಬೆಳೆಯುವದು. ನಿಜದ ನಿಜಸೂತ್ರವಿಡಿದು ಸಕಲಸಾಧನಗಳನ್ನೂ ಸಕಲವೃತ್ತಿಗಳನ್ನೂ ನಿಜಕ್ಕಾಗಿಯೇ ಉಪಯೋಗಿಸಿಕೊಂಡು, ವ್ಯವಹರಿಸುವವರ ಹೊರತು, ಮಿಕ್ಕವರೆಲ್ಲ ಏನುಮಾಡಿದರೂ, ಎಂತಹ ಮಹಿಮರಾದರೂ (ಹರಿಬ್ರಹ್ಮ ಮೊದಲುಗೊಂಡು ಸಕಲದೇವತೆಗಳಾದರೂ) ನಿಜಕೆ ಹೊರತಾಗಿರುವರು ನಿಜಕೆ ಹೊರತಾದವರೆಲ್ಲರೂ ನಾಸ್ತಿಕರೇ! ಏಕಂದರೆ ಅವರೆಲ್ಲರೂ ಆತ್ಮರೇ; ಲಿಂಗವಾಗಿದ್ದರೆ ಲಿಂಗದಲ್ಲಿ ಬೆರೆಯುತ್ತಿದ್ದರು. ಇಂತಹವರನ್ನು ನಿಜದ ಸ್ಥಾನದಲ್ಲಿ,

ನಿಜವೇ ಎಂದು ಆರಾಧಿಸುವದರಿಂದ, ಆರಾಧನೆಗಳಿಗಾಗಿ ಮಾಡುವ ಉಪಚಾರಗಳೆಲ್ಲ ನಿಜಕೆ ಮುಟ್ಟದೆ, ಅಂಗರಿಗೇ ಮುಟ್ಟುವವು. ನಿಜವಾಗಿ ನಾಸ್ತಿಕಸ್ಥಿತಿಯಲ್ಲಿದ್ದು ಆಸ್ತಿಕರಂತೆ ಆಚರಿಸುವ, ಯಜ್ಞಯಾಗಾದಿಕರ್ಮಗಳು ಒತ್ತಟ್ಟಿಗಿರಲಿ ಯೋಗತಪಶ್ಚರ್ಯಾದಿಗಳೂ, ಶಿವಪೂಜಾಲಿಂಗಪೂಜಾದಿಗಳೂ, ಕಠಿಣವಾದ ವ್ರತನೇಮಾದಿಗಳೂ ತಮಗಾಗಿಯೇ ಪರಿವರ್ತಿಸುವವೇ ಹೊರತು, ನಿಜಲಿಂಗಕ್ಕಲ್ಲ; ಆದುದರಿಂದ ಇವೆಲ್ಲವುಗಳೂ ನಿರರ್ಥಕವಾದವುಗಳು. ಇವರೆಲ್ಲರೂ ಆತ್ಮೋನ್ನತಿಗಾಗಿಯೇ ಬಡಿದಾಡುವರಲ್ಲದೆ,! ಅಂಗವ ಲಿಂಗವನ್ನಾಗಿಸಲಿಕ್ಕಲ್ಲ! ಆದುದರಿಂದ ಬಸವಣ್ಣನು ಗುರುಲಿಂಗಜಂಗಮದ ವ್ಯತಿರಿಕ್ತವಾಗಿ ಇರುವ ದೇವತೆಗಳನ್ನೆಲ್ಲ ಬಿನುಗು ದೈವಗಳೆಂದೂ, ಅವುಗಳನ್ನು ಮೊರೆಯಲಾಗದೆಂದೂ ಯಜ್ಞಯಾಗಾದಿಕರ್ಮಗಳೂ ಯೋಗತಪಶ್ಚರ್ಯಾದಿ ಕಠಿಣಸಾಧನಗಳೂ ವ್ರತನಿಯಮಾದಿಗಳೂ ಉಪಯೋಗವಲ್ಲವೆಂದೂ ಹೇಳಿ ಅವುಗಳನ್ನು ಅಲ್ಲಗಳೆದು, ಹೊಡೆದೋಡಿಸಿ, ಸೃಷ್ಟಿಸ್ಥಿತಿಲಯಾದಿ ಪಂಚಕೃತಿಗಳಿಂದ ವ್ಯಕ್ತಾವ್ಯಕ್ತವಾಗಿ ಗುರುಲಿಂಗಜಂಗಮಸ್ವರೂಪದಲ್ಲಿ ತೋರುವ ನಿಜವಸ್ತುವನ್ನು ನಿಜಸೂತ್ರವಿಡಿದು, ಆರಾಧಿಸುವ ನಿಜಧರ್ಮಪ್ರಯೋಗವನ್ನೇ ಮುಂಪೆಮಾಡಿದನು. ನಿಜಧರ್ಮದಿಂದ ಪರಮಾತ್ಮನನ್ನು ವ್ಯಕ್ತಪಡಿಸುವರಾದವರಿಗೆ ದಾನಧರ್ಮಾದಿಗಳೂ, ವಿಧಿವಿಧಾನಗಳೂ, ಪೂಜಾಪುನಸ್ಕಾರಾದಿಗಳೂ, ಆಚಾರವಿಚಾರಗಳೂ ಪರಮಾತ್ಮನಿಗೇ ಸಲ್ಲುವವು. ಕಾಯವ್ಯಾಪಾರವನ್ನೇ ನಿಜಲಿಂಗದ ವ್ಯಾಪಾರವನ್ನಾಗಿಸುವ ನಡೆಯಿಂದ ಆತ್ಮರ ಖಂಡಿತವೃತ್ತಿಯನ್ನು ಕೆಡಿಸಿ ನಿಜಲಿಂಗದ ಅಖಂಡವಾದ ಅಂಗದಲ್ಲಿ ಒಂದುಮಾಡಲು ಪ್ರಯೋಗಿಸಿದನು. ನಿಜಾನುಸಂಧಾನದ ನಿಜವ್ಯಾಪಾರದಲ್ಲಿ ತೊಡಗಿರುವರನ್ನು ಲೌಕಿಕರಿಂದ ಬೇರ್ಪಡಿಸಲು "ಭವಿ ಭಕ್ತರೆಂದು ಭೇದಮಾಡಿದನು. ಏಕಂದರೆ ಎಲ್ಲಕಾಷ್ಠಗಳಲ್ಲಿ ಅಗ್ನಿತತ್ತ್ವವು ಅವ್ಯಕ್ತವಾಗಿದ್ದರೂ ಅದು ಪ್ರಕಟವಾದ ಕಾಷ್ಠಗಳಲ್ಲಿಯೇ ದಹನಕಾರ್ಯವು ಇರುವದು. ಎಲ್ಲಿ ದಹನಕಾರ್ಯವೋ, ಅಲ್ಲಿ ನಿವಾರಣಕಾರ್ಯವು. ಕಟ್ಟಿಗೆಗಳ ಇಕ್ಕಲ್ಲುಗಳನೆಲ್ಲ ಸುಟ್ಟು ಬೂದೀ ಮಾಡುವ ಸಾಮರ್ಥ್ಯವು ಪ್ರಕಟವಾದ ಅಗ್ನಿಯಲ್ಲಿರುವಂತೆ ಆತ್ಮರ ಆತ್ಮಭಾವವೆಂಬ ಕಟ್ಟಿಗೆಯ ರಾಶಿಯನ್ನು ಸುಟ್ಟು ಭಸ್ಮೀಭೂತಮಾಡುವ ಸಾಮರ್ಥ್ಯವು ಪ್ರಕಟವಾದ ಲಿಂಗದಲ್ಲಿ (ಆಚಾರಲಿಂಗದಲ್ಲಿ) ಯೇ ಉಂಟು. ಪ್ರಕಟವಾದ ಅಗ್ನಿಯುಳ್ಳ ಕಾಷ್ಠಕ್ಕೆ (ಬೆಂಕಿ ಹತ್ತಿದ ಕಟ್ಟಿಗೆಗೆ) ಕೊಳ್ಳಿಯು ಎಂಬ ಸಂಜ್ಞೆಯು ಬರುವಂತೆ; ಆಚಾರಲಿಂಗವೇ ಅಂಗವಾಗಿಯುಳ್ಳ ಆತ್ಮರಿಗೆ ಭಕ್ತರೆಂಬ ಸಂಜ್ಞೆಯು ಆತ್ಮದೃಷ್ಟಿಯಿಂದ ಭಕ್ತರೇ ನಿಜವಾದ ಅಗ್ನಿಹೋತ್ರಿಗಳು, ಏಕಂದರೆ ಅವರು ತಮ್ಮ ದೇಹವೆಂಬ ಕುಂಡದಲ್ಲಿ ಆತ್ಮಭಾವವೆಂಬ ಕೊರಡಕ್ಕೆ ಹತ್ತಿದ ಆಚಾರಲಿಂಗವೆಂಬ ಅಗ್ನಿಯುಳ್ಳವರು. ಮತ್ತು ಕಾಯವಿಡಿದಾಚರಿಸುವ ದೃಷ್ಟಿಯಿಂದ ಪ್ರತಿಯೊಬ್ಬ ಭಕ್ತನು ಪ್ರತಿಯೊಬ್ಬ ಭಕ್ತನ

ಗೆ ( ಅಗ್ನಿಹೋತ್ರಿಗೆ ) ಪರಸ್ಪರವಾಗಿ ಅಗ್ನಿಕುಂಡವಾಗಿರುವರು. ಆಚಾರಲಿಂಗಕ್ಕೆ ಹೊರತಾದವರೆಲ್ಲರೂ ಹಸೇ ಕೊರಡು ಬಿದ್ದ ಹಾಳು ತಗ್ಗಿಗೆ ಸಮಾನರು. ಇಂತಹವರು ಒಂದು ಕೃತ್ರಿಮ ತಗ್ಗಿನಲ್ಲಿ ಕಟ್ಟಿಗೆಯೊಳಗಿನ ಬೆಂಕಿಯನ್ನು ಕಾಯ್ದುಕೊಂಡು ಅಗ್ನಿಹೋತ್ರಿಗಳಾದರೆ, ಕುಲುಮೆಯಲ್ಲಿ ಬೆಂಕಿಯನ್ನು ಕಾಯ್ದುಕೊಂಡ ಬೈಲಗವ್ಯಾರನು ಅಗ್ನಿಹೋತ್ರಿಯು ಯಾಕಾಗಬಾರದು! ಇಬ್ಬರೂ ಅಂತರಂಗದಲ್ಲಿ ಆತ್ಮಭಾವವೆಂಬ ಕಾಷ್ಠದಹನ ಕಾರ್ಯವಿಲ್ಲದೆ,ಬಹಿರಂಗದಲ್ಲಿ ಬೆಂಕಿಯನ್ನು ಕಾಯ್ದುಕೊಳ್ಳುವ ಕಾರ್ಯದಲ್ಲಿ ಸರಿಸಮಾನರು. ವೇದಘೋಷಮಾತ್ರದಿಂದ ಬ್ರಾಹ್ಮಣ್ಯವು ಇರುತ್ತಿದ್ದರೆ, ವೇದಘೋಷವನ್ನು ಮಾಡುವ ಫೋನೋಗ್ರಾಫವು ಬ್ರಾಹ್ಮಣವೇಕಾಗಬಾರದು! ಇವರೆಲ್ಲರೂ ಆಚಾರಲಿಂಗಕ್ಕೆ ಬಾಹ್ಯರಾದವರಾಗಿ ಉಪಯೋಗಕ್ಕೆ ಬಾರದ ಪಪ್ಪಾಳಿಯ ಕಟ್ಟಿಗೆಗೆ ಸಮಾನರು. ಇವರಿಂದ ಭಕ್ತಕೋಟಿಯನ್ನು ಬೇರ್ಪಡಿಸಿದ ಹೊರತು, ಲೋಕದಲ್ಲಿ ವಿಶ್ವರೂಪಿಯಾದ ಆ ಅಜಡಬ್ರಹ್ಮನ ವ್ಯಕ್ತತೆಯಿಲ್ಲ. ವಿಕಾರಮಯವಾದ ಜಗತ್ತಿಗೆ ಮಾಡುವ ಸೇವೆಯು ವಿಕಾರಿಗಳಾದ ಆತ್ಮರಿಗೇ ಸಲ್ಲಿ ಮತ್ತಷ್ಟು ವಿಕಾರ ಬೆಳೆದು ಅಕಲ್ಯಾಣಕ್ಕೆ ಕಾರಣವಾಗುವದಲ್ಲದೆ, ನಿಜಲಿಂಗಕ್ಕೆ ಸಲ್ಲಿ, ಕಲ್ಯಾಣಕ್ಕೆ ಕಾರಣವಾದ ಆಚಾರಲಿಂಗವನ್ನು ವ್ಯಕ್ತಪಡಿಸಲಾರದು. ಕಾರಣ, ಭವಿಗಳಿಂದ ಭಕ್ತರನ್ನು ಬೇರ್ಪಡಿಸಬೇಕಾಗುವದು. ಭವಿಯ ಜಡವಾದ ಸಂಸರ್ಗದೋಷವು ತಟ್ಟದಂತೆ, ಉಪಜೀವನದ ಸಾಹಿತ್ಯಗಳಿಗಷ್ಟೇ ಬೇಕಾದ ಕಾಯಕದವರನ್ನೆಲ್ಲ ಭಕ್ತಕೋಟಿಯಲ್ಲಿ ಒಳಕೊಂಡು, ಭಕ್ತರನು ಭವಿಗಳ ಸಂಗದಿಂದ ದೂರಿರಿಸಲು, ಷಟ್ಸ್ಥಲದ ವ್ಯವಸ್ಥೆಯಲ್ಲಿ ಪಂಚಾಚಾರವನ್ನು ಯೋಜಿಸಿದನು. ಪಂಚಾಚಾರಕ್ಕೆ ಅಡ್ಡಬರುವ ಸೂತಕಗಳನ್ನು ಹೊಡೆದೋಡಿಸಿ, ಆಚಾರದಲ್ಲಿ ತಿದ್ದುಪಡೆಯನ್ನು ಮಾಡಿದನು. ರಾಗಕ್ಕೆ ಕಾರಣವಾದ ಮೂಲಾಹಂಕಾರವನ್ನೇ ನಿರ್ಮೂಲವಮಾಡಿ,ನಿರಹಂಕಾರದ ನಿಜೈಕ್ಯತೆಯನ್ನುಂಟುಮಾಡಲು ಅಂತರಂಗದ ಸಶೀಲದ ಸಾಧನಗಳನ್ನು ನಿಜಮಂತ್ರಮೂರ್ತಿಯ ಚಿಂತನದಲ್ಲಿಯೇ ತೊಡಗಿಸಿ, ಜೀವಪ್ರಾಣಭಾವಗಳ ಪವಿತ್ರತೆಗಾಗಿ ಗುರುಲಿಂಗಜಂಗಮದ ದಾಸೋಹಕ್ಕೆ ಯೋಜಿಸಿದಂತೆ, ಬಾಹ್ಯಜೀವವೆನಿಸುವ ಕಾಯಕದ, ಪ್ರಾಣವೆನಿಸುವ ಧನದ, ಭಾವವೆನಿಸುವ ಪರಿಸ್ಥಿತಿಯ ಪವಿತ್ರತೆಗಾಗಿ ಜೀವದ ಸ್ವಾಭಾವಿಕವೃತ್ತಿಗಳನ್ನು ಕರದಿಷ್ಟದ ಉಪಚಾರದಲ್ಲಿ, ಗುರುಲಿಂಗಜಂಗಮಸ್ವರೂಪರಾದ ಭಕ್ತರ ದಾಸೋಹಕ್ಕೆ ಯೋಜಿಸಿದನು. ಗುರುಲಿಂಗಜಂಗಮದ ದಾಸೋಹದಲ್ಲಿ, ಅಂತರಂಗದಲ್ಲಿ ಸಹಜವಾಗಿ ಪರಿಣಮಿಸುವವಾದ ಅಷ್ಟಾವರಣಗಳನ್ನು, ಭಕ್ತರ ದಾಸೋಹದಲ್ಲಿ ತದ್ರೂಪದಲ್ಲಿ ಬಹಿರ್ಗರಿಸಿ ಬಳಕೆಯಲ್ಲಿ ತಂದನು. ಅದರಿಂದ ಅಂತರ್ಬಾಹ್ಯಗಳ ವ್ಯಾಪಾರವು ಸಮರಸವಾಗಿ, ವಿಶ್ವರೂಪಿಯಾದ ಪರಮಾತ್ಮನ ಅವ್ಯಕ್ತವಾದ ಅಜಡ ಸ್ವರೂಪವು ಪ್ರತ್ಯಕ್ಷಪ್ರಯೋಗದಿಂದ ಭಕ್ತರ ಅನುಭವಕ್ಕೆ ನಿಲುಕಲು ಸುಲಭವಾಯಿತು. ಯಾವ

ನಿಜಸ್ವರೂಪವು ಅತ್ಯಂತ ಕಷ್ಟದಾಯಕವಾದ ಯೋಗತಪಶ್ಚರ್ಯಾದಿಗಳಿಗೂ, ಅಸಾಧ್ಯವೋ, ಅದು ಸೂತ್ರವಿಡಿದಾಚರಿಸುವ ನಿಜಭಕ್ತರ ಯೋಗದಿಂದ ಪರಸ್ಪರರಿಗೆ ಅತ್ಯಂತ ಸುಲಭವಾದುದಾಗುವದರಿಂದ, ಪ್ರತಿಯೊಬ್ಬ ಭಕ್ತನು ಪ್ರತಿಯೊಬ್ಬ ಭಕ್ತನನ್ನು ನಿಜಸ್ವರೂಪದಲ್ಲಿಯೇ ಕಾಣುವದು ಸ್ವಾಭಾವಿಕವಾದ ದಾಗುವದು. ಆದುದರಿಂದ ಭಕ್ತರೆಲ್ಲರೂ ಸರಿಸಮಾನರೆಂಬ ತತ್ತ್ವವು ನಿಜಧರ್ಮದಲ್ಲಿ ಸಹಜವಾದುದಾಯಿತು.

ಆದರೂ ಬಹಿರ್ಮುಖವಾದ ಇಂದ್ರಿಯಗಳನ್ನು ಕಟ್ಟುವ ಯೋಜನೆಯು ಇವುಗಳಲ್ಲಿ ಸಾಕಷ್ಟು ಇಲ್ಲದೆ ಹೋಗಿ ದಿಗ್ಬಂಧನೆಯು ಪೂರ್ಣವಾಗದ ಮೂಲಕ ಸಂಸ್ಕಾರದೋಷವು, ಇಂದ್ರಿಯಗಳ ಮುಖದಿಂದ, ಒತ್ತಿ ಬರುತ್ತಿರುವ ಜಗತ್ತಿನ ಸಾಮಾನ್ಯವಾದ ಒಳಹೊಕ್ಕೆ ಅಸುವುಕೊಟ್ಟು, ಅಂತರ್ಬಾಹ್ಯಗಳ ಪವಿತ್ರವಾದ ಚಿಂತನಕ್ರಿಯಾದಿಗಳ ವ್ಯಾಪಾರಕ್ಕೆ ಚ್ಯುತಿಯನ್ನುಂಟುಮಾಡಿ, ಸಕಲಸಾಧನವೃತ್ತಿಗಳನ್ನೆಲ್ಲ ತನ್ನ ವ್ಯಾಪಾರಕ್ಕೆ ಒಳಕೊಳ್ಳಲು ಯತ್ನಿಸುತ್ತಿರುವದು. ಈ ಬಹಿರ್ಮುಖವಾದ ಇಂದ್ರಿಯಗಳನ್ನು ಒಳಮುಖವಮಾಡಿಕೊಳ್ಳುವದೇ ಕಷ್ಟ! ಇದು ಶಕ್ತಿಪಾತದ ನಿಜಬೋಧೆಯ ಹೊರತು ಸಾಧಿಸಲು ಅಸಾಧ್ಯವು. ಶಕ್ತಿಪಾತದ ನಿಜಬೋಧೆಯನ್ನು ಜಗತ್ಸೂತ್ರಧಾರಿಯಾದ ಪ್ರಭುವರನ ಹೊರತು ಯಾರೂ ಮಾಡಲು ಸಮರ್ಥರಲ್ಲ; ಅವನ ಅನುಗ್ರಹವು ತಕ್ಕ ಭೂಮಿಕೆಯುಂಟಾದ ಹೊರತು ಆಗಲರಿಯದು. ಈ ಭೂಮಿಕೆಯನ್ನು ಮಾಡಿಕೊಳ್ಳುವದಕ್ಕಾಗಿಯೇ ಲೋಕದಲ್ಲಿ ಸಕಲ ಸಾಧನಗಳುಳ್ಳ ಮಾನವ ಸೃಷ್ಟಿಯ ರಚನೆಯು. ನಿಜಸೂತ್ರಕ್ಕೆ ಒಳಪಡದೆ ಅಂತರ್ಮುಖತೆಯನ್ನು ಸಾಧಿಸುವದು ಆತ್ಮರಿಗೆ ಅಪ್ರಯೋಜಕವೂ, ವೃಥಾ ಆಯಾಸಕರವೂ ಆಗಿರುವದೆಂದು ತತ್ತ್ವದೃಷ್ಟ್ಯಾ ಅನಿಸಿದರೂ, ಸದಾಚರಣೆಯಿಂದ ಸುಖವಿಲ್ಲೆಂದು ಎಂದೂ ಹೇಳಲಿಕ್ಕಾಗದು. ಸೃಷ್ಟಿಯ ನೇಮದಲ್ಲಿ ಆಗತಕ್ಕ ಪರಿಣಾಮಗಳು ಆಗೇ ಆಗುವವೇ; ಸದಾಚರಣೆಯಿಂದ ಸ್ವಲ್ಪ ಸಾವಕಾಶವಾಗಿ ಆಗುವವು. ಯಾವದೊಂದು ಸಂಗತಿಯು ಮನಸಿನಮೇಲೆ ಒಮ್ಮೆಲೇ ಆಗುವ ಸ್ಥಿತಿಗೂ, ಸಾವಕಾಶವಾಗುವ ಸ್ಥಿತಿಗೂ ಬಹಳ ಹೆಚ್ಚುಕಡಿಮೆಯುಂಟು. ತತ್ಕಾಲಕ್ಕೆ ಆಗುತ್ತಿರುವ ಪರಿಣಾಮದಿಂದಲೇ ಲೋಕದಲ್ಲಿ ಇಷ್ಟು ವಿಕಾರ ಕಲಹವು ಎದ್ದಿರುವದು. ಸದಾಚಾರಿಯು ತನ್ನ ಆಹ್ನಿಕದಲ್ಲಿ ಮಗ್ನನಾಗಿದ್ದರೆ, ಅಥವಾ ತನ್ನ ಆಹ್ನಿಕದ ಗುಂಗಿನಲ್ಲಿದ್ದರೆ, ಅನಿಷ್ಟ ಪರಿಣಾಮಗಳು ಒಮ್ಮೆಲೇ ಅವನ ಮನಸಿನ ಮೇಲೆ ಆಗದೆ ಹೋಗುವದರಿಂದ, ಆಚಾರಹೀನರಿಂದಾಗತಕ್ಕ ಕೇಡುಗಳು ಆಚಾರವಂತರಿಂದಾಗುವ ಸಂಭವವಿಲ್ಲ; ಆದುದರಿಂದ ಆಚಾರದಿಂದಿರುವದು ಅವನ ವಿವೇಕಾನುವರ್ತನಕ್ಕೆ ಎಷ್ಟೋ ಅನುಕೂಲತೆಯನ್ನು ಕೊಡುವದು. ಹೀಗಿದ್ದು ಒಳಗೂ ಹೊರಗೂ ನಿಜಸೂತ್ರವಿಡಿದು, ಸಕಲಸಾಧನವೃತ್ತಿಗಳು ಸರಿಯಾಗಿ ಬಳಿಸಲ್ಪಟ್ಟು, ಮೇಲೆ ಅಂತರ್ಮುಖತೆಯ ಸಾಧನವು; ಪಾಡು ಒತ್ತಿಗೆ

ಹಾಕಿ ಜಳಕೊಟ್ಟಂತಾಗುವದು. ಇದಲ್ಲದೆ ಶರೀರದಲ್ಲಿ ಒಂದು ಸ್ವಾಭಾವಿಕ ಧರ್ಮವುಂಟು; ಏನಂದರೆ—ಯಾವದೊಂದು ಸಂಗತಿಯಲ್ಲಿ ಒಂದು ತಾಸು ಎಷ್ಟೂ ಹೊಯ್ದಾಡದೆ ಏಕಮನದಿಂದಿರುವದನ್ನು, ಯಾವನಾದರೂ ಸಾಧಿಸಿಕೊಂಡದುದಾದರೆ, ಒಂದು ತಾಸಿನಲ್ಲಿ ಅವನ ಸಪ್ತಧಾತುಗಳಮೇಲೆ ಉಂಟಾದ ಆ ಸಂಗತಿಯ ಪರಿಣಾಮದ ಕಸುವು, ಏಳು ತಾಸಿನವರೆಗೆ ಉಳಿಯುವದು. ಈ ಧರ್ಮವನ್ನು ಕಂಡು ಹಿಡಿದು ಬೆಳಗಿನ ಬ್ರಾಹ್ಮೀ ಮುಹೂರ್ತದಲ್ಲಿ (ಮೂರುತಾಸು ರಾತ್ರಿ ಇರುತ್ತಲೆ) ಎದ್ದು ಪ್ರಾತರ್ವಿಧಿಯನ್ನು ತೀರಿಸಿ, ಒಂದು ತಾಸು ಏಕಮನದಿಂದ ಮಾಡಿದ ಆಹ್ನಿಕದ ಪರಿಣಾಮವು ಏಳುತಾಸು ಅಂದರೆ ಹನ್ನೆರಡು ಘಂಟೆಯವರೆಗೆ, ನಡುಹಗಲಲ್ಲಿ ಒಂದು ತಾಸು ಮಾಡಿದ್ದು ಹೊತ್ತುಮುಳುಗುವವರೆಗೆ, ಹೊತ್ತು ಮುಳುಗಿ ಒಂದು ತಾಸು ಮಾಡಿದ್ದು ನಿದ್ದೆಹತ್ತಿ ಪುನಃ ಏಳುವವರೆಗೆ ಇರುವದರಿಂದ, ಲೌಕಿಕಧರ್ಮವು ತ್ರಿಕಾಲಸಂಧ್ಯಾವಂದನವನ್ನು ಪ್ರತಿಪಾದಿಸುತ್ತಿರುವದು. ಇದರಿಂದ ಫಲಿಸುವದೇನಂದರೆ, ದಿನಾಲು ಮೂರುತಾಸು ಏಕಮನದಿಂದ ಆಹ್ನಿಕದಲ್ಲಿ ಇರುವದನ್ನು ಸಾಧಿಸಿಕೊಂಡವನು (೩×೭=೨೧) ತಾಸು ಆ ಆಹ್ನಿಕದ ಗುಂಗಿನಲ್ಲಿ ಇರಬಲ್ಲನು. ೨೧ ತಾಸು ಗುಂಗಿನಲ್ಲಿರುವದೂ, ೩ ತಾಸು ಆಹ್ನಿಕದಲ್ಲಿರುವದೂ, ಕೂಡಿ ಪುಟ್ಟಪೂರಾ ಒಂದು ದಿವಸವಾಯಿತು. ಸಾಮಾನ್ಯರು ದಿನವೊಂದಕ್ಕೆ ಒಮ್ಮೆಲೆ ಆಗಲಿ, ಎಲ್ಲ ಒಟ್ಟಿಗೂಡಿಯಾಗಲಿ, ಮೂರು ತಾಸು ಏಕಮನದಿಂದ ತಮ್ಮತಮ್ಮ ಇಷ್ಟದೇವತೆಯ ಉಪಾಸನೆಯನು ಮಾಡಿದರೆ, ಸಾಕು! ಅವರಿಂದ ಲೌಕಿಕಧರ್ಮವನ್ನು ಚನ್ನಾಗಿ ಕಾಯ್ದುಕೊಂಡು ಹೋಗಲಿಕ್ಕಾಗುವದು. ಇಂತಹವರಿಂದ ಲೋಕಕ್ಕೆ ಕೇಡು ಇಲ್ಲವಾದರೂ, ಇವರ ಸದಾಚರಣೆಯಿಂದ ನರಕದ ಯಾತನೆಯು ತಪ್ಪುವದಾದರೂ, ಸ್ವತಃ ಇವರ ಆತ್ಮಕ್ಕೆ ನಿಜೈಕ್ಯತೆಯು ಲಿಂಗಸಮರಸಯೋಗವಿಲ್ಲ ಕಾರಣ ಎಷ್ಟು ಆಚರಿಸಿದರೂ ಹಗಲೆಲ್ಲ ಹುಟ್ಟುಟ್ಟಿ ಬರುವವರೇ! ಆದೇ ಗುರುಲಿಂಗಜಂಗಮದ ದಾಸೋಹಿಗಳು ಈ ಸದಾಚರಣೆಯನ್ನು ಆಚರಿಸುತ್ತ ಅಂತರ್ಮುಖತೆಯನ್ನು ಸಾಧಿಸಿಕೊಂಡುದುದಾದರೆ, ಕುಂಬಾರನ ಆವಿಗೆಯಲ್ಲಿ ಮಣ್ಣು ಹಂಚಾದಂತೆ ಅಂಗರು ಲಿಂಗವಾಗುವರು. ಅಂತೇ ಶಿವಪೂಜೆಯಲ್ಲಿ ಇಷ್ಟವಿಡಿದು ರಾಜಯೋಗಮುದ್ರೆಯಲ್ಲಿ ಆಚರಿಸುವ ಅನುಸಂಧಾನಕ್ಕೆ ತಕ್ಕಷ್ಟೇ ಇಷ್ಟಲಿಂಗದ ಗಾತ್ರವನ್ನು ಮಾಡಿಕೊಂಡಿರುವರು. ಕಂತೀ ಕೂಡ್ರಿಸಿದ ಆಕಾರವೂ ಸಹಿತವಾಗಿ ಅದು ಬಹಳದೊಡ್ಡದೆಂದರೆ ಒಂದು ಜಂಬುನೇರಿಲ ಹಣ್ಣಿನಗಾತ್ರದಷ್ಟಿರುವದು. ಬಾಹ್ಯೇಂದ್ರಿಯಗಳ ಕೂಟಬಿಂದುವಿನಲ್ಲಿ (ಮೂಗಿನತುದಿಯಿಂದ ಹನ್ನೆರಡು ಅಂಗುಲಿಯ ಪ್ರಮಾಣದಲ್ಲಿ ಅದಕ್ಕೆ ನೆಟ್ಟಗಾಗಿ ಅವಕಾಶದೊಳಗಿನ ಒಂದು ಬಿಂದುವಿನಲ್ಲಿ), ರಾಜಯೋಗಮುದ್ರೆಯಲ್ಲಿ ಆಚರಿಸುವ ಭಕ್ತರು, ತಮ್ಮ ಇಷ್ಟಮೂರ್ತಿಯನ್ನು ಹಿಡಿದು, ಗುರುವು ದೀಕ್ಷಾಕಾಲದಲ್ಲಿ ಆತ್ಮನಿಗೆ ಪರಿಣಾಮವಾಗುವಂತೆ ಬೋಧಿಸಿ

ಸಿದ ನಿಜದ ನಿಜಸ್ವತಂತ್ರ ಮೂರ್ತಿಯನ್ನು ಮನದಲ್ಲಿ ಚಿಂತಿಸುತ್ತ, ಆ ಚಿಂತನ ಮೂರ್ತಿಯ ನಿಜದೃಷ್ಟಿಯು ಚ್ಯುತವಾಗದಂತೆ ಸ್ಥೂಲನೇತ್ರಗಳ ದೃಷ್ಟಿಯನ್ನು ನಾಶಿಕಾಗ್ರದಮೇಲಿಂದ ಕರದಿಷ್ಟದಲ್ಲಿ ನಿಲಿಸಿ, ಮಂದಶ್ವಾಸದಿಂದ ಆಲಿಗಳು ಚಲಿಸದಂತೆ ಅನಿಮಿಷ ದೃಷ್ಟಿಯಲ್ಲಿ ಒಂದೇಸವನೆ ಇರುವದನ್ನು ಸಾಧಿಸಿಕೊಂಡ ಮೇರೆಗೆ, ಇಂದ್ರಿಯಗಳ ಮುಖವು ಲಿಂಗದ ಕಡೆಗೆ ತಿರುಗಿ, ಗುರುಲಿಂಗಜಂಗಮದ ದಾಸೋಹವು ಒಳಹೊರಗೂ ಭದ್ರವಾಗಿ ಮೆಲ್ಲನೆ ಬಲಿಯಹತ್ತಿ, ಸಂಸ್ಕಾರ ದೋಷವು ತೊಳೆತೊಳೆದು, ನಿರಹಂಕಾರದ ಯೋಗದಲ್ಲಿ ಕ್ರಿಯಾಜ್ಞಾನಗಳ ಶುದ್ಧಿಯು ಸಹಜವಾಗಿ ಸಿದ್ಧಿಸುತ್ತ ಹೋಗುವದು. ಈ ಕ್ರಿಯಾಜ್ಞಾನಗಳ ಸಮರಸದ ಸಿದ್ಧಿಯೋಗದಿಂದಲ್ಲದೆ ಪ್ರಸಾದಪಾದೋದಕಗಳು ಜನಿಸವು.

ತಲೆಯ ಒಳಪ್ರದೇಶವು ಪೊಳ್ಳುಗೋಲದ ಒಟ್ಟಲದಂತಿದ್ದು ಅದರ ಘೋಕಸ ಬಿಂದುವಿನಲ್ಲಿ ಪಂಚೇಂದ್ರಿಯಗಳ ಕೂಟಸ್ಥಾನವಿರುವದರಿಂದ, ಆದಕ್ಕೆ ಎದುರಾಗಿ ಅವಕಾಶದೊಳಗಿನ, ಮತ್ತೊಂದು ಕಲ್ಪಿತವಾದ ಅಂತರ್ಗೋಲಾರ್ಧದೊಳಗಿನ ಘೋಕಸ ಬಿಂದುವಿನಲ್ಲಿ ಬಹಿರ್ಮುಖದ ಇಂದ್ರಿಯಗಳ ವ್ಯಾಪಾರವನ್ನೆಲ್ಲ ಒಟ್ಟುಗೂಡಿಸಲು ಬರುವದು. ಆ ಬಿಂದುವೇ ಮೂಗಿನ ತುದಿಗೆಸಿರ್ತಾಗಿ ಹನೆರಡು ಅಂಗುಲಿಯ ಪ್ರಮಾಣದಲ್ಲಿ ಹೊರಗೆ ಅವಕಾಶದಲ್ಲಿರುವದು. ಅದನ್ನೇ ನಿಜಾನುಭವದಿಂದ ಕಂಡುಕೊಂಡು ರಾಜಯೋಗಮುದ್ರೆಯ ಶಿವಪೂಜೆಯಲ್ಲಿ ಉಪಯೋಗಿಸಿಕೊಂಡಿರುವರು. ಲಿಂಗದಮೇಲೆ ಹೊದಿಸಿರುವ ಕಪ್ಪುಬಣ್ಣದ ಕಂತಿಯು ಪ್ರಕಾಶಕಿರಣಗಳನ್ನೆಲ್ಲ ತನ್ನಲ್ಲಿ ನುಂಗಿ ಆಚಲವಾದ ಅನಿಮಿಷದೃಷ್ಟಿಯನ್ನು ಎಷ್ಟೂ ಕೆಡಿಸಲಾರದು. ಇವೆಲ್ಲ ಶಾಸ್ತ್ರೀಯತತ್ತ್ವಗಳ ವಿವರವು. ಸೃಷ್ಟಿಜ್ಞಾನಶೋಧಕರಿಂದ ಪದಾರ್ಥವಿಜ್ಞಾನ ಶಾಸ್ತ್ರಗಳಲ್ಲಿ ಚೆನ್ನಾಗಿ ವಿವರಿಸಲ್ಪಟ್ಟಿರುವವು. ಆ ಶಾಸ್ತ್ರಗಳನ್ನು ಓದಿ ತಿಳಿದುಕೊಳ್ಳಲು ಸಮರ್ಥರಾದ ಜಿಜ್ಞಾಸುಗಳು ಅತ್ತಗಮನಿಸಬಹುದ.

ಪರಮಾತ್ಮಚಿಂತನೆಯಿಂದ ನಾಶಿಕಾಗ್ರದಲ್ಲಿ ದೃಷ್ಟಿಯನಿಟ್ಟು, ಸಾಧಿಸುತ್ತಿರುವ ರಾಜಯೋಗದ ಸಿದ್ಧಿಗೂ, ಗುರುಲಿಂಗಜಂಗಮದ ದಾಸೋಹದಿಂದ ಇಷ್ಟಲಿಂಗದಲ್ಲಿ ದೃಷ್ಟಿಯನಿಟ್ಟು ಸಾಧಿಸುತ್ತಿರುವ ಶಿವಪೂಜೆಗೂ, ಏನು ಹೆಚ್ಚುಕಡಿಮೆಯಿರುವದೆನ್ನುವದೊಂದು ಆಕ್ಷೇಪವು ಬರುತ್ತಿರುವದು. ರಾಜಯೋಗ ಸಿದ್ಧರು ಸಾಧಕರಿಗೆ ತಾವು ಕಂಡುದುದನೇ ಬೋಧಿಸಿ, ರಾಜಯೋಗಕೀಲವನ್ನು ತಿಳಿಸಿ ಕೊಟ್ಟು, ಅವೇ ಕೀಲದಲ್ಲಿಯೇ ಅಭ್ಯಾಸಿಸುತ್ತಿದ್ದಾಗ್ಯೂ, ಆ ಕೀಲವು ನಿಜಸೂತ್ರ ವಿಡಿದುದಾಗಲಾರದು. ಏಕಂದರೆ ಯೋನಿಮುಖದಿಂದ ದೇಹದ ಅಭಿಮಾನ ವಿಡಿದು ಬಂದ ಆತ್ಮರು, ಕಿವಿಯಿಂದ ಕೇಳಿದ ಮಾತ್ರದಿಂದ ಆ ದೇಹದ ಅಭಿಮಾನವ ಬಿಟ್ಟು, ಒಮ್ಮೆಲೆ ಕಿವಿಯಿಂದ ಜನಿಸಲಾರರು. ದೇಹಾಭಿಮಾನವು, ಸವಿ

ತ್ರ ಆಚರಣೆಯಿಂದ ಆತ್ಮರ ಸಂಸ್ಕಾರದೋಷವು ತೊಳೆದು, ಅನಿಷ್ಟ ಪರಿಹರಿಸಿ ಕೊಳ್ಳುವದರಿಂದ ಹಿಂಗುವದಾಗಿರುವದು. ಅನಿಷ್ಟಪರಿಹಾರವು ಕರದಿಷ್ಟವಿಡಿದು ಗುರುಲಿಂಗಜಂಗಮದಾಸೋಹವನಾಚರಿಸಿದ ಹೊರತು ಆಗಲಾರದು. ಈ ಅನಿಷ್ಟಪರಿಹಾರಕಯೋಗವಿಲ್ಲದೆ, ಬರೇ ಪರಮಾತ್ಮಚಿಂತನೆಯು ಯಾವ ಆತ್ಮರನ್ನೂ ಪರವಸ್ತುವನ್ನಾಗಿಸಲಾರದು. ಹಾಗಿರುತ್ತಿದ್ದರೆ ಲೋಕದಲ್ಲಿ ಇಷ್ಟು ಶೀಲ ನಿಯಮ, ನಿತ್ಯ, ಇತ್ಯಾದಿಗಳೇನು ಇರುತ್ತಿರಲಿಲ್ಲ. ಮೊದಲು ಯೋಗಸಿದ್ಧನಾಗಿ ಬೋಧಿಸುವವನ ಆತ್ಮಗ್ರಂಥಿಯೇ ಒಡೆದಿರುವದಿಲ್ಲ! ಆ ಯೋಗಸಿದ್ಧಿಗಳಿಂದಲೇ ದೊಡ್ಡವರಾಗಿ ತೋರುವರು. ಇದು, ಎಂತಹವರಾದರೂ ದುಡ್ಡುಳ್ಳವರು ದೊಡ್ಡವರಾದ ಪರಿಯಾದುದು. ದುಡ್ಡು ಕಳಕೊಂಡು ಶ್ರೀಮಂತನು ಕೂಡಲೆ ಬಡವನಾಗಿ ಬಿಡುವಂತೆ, ಸಿದ್ಧಿಯಿಂದ ದೊಡ್ಡವರಾದವರು ಸಿದ್ಧಿಯ ಸತ್ತ್ವವು ನಿಂತಾಗಲೆ ಸಾಮಾನ್ಯರಾಗುವರು. ಮತ್ತು ದುಡ್ಡಿದ್ದಾಗ್ಗೆ ಅವರ ವೈಭವದಲ್ಲಿ ಅಡಗಿದ ಅವಗುಣಗಳೂ ವ್ಯಕ್ತವಾಗುವವು. ಆದುದರಿಂದ ಆತ್ಮಗ್ರಂಥಿಯನೊಡಕೊಳ್ಳದ ಯೋಗಸಿದ್ಧರು ನಿಜಲಿಂಗಸೂತ್ರವನ್ನು ಯೋಜಿಸಲು ಯಾವರೀತಿಯಿಂದಲೂ ಅಧಿಕಾರಿಗಳಲ್ಲ! ಸಾಲೆಯನ್ನು ಬರೆಯಿಸುವವರು ಕಲಿಯುವ ಮಕ್ಕಳಿಗೆ ಗುರುವಾದಂತೆ, ಗರಡೀಮನೆಯ ವಸ್ತಾದನು ಗರಡೀ ಸಾಧಕರಿಗೆ ಗುರುವಾದಂತೆ, ಯೋಗಸಾಧಕರಿಗೆ ಯೋಗಸಿದ್ಧರು ಗುರುಗಳಾಗಿರಬಹುದು. ಈ ಯೋಗಸಿದ್ಧರೂ, ಆ ಸಾಧಕರೂ ಆತ್ಮಗ್ರಂಥಿಯನ್ನೊಡೆದುಕೊಂಡು ಲಿಂಗವಾಗಲು ಸ್ಥೂಲಕಾಯವಿಡಿದು ಇಷ್ಟವ ಧರಿಸಿ ನಿಜಸೂತ್ರವ ಹೊಂದಿ ಆಚರಿಸಲೇ ಬೇಕಾಗುವದು. ಸ್ವರಾಜ್ಯದ ಪ್ರಜಗಳಾಗಲು ಇದೊಂದೇ ಮಾರ್ಗವು ಕಾಯದ ಹಂಗಿನಿಂದ ಕಾಯರೂಪರಾದ ಆತ್ಮರನು ಬರೇ ಅನುಭವದ ಮಾತುಗಳಿಂದ ಯೋಗಸಮಾಧಿಯ ಬಂಧನದಲ್ಲಿರಿಸಿ, ಮುಕ್ತರನ್ನು ಮಾಡುವೆನೆಂದರೆ ಬೆಳಕನ್ನು ಸಹಿಸಲಾಗದ ಕಣ್ಣುಕಪ್ಪಡೆ ಗೂಗೆ ಮುಂತಾದವುಗಳನ್ನು ಬಂಧನದಲ್ಲಿರಿಸಿ ಮುಂದೆ ನಂದಾದೀವಿಗೆಯನ್ನು ಇಟ್ಟಂತೆ ಸೈ! ಕಾಯಶುದ್ಧಿಯ ಯೋಗವಿಲ್ಲದೆ ಯೋಗದ ಬಂಧನದಲ್ಲಿ ಸಿದ್ಧರಾಗಿ ಬೆಳೆದ ಯೋಗಿಗಳು, ಇಂತಹ ಬಂಧನದಲ್ಲಿದ್ದು ಯೋಗಸಾಧನವನ್ನು ಅಭ್ಯಾಸಿಸಲು ತಕ್ಕಪಾತ್ರತೆಯನ್ನು ಸಾಧಿಸಿಕೊಂಡ ಹೊರತು, (ಸಾಧನಚತುಷ್ಟಯಸಂಪನ್ನರಾದ ಹೊರತು) ಬೋಧಿಸಲು ಬರುವದೇ ಇಲ್ಲ! ಕಡೆಗೆ ಆ ಗುರುಗಳೂ, ಈ ಶಿಷ್ಯರೂ ಕೂಡಿ ಸಿದ್ಧಿಯ ವ್ಯಾಪಾರವನ್ನೆಲ್ಲ ತೀರಿಸಿಕೊಂಡು, ಸಾಧನಚತುಷ್ಟಯಸಂಪನ್ನತೆಯ ಮೆಟ್ಟಿಗೆ ಬಂದು (ಸಹಜರೂಪದಿಂದ ತಾವಾಗಿಯೇ ಇಳಿದು) ಆತ್ಮಗ್ರಂಥಿಯನ್ನು ಒಡೆದುಕೊಳ್ಳಲು ಸ್ಥಲಗೂಡಿ ಸಹಜದ ಕೂಡ ಸಹಜವಾಗಿ ಸಹಜದಲ್ಲಿ ಇರೆನು ಸುಟ್ಟಧಾರವಂತೆ ವ್ಯವಹರಿಸುವ ಶಿವಯೋಗಸಂಪನ್ನರನ್ನು ಹುಡುಕಿ ನಿಜಸೂತ್ರಕ್ಕೊಳಪಟ್ಟು, ಅವರ ಕರುಣಿಸಿದ ಇಷ್ಟವ ಹಿಡಿದು ಗುರುಲಿಂಗಜಂಗಮದ ದಾಸೋಹವನ್ನು ಮಾಡಲೇ ಬೇ

ಕಾಗುವದು. ಆತ್ಮರ ಆತ್ಮಗ್ರಂಥಿಯು ಒಡೆಯದಿರಲಿಕ್ಕೆ ಮೂಲಾಹಂಕಾರವೇ ಕಾರಣವು. ಈ ಮೂಲಾಹಂಕಾರವು ಒಳಗೂ ಹೊರಗೂ ಗುರುಲಿಂಗಜಂಗಮದ ದಾಸೋಹವಿಲ್ಲದೆ ಕೆಡದು. ನಿಜದನೆಲೆಗೆ ಮುಟ್ಟದ ಗುರುಗಳು, ತಮ್ಮ ಸಿದ್ಧಿಗೆ ಮೋಹಿಸಿ ತಮ್ಮ ಮೊರೆಬಿದ್ದ ಶಿಷ್ಯರಿಗೆ ಬೋಧಿಸವದೆಂದರೆ, ಬಂದು ಹೋದವರ ಸುಳುವು ಹಿಡಿಯುವಷ್ಟು ಮಂದದೃಷ್ಟಿಯುಳ್ಳವರು ಹುಟ್ಟುಗುರುಡರನ್ನೇ ಒಂದರ ಹಿಂದೊಂದು ಸಾಲಾಗಿ ತಳಿಹಿಡಿದು ಎಲ್ಲಿಯೋ ಕರೆಕೊಂಡು ಸಾಗಿರುವಂತೆ ಸೈ! ಇಂತಪ್ಪ ಗ್ರಂಥಿಯೊಡೆಯುದ ಮಂದದೃಷ್ಟಿಯು ಗುರುಗಳಿಂದ ಹೊಂದಿದ ಮಂತ್ರಸ್ವರೂಪವು ಶಿಷ್ಯನ ಅಧಿಕಾರದ ಮೇರೆಗೆ ಅವರವರ ಕಲ್ಪನೆಗೆ ಹರಿದಷ್ಟು ಕಲ್ಪಿಸಿದ ಭಾವವಾಗಿರುವವು. ಇಂತಹ ಕಲ್ಪಕಭಾವದಲ್ಲಿ ನಾಶಿಕಾಗ್ರದಲ್ಲಿ ದೃಷ್ಟಿಯನಿಟ್ಟು, ಸಮಾಧಿಯನ್ನು ಬೆಳಿಸುವದೆಂದರೆ, ತನ್ನಸ್ವರೂಪದಲ್ಲಿಯೇ ತಾನೇ ಬೆಳೆಯುವದಾಗಿರುವದು. ಅದೇ ನಿಜಸೂತ್ರವಿಡಿದು ಆಚರಿಸುವ ಗುರುಲಿಂಗಜಂಗಮದ ದಾಸೋಹದಲ್ಲಿ ತನ್ನನ್ನು ಕ್ಷಯಿಸಿಕೊಳ್ಳುವ ಭಕ್ತಿಪರವಶತೆಯ ಯೋಗವಿರುವದರಿಂದ, ಕ್ರಮೇಣ ಆತ್ಮಗ್ರಂಥಿಯು ಬಿಚ್ಚುತ್ತ, ಕ್ರಿಯಾಶುದ್ಧಿಯಿಂದ ಸಂಸ್ಕಾರದೋಷವು ತೊಳೆಯುತ್ತ, ಆತ್ಮರು ಮೆಲ್ಲಮೆಲ್ಲನೆ ಲಿಂಗಸಾಮರಸ್ಯವನ್ನು ಸಹಜವಾಗಿ ಹೊಂದುತ್ತಿರುವರು.

ಇಷ್ಟೆಲ್ಲ ವಿವರಿಸಿದರೂ ಇನ್ನೂ ಒಂದು ದೊಡ್ಡ ಆಕ್ಷೇಪವು ಉಳಿದೇ ಉಳಿಯುವದು; ಏನಂದರೆ ಕರದಿಷ್ಟವಿಡಿದು ಗುರುಲಿಂಗಜಂಗಮದ ದಾಸೋಹವನ್ನು ಆಚರಿಸಿದರೂ ಆಚರಿಸಲಿ; ಅದನ್ನು ಯಾವಾಗಲೂ ಕೊರಳಲ್ಲಿ ಧರಿಸಿರುವದೇತಕೆ? ಕಾಯಕವನಾಚರಿಸುವಕಾಲಕ್ಕೆ ಕರದಿಷ್ಟದ ಆಗತ್ಯವು ಇರುವದಿಲ್ಲ; ಆಗ್ಗೆ ಧರಿಸುವದು ನಿಷ್ಪ್ರಯೋಜನವು. ಈ ಆಕ್ಷೇಪಕ್ಕೆ ಪರಾಭವವು. ಮಾನವನ ಸಕಲಜ್ಞಾನೇಂದ್ರಿಯ ವ್ಯಾಪಾರಗಳೆಲ್ಲ ಸ್ಪರ್ಶದಿಂದಲೇ ನಡೆಯುವವು. ಶಬ್ದಕ್ಕೆ ಆಕಾಶತತ್ತ್ವವೇ ಮೂಲವೆಂದರೂ, ಪದಾರ್ಥಗಳ ಕಂಪನದ ತರಂಗಗಳು ಕಿವಿಯೊಳಗಿನ ಸೂಕ್ಷ್ಮವಾದ ಪಡದೆಗಳಿಗೆ ತಾಕದೆ ಕೇಳಲಾರವು. ರೂಪಕ್ಕೆ ಅಗ್ನಿತತ್ತ್ವವೇ ಮೂಲವೆಂದರೂ, ಪ್ರಕಾಶಕಿರಣಗಳು ಪದಾರ್ಥಗಳ ಮೇಲೆ ಬಿದ್ದು ಅಲ್ಲಿಂದ ಪರಾವರ್ತನ ಹೊಂದಿ ಕಣ್ಣಲ್ಲಿ ಸೇರಿ ಒಳಗಿನ ಚಿತ್ರಪಟಲಕ್ಕೆ ಸೋಂಕಿ ಆ ಪದಾರ್ಥಗಳ ಪ್ರತಿಬಿಂಬವು ಮೂಡಿದ ಹೊರತು, ಅವು ಕಾಣಲಾರವು. ಗಂಧಕ್ಕೆ ಭೂತತ್ತ್ವವೇ ಕಾರಣವಾದರೂ, ಪದಾರ್ಥಗಳೊಳಗಿನ ಸೂಕ್ಷ್ಮವಾದ ವಾಸನೆಯ ಪರಮಾಣುಗಳು ವಾಯುವಿನ ದ್ವಾರಾ ಬಂದು ಮೂಗಿನ ಸೂಕ್ಷ್ಮ ಅವಯವಕ್ಕೆ ತಾಕಿದ ಹೊರತು,ವಾಸನೆಯ ಜ್ಞಾನವಾಗುವದಿಲ್ಲ; ರುಚಿಗೆ ಅಪ್ಪುತತ್ತ್ವವೇ ಕಾರಣವಾದರೂ, ಸ್ಪರ್ಶಕ್ಕೆ ವಾಯುತತ್ತ್ವವೇ ಕಾರಣವಾದರೂ, ಪದಾರ್ಥಗಳು ನಾಲಿಗೆಗೂ, ಚರ್ಮಕ್ಕೂ ಮುಟ್ಟದ ಹೊರತು, ಅವುಗಳ ಜ್ಞಾನವಾಗದು. ಇನ್ನು ಚರ್ಮೇಂದ್ರಿಯಂತೂ ಮೈತುಂಬ ಹೊದಿಸಿರುವದು. ಜೀವನ ಕಾರ್ಯ

ವು ವನಸ್ಪತಿಕೋಟಿಯಿಂದ ಆರಂಭವಾಗುವದು. ವನಸ್ಪತಿಗಳಲ್ಲಿ ಯಾವ ಜ್ಞಾನೇಂದ್ರಿಯಗಳು ತೋರದಿದ್ದರೂ, ನೀರಲ್ಲಿ ಬೆರೆತು ಬಂದ ತತ್ತ್ವಗಳಲ್ಲಿ ತಮಗೆ ಬೇಕಾದ ಸಾರವನ್ನೇ ಬೇರುಗಳ ಮುಖದಿಂದ ಹೀರಿಕೊಂಡು ಬೆಳೆಯುವದರಿಂದಲೂ, ಕೆಲವು ವನಸ್ಪತಿಗಳಿಗೆ ಮುಟ್ಟಿದ್ದು ತಿಳಿಯುವದು ಪ್ರತ್ಯಕ್ಷ ಕಂಡುಬರುವದರಿಂದಲೂ, ಸೃಷ್ಟಿಯ ಉತ್ಪತ್ತಿಯ ವ್ಯಾಪಾರವೆಲ್ಲ ಎಲ್ಲ ಕಡೆಗೆ ಒಂದೇ ಪರಿಯಾಗಿರುವದರಿಂದಲೂ, ಅವುಗಳಿಗೆ ರಸನೇಂದ್ರಿಯವೂ ಸ್ಪರ್ಶೇಂದ್ರಿಯವೂ ಇಲ್ಲವೆನಲಿಕ್ಕೆ ಬರುವದಿಲ್ಲ. ಕಾರಣ ಸಚೇತನಕೋಟಿಗೆಲ್ಲ ರಸನೇಂದ್ರಿಯವೂ ಸ್ಪರ್ಶೇಂದ್ರಿಯವೂ ಇರುವದಾಯಿತು. ಸಚೇತನ ಕೋಟಿಯಲ್ಲಿ ತಲೆಯೆತ್ತಿದ ಆತ್ಮರೆಲ್ಲರೂ, ಹಗಲೂ ರಾತ್ರಿಯೆನ್ನದೆ ತ್ರಿವಿಧಾವಸ್ಥೆಗಳಲ್ಲಿಯೂ ಸ್ಪರ್ಶೇಂದ್ರಿಯದ ವ್ಯಾಪಾರದಲ್ಲಿ ಇದ್ದೇ ಇರುವರು. ರಸನೇಂದ್ರಿಯದ ವ್ಯಾಪಾರವು ಊಟದ ಸಮಯದಲ್ಲಿ, ಮಾತ್ರ ನಡೆಯುವದು. ಆದುದರಿಂದ ಜೀವರೆಲ್ಲ ಸ್ಪರ್ಶ ಹಾಗು ರಸನೇಂದ್ರಿಯಗಳ ವ್ಯಾಪಾರದಿಂದಲೇ ಬೆಳೆದವರಾದಾಗ್ಯೂ, ಸ್ಪರ್ಶೇಂದ್ರಿಯ ವ್ಯಾಪಾರದಲ್ಲಿ ಲೋಕದಲ್ಲಿ ವನಸ್ಪತಿಗಳ ಪ್ರಾದುರ್ಭಾವವು ಆದಂದಿನಿಂದ ಅಖಂಡವಾಗಿ ಇದ್ದೇ ಇರುವರು ಕಾರಣ ಆತ್ಮರಿಗೆ ಬಾಯತಿಂಡಿಯ ವಿಕಾರಕಿಂತಲು ಶರೀರ ತಿಂಡಿಯ ವಿಕಾರವು ಹೆಚ್ಚು. ಬಾಯ ತಿಂಡಿಯು ಉಂಡ ಊಟದಿಂದಲೇ ಶಾಂತವಾಗುವದು. ಶರೀರತಿಂಡಿಯು ಕೂಡಿದ ಕೂಟದಿಂದಲೇ ಶಾಂತವಾಗುವದು. ಚಲಿಸ್ಯಾಡುವ ಪ್ರಾಣಿಗಳಿಗೆ ಹೆಚ್ಚಿನ ಇಂದ್ರಿಯಗಳು ಇರುತ್ತಿದ್ದಾಗ್ಯೂ, ಅವೆಲ್ಲವುಗಳ ವ್ಯಾಪಾರವನ್ನು ಆತ್ಮರು ಊಟಕೂಟಗಳ ವ್ಯಾಪಾರಕ್ಕಾಗಿಯೇ ಉಪಯೋಗಿಸಿಕೊಳ್ಳುವರು. ಹಸಿವು ತೃಷಿಗಳಿಗಾಗಿ ಬಳಲುವ ಆತ್ಮರು ನಾಲಿಗೆಯ ರುಚಿಯಿಂದಲೂ ಕೂಟಸುಖದ ಭ್ರಮೆಯಿಂದಲೂ ಇರುವದು ಎಲ್ಲೆಲ್ಲಿಲ್ಲ ಕಂಡು ಬರುವದು. ನಿದ್ರೆಯಲ್ಲಿಯೂ ಕೂಡ ನಡಿಸಬಹುದಾದ ಕೂಟಸುಖದ ಭೋಗವೂ, ನಾಲಿಗಿಯ ರುಚಿಯೂ ಅಂದಿನಿಂದ ಇಂದಿನವರೆಗೆ ಒಂದೇಸವನೆ ಬೆಳೆಯುತ್ತಿರುವದರಿಂದ ಆತ್ಮರ ಭೋಗತೃಷ್ಣೆಗೆ, ತೋರುವ ತೋರಿಕೆಯಲ್ಲವೂ ಕೈವಶವಾದರೂ ಸಾಲದಾಗಿರುವದು ಕನಸಿನಲ್ಲಿ ಸ್ಪರ್ಶೇಂದ್ರಿಯದ ಹೊರತು ಕಂಡ ಉಳಿದ ಇಂದ್ರಿಯಗಳ ವ್ಯಾಪಾರದ ಪರಿಣಾಮವು ಸ್ಥೂಲದೇಹದ ಮೇಲೆ ಏನು ಆಗಿರುವದಿಲ್ಲ; ಆದರೆ ಸ್ಪರ್ಶೇಂದ್ರಿಯದ ಭೋಗದ ಪರಿಣಾಮವು ಕಂಡುಬರುವದು; ಯಾಕಂದರೆ ಕನಸಿನಲ್ಲಿ ಉಂಡ ಊಟದಿಂದ ಹೊಟ್ಟೆಯು ತುಂಬಿರುವದಿಲ್ಲ. ಅದೇ ಕೂಟಭೋಗದ ಪರಿಣಾಮವು ಕನಸಿನಲ್ಲಿಯೂ ಎಚ್ಚರದಲ್ಲಿಯೂ ಒಂದೇಯಾಗಿರುವದು. ಕಾರಣ ಕೂಟಭೋಗದ ಸುಖಕ್ಕಾಗಿಯೇ ಸ್ವರ್ಗವು ನಿರ್ಮಿತವಾಗಿರುವದು. ಇಹಲೋಕದ ಸುಖಸಾಧನಗಳನ್ನೆಲ್ಲ ಸ್ವರ್ಗಸುಖಕ್ಕಾಗಿ ಧರ್ಮದ ನಿಯಮಗಳಲ್ಲಿ ಈಡಾಡುವ ಆತ್ಮರು ದೊಡ್ಡವರಾಗಿ ಕಂಡರೂ, ಗುಪ್ತರೀತಿಯಿಂದ [illegible] ಪ್ರಾಣಿಗಳಿಗೆ

ಊಟಕೂಟಗಳ ವಿಕಾರವಿದ್ದಷ್ಟು ಇನ್ನಾವದರದೂ ಇರುವದಿಲ್ಲ. ಅವೆರಡರಲ್ಲಿ ಕೂಟದ ವಿಕಾರವೇ ಬಲುದೊಡ್ಡದು. ಅಂತರಂಗದಲ್ಲಿ ಇಂದ್ರಿಯಗಳ ಕಾಡಾಟವು ನಾಮಶೇಷವಾದುದರ ಕುರುಹು ಕಟೀಂದ್ರಿಯದ ವಿಕಾರವು ಕುಂದಿರುವದಾಗಿರುವದು. ಕನಸಿನಲ್ಲಿಯೂ ಕೂಡ ರತಿಸುಖಕೆ ಎಳಸದಂತಾಗುವವನು ಆತ್ಮಗ್ರಂಥಿಯು ಒಡೆಯದ ಹೊರತು ಸಾಧಿಸುವದು ಯಾರಿಗೂ ಶಕ್ಯವಿಲ್ಲ. ಏಕಂದರೆ ಕೂಟವಿಕಾರವೇ ಆತ್ಮದ ಅಂಗಭೂತಗುಣವಾಗಿ ಬಿಟ್ಟಿರುವದು. ಇಂತಹ ಕನಸಿನ ಕಳ್ಳರು ಲಾಂಛನವ ಧರಿಸಿ ಊರೂರು ತಿರುಗಿದರೇನ? ಊರುಬಿಟ್ಟು ಅಡವಿಸೇರಿ ಕಂದಮೂಲಾದಿಗಳನ್ನು ಸೇವಿಸುತ್ತ ಯೋಗಸಾಧನದಲ್ಲಿದ್ದರೇನು? ಎಲ್ಲಿಹೋದರೂ ಏನುಮಾಡಿದರೂ, ಎಂಥಘನತೆಯಿಂದರೂ ಕೂಟೇಂದ್ರಿಯದ ವಿಕಾರವು ಗುರುಲಿಂಗ ಜಂಗಮದಾಸೋಹದಿಂದ ಆತ್ಮಗ್ರಂಥಿಯನ್ನು ಒಡಕೊಂಡ ಹೊರತು, ಕುಂದದು. ಬ್ರಹ್ಮನು ಚಿಗರಿಯಾಗಿ ಮಗಳ ಬೆನ್ನು ಹತ್ತಿದನು ವಿಷ್ಣುವು ಇದಕ್ಕಾಗಿಯೇ ಒಂದು ಅವತಾರವನ್ನು ಹೂಡಿದನು. ರುದ್ರನು ಮೋಹಿನಿಗೆ ಮೋಹಿಸಿದನು. ಆದುದರಿಂದ ಇವರೆಲ್ಲರೂ ಆತ್ಮಗ್ರಂಥಿಯುಳ್ಳವರು. ಈ ಗ್ರಂಥಿಯು ಸ್ಥೂಲದೇಹವಿಡಿದು ಆಚರಿಸಿದ ಹೊರತು ಎಂದೂ ಒಡೆಯದು. ಏಕಂದರೆ ಇದನ್ನು ಸ್ಥೂಲದೇಹದಿಂದಲೇ ಗಳಿಸಿ ಕೊಂಡುದಾಗಿರುವದು. ಕಾರಣ ಊಟಕೂಟಗಳ ವಿಕಾರವನ್ನು ಲಿಂಗಾನುಸಂಧಾನದಲ್ಲಿಯೇ ಲಿಂಗೋಪಭೋಗವನ್ನಾಗಿಸಿ ಹಿಂಗಿಸಿಕೊಳ್ಳುವದೇ ತ್ಯಾಗಾಂಗವು. ಈ ತ್ಯಾಗಾಂಗವು ಸಾಧ್ಯವಾದ ಹೊರತು ಭೋಗಾಂಗದ ನೆಲೆಯು ಸಿಲುಕದು. ಭೋಗಾಂಗಿಗಳೇ ನಿಜಲಿಂಗಸಂಗದ ಮೂರು ದೇಹಗಳಿಂದ ಪತಿವ್ರತೆಯರೂ, ಏಕಪತ್ನಿವ್ರತಸ್ಥರೂ ಆಗಿ ಇರಬಲ್ಲರು. ಮಿಕ್ಕವರೆಲ್ಲ ವಿಕಾರಮಯರೇ! ಇಂತಹ ವಿಕಾರಮಯರು ಇನ್ನುಳಿದವರ ಸ್ಪರ್ಶದೋಷದಿಂದ ನಾವು ಕೆಡಬಾರದೆಂದು ಎಷ್ಟು ಹಾರಾಡಿದರೂ, ಪದಾರ್ಥಗಳ ಪೂರ್ವಾಶ್ರಯವನ್ನು ಅಳಿದು, ಲಿಂಗಾರ್ಪಿತಕ್ಕಾಗಿ ಪಾವರ್ತಿಸಲಾರದವರ ಊಟಕೂಟಗಳಲ್ಲಿ ಹೋಗಬಾರದ ದೋಷವು ತಾನೇ ಒಳಸೇರುವದು. ಇನ್ನು ದೂಷಿತವಾದ ವಾತಾವರಣವು ಗವಿಯಲ್ಲಿ ಹೊಕ್ಕರೂ ಬಿಡದು. ಎಲ್ಲಿದ್ದರೂ ಪ್ರತಿಶ್ವಾಸಕ್ಕೆ ಒಳಸೇರುವದೇ! ಈ ಅವ್ಯಾಹತವಾಗಿ ನಡೆದಿರುವ ಪಂಚದ್ವಾರಗಳ ವ್ಯಾಪಾರವೆಲ್ಲ ಲಿಂಗಮಯವಾಗುವಂತೆ ಸಿರಹಂಕಾರದ ಅರುಹಿನ ಎಚ್ಚರವನ್ನು ಕಾಯ್ದುಕೊಳ್ಳಬೇಕಾದರೆ, ಒಳಹೊರಗೂ ಕಾಯಶುದ್ಧವಾದ ಎಷ್ಟೂ ಚ್ಯುತಿಯಿಲ್ಲದ ಅಂದರೆ ಆಹ್ವಾನವಿಸರ್ಜನವಿಲ್ಲದ ಕಾರ್ಯವ್ಯಾಪಾರವು ಬೇಕೇಬೇಕ. ಕಾಯಕವು ಪೂಜೆಗೆ ಹೊರತಾದುದಲ್ಲ! ಕಾಯಕದಿಂದ ಸಹಜವಾಗಿ ಜಂಗುವದಾದ ಕಾಯಪೋಷಣವೂ ಕೂಡ, ಲಿಂಗದ ವ್ಯಕ್ತಕಾರ್ಯವಾಗಿರುವದು. ಕಾಯಕದಲ್ಲಿ ಲಿಂಗಕ್ಕೆ ಹೊರತಾಗಿರುವನೆಂಬ ಅಲ್ಪವೃತ್ತಿಯ ತಪ್ಪುತಿಳುವಳಿಕೆಯೇ ಈ ಶಂಕೆಗೆ ಕಾರಣವಾಗಿರುವದಲ್ಲದೆ, ಲಿಂಗಕಾಯದ ಪರಿಪೂರ್ಣ

ವ್ಯಾಪಾರವನ್ನು ಅರಿತಲ್ಲಿ ಅದು ತನ್ನಿಂದ ತಾನೇ ಹೇಳಹೆಸರಿಲ್ಲವಾಗುವದು. ಕಾರಣ ದೇಹದಿಂದ ಇಷ್ಟವನ್ನು ಎಷ್ಟೂ ಅಗಲಿಸಲು ಅವಕಾಶವಿಲ್ಲವು. ಕಾಯವಿಡಿದಾಚರಿಸುವ ಆತ್ಮರ ಲಿಂಗವ್ಯಾಪಾರವು ಉರಿಯುವ ಜ್ಯೋತಿಗೆ ಸರಿಯಾದುದು. ಬತ್ತಿಯಲ್ಲಿ ಎಣ್ಣೆಯು ಏರುವದು, ಏರಿಬಂದುದೂ ವಾಯುರೂಪ (ಗ್ಯಾಸ) ವಾಗುವದೂ, ಆ ಗ್ಯಾಸಿಗೆ ಉರಿಯು ಆವರಿಸುವದೂ ಈ ಅಂತರಿಕ ಕಾರ್ಯಗಳು ನಡೆದಿರುವಂತೆ ಬಾಹ್ಯದಲ್ಲಿ ಪಣತಿ ಎಣ್ಣೆಬತ್ತಿಗಳ ಸ್ಥೂಲ ಕಾರ್ಯಗಳು ಬೇಕೇ ಬೇಕಾಗುವವು. ಈ ಒಳಹೊರಗಿನ ವ್ಯಾಪಾರಗಳಿಗೆ ಬತ್ತಿಯೇ ಸಾಮರಸ್ಯವಾಗಿ ಪ್ರತ್ಯಕ್ಷ ಸಾಧನವಾದುದು. ಸ್ಥೂಲದ ಮೇಲೆ ಧರಿಸಿದ ಇಷ್ಟವು ಸಾಧಕರಿಗೆ ಬತ್ತಿಗೆಸಮವಾದುದು. ಸಿದ್ಧರಿಗೆ ಜ್ಯೋತಿಗೆ ಸಮವಾದುದು. ಬತ್ತಿಯನ್ನು ತೆಗೆದರೆ ಜ್ಯೋತಿಯೂ ಹೋಗಿ ಬರೆ ಪಣತಿ ಎಣ್ಣೆಗಳು ಉಳಿಯುವಂತೆ ಕಾಯಜೀವಗಳೆರಡು ಉಳಿಯುವವು. ಲೋಕದ ವಿಕಾರವೂ ಆತ್ಮರ ಸಂಸ್ಕಾರವೂ ಸ್ಪರ್ಶದೋಷದಿಂದಲೇ ಬೆಳೆದಿರುವದರಿಂದಲೂ, ಯಾವತ್ತು ಇಂದ್ರಿಯಜ್ಞಾನದ ವ್ಯಾಪಾರವು ಸ್ಪರ್ಶದಿಂದಲೇ ನಡೆದಿರುವದರಿಂದಲೂ, ಕಾಯಕವು ಒಳಹೊರಗೂ ಸ್ಪರ್ಶೇಂದ್ರಿಯಮಯವಾಗಿರುವದರಿಂದಲೂ, ಇವೆಲ್ಲ ಸ್ಪರ್ಶದೋಷಗಳನ್ನು ಪವಿತ್ರವಾದ ಸ್ಪರ್ಶದಿಂದಲೇ ನಿವಾರಿಸಬೇಕಾಗಿರುವದರಿಂದಲೂ ಸ್ಪರ್ಶೇಂದ್ರಿಯ ಪವಿತ್ರತೆಗಾಗಿ ಬಾಹ್ಯೇಷ್ಟದ ಸ್ಪರ್ಶವು ಸ್ಪರ್ಶೇಂದ್ರಿಯದಿಂದ ಎಷ್ಟೂ ಅಗಲದಂತೆ ಕಾಯ್ದುಕೊಳ್ಳಬೇಕಾಗುವದು. ಆದುದರಿಂದ ಇಷ್ಟವನ್ನು ಬಿಟ್ಟು ಎಷ್ಟೂ ಇರಲಿಕ್ಕಾಗದು. ಭೋಗಾಂಗದ ನೆಲೆಗೆ ಹಾದ ತ್ಯಾಗಾಂಗಸಾಧಕನು ತನ್ನ ಸಾಧಕದೆಸೆಯಲ್ಲಿ ಹಿಡಿದೂ ಬಿಟ್ಟೂ ನಡೆದಿರುವ ಅನುಸಂಧಾನದ ಸ್ಥಿತಿಯಲ್ಲಿ ಕಾಯಕ ಮಾಡಿ, ಪೊಂದಿದುದನೆಲ್ಲ ವೆಚ್ಚಮಾಡಿ, ಸಿದ್ಧಿಸಿದ ಪಾಕವನೆಲ್ಲ, ಭೋಗಾಂಗದ ನೆಲೆಯಲ್ಲಿ ನಿಂತು ಆಚರಿಸುವ ಭಕ್ತರ ಪವಿತ್ರವಾದ ಸ್ಪರ್ಶದಿಂದ ಅದರ ಪೂರ್ವಾಶ್ರಯವನ್ನು ಕಳೆಯಿಸಿ, ಒಳಗಿನ ಅನುಸಂಧಾನವು ಎಷ್ಟೂ ಕೆಡದಂತೆ ಅರ್ಪಿಸಿಕೊಂಡಲ್ಲಿ ಅವನ ಕಾಯಕವ್ಯಾಪಾರವೆಲ್ಲ ಸಮರಸಗೊಂಡು ಕ್ರಿಯಾಚಾರವೆನಿಸುವದು. ಆದುದರಿಂದ ಭಕ್ತರು ಭಕ್ತರ ಒಕ್ಕುದುದರಿಂದಲೇ ಬಾಳವದಾಗಿರುವದು. ಕಾರಣ ಸೂತಕಿಯು ಗುರುಲಿಂಗಜಂಗಮದ ದಾಸೋಹಕ್ಕೆ ಎಷ್ಟೂ ಪಾತ್ರನಲ್ಲವು ಪಂಚಮಹಾಪಾತಕದ ಸುಳಿಗಾಳಿಗೂ ಸಹ, ಆಸ್ಪದವಿಲ್ಲದ ಬಾಹ್ಯವ್ಯಾಪಾರವು ಪಾಣಿ-ಮಾಣ ವಾಣಿಗಳ ನಿರ್ದೋಷ ವೃತ್ತಿಯು ಕುರುಹಾಗಿರುವದು ಪಂಚಸೂತಕಗಳ ಸುಳಿಗಾಳಿಗೂ ಸಹ ಆಸ್ಪದವಿಲ್ಲದ ಅಂತರಿಕ ವ್ಯಾಪಾರವು ತ್ರಿಕರಣ (ತನು.ಮನ ಭಾವ) ಶುದ್ಧಿಯು ಕುರುಹಾಗಿರುವದು. ಇದೇ ಶಿವಧರ್ಮವು. ಈ ಶಿವಧರ್ಮವು ಅಳವಟ್ಟ ಹೊರತು, ಲಿಂಗವಿಡಿದು, ಗುಲಿಂಗಜಂಗಮದ ದಾಸೋಹವನ್ನು ಆಚರಿಸಲು ಅಧಿಕಾರವು ಯಾರಿಗೂ ಬರಲಾರದು. ಗುರುಪಥವಮೆಟ್ಟದೆ ಶಿವಪಥವು ದೊರೆಯದು,

ಭಕ್ತರ ದಾಸೋಹವಿಲ್ಲದೆ ಲಿಂಗವು ದೊರಕೊಳ್ಳದು. ಶಿವಪಥಕ್ಕಾಗಿ ಗುರುಕೊಟ್ಟ ಇಷ್ಟವು ನಿಜೇಷ್ಟವಲ್ಲದುದರಿಂದ, ನಿಜದೀಕ್ಷಾಕಾಲದಲ್ಲಿ ನಿಜಸೂತ್ರವನ್ನು ಯೋಜಿಸುವ ಸಹಜ ಅಧಿಕಾರಸಂಪನ್ನನಾದ ಸದ್ಗುರುವಿನಿಂದ ಅದನ್ನು ಹೊಂದಬೇಕಾಗುವದು. ಅಂತರ್ಲಿಂಗದ ಅನುಸಂಧಾನದಿಂದ ಅದನ್ನು ಎಷ್ಟೂ ಅಗಲದೆ ಇರುವಂತೆ ಇಷ್ಟಲಿಂಗದ ಉಪಚಾರದ ಕಾಯಕದಿಂದ ಅದನ್ನು ಹೊಂದಿಯೇ ಇರಬೇಕಾಗುವದು. ಲಿಂಗದ ಅಂಗವು ಚೈತನ್ಯರೂಪವಾದುದು. ಚೈತನ್ಯರೂಪವಾದ ಅಂಗಕ್ಕೂ ಲಿಂಗಕ್ಕೂ ಎಂದೂ ಅಗಲಿಕೆ ಇಲ್ಲವು ಮತ್ತು ಎಷ್ಟೂ ಭೇದವಿಲ್ಲವು. ಆದುದರಿಂದ ಪರವಸ್ತುವು ಶಕ್ತಿವಿಶಿಷ್ಟಾದ್ವೈತಮೂರ್ತಿಯು. ಆತ್ಮನು ಸರ್ವಸಂಸ್ಕಾರದೋಷಗಳಿಂದ ಬಿಡುಗಡೆ ಹೊಂದಿ ಗ್ರಂಥಿಯು ಒಡೆದು ನಿಜಸ್ವರೂಪದಲ್ಲಿರುವದೆಂದರೆ ಶುದ್ಧಚೈತನ್ಯಸ್ವರೂಪವನ್ನು ಹೊಂದುವದಾಗಿರುವದು. ಎಲ್ಲಿ ಶುದ್ಧವಾದ ಚೈತನ್ಯವೋ ಅಲ್ಲಿಯೇ ಲಿಂಗವು; ಎಲ್ಲಿ ಲಿಂಗವೋ ಅಲ್ಲಿಯೇ ಶುದ್ಧವಾದ ಚೈತನ್ಯವು. ಈ ಚೈತನ್ಯವು ಕಾರ್ಯದಿಂದಲೇ ವ್ಯಕ್ತವಾಗುವದದರಿಂದ, ಕಾರ್ಯದೊಳಗೆ ಅಂಗದೋಷಗಳು ಎಷ್ಟೂ ಬೆರೆಯದಂತೆ ಕಾಯ್ದುಕೊಳ್ಳಬೇಕಾಗುವದು. ಲಿಂಗವನ್ನು ವ್ಯಕ್ತಪಡಿಸುವ ಕಾರ್ಯವೇ ಕ್ರಿಯಾಚಾರವು. ಇಂತಪ್ಪ ಕ್ರಿಯಾಚಾರದಿಂದ ಆತ್ಮರ ಅಂಗದೋಷವು ಹಿಂಗುವದು. ಆಹ್ವಾನವಿಸರ್ಜನಗಳಿಲ್ಲದೆ ತನ್ನ ನಿಜಾಂಗದೊಡನೆ ಅಭೇದವೃತ್ತಿಯಿಂದ ಅಖಂಡವಾಗಿ ಏಕವಾಗಿರುವ ಲಿಂಗವು ವ್ಯಕ್ತವಾಗುವದೆಂದರೆ, ನಿಜೇಷ್ಟಕ್ಕೂ ನಿಜಕ್ರಿಯೆಗೂ ಎಷ್ಟೂ ಅಗಲಿಕೆ ಅಂದರೆ ಆಹ್ವಾನವಿಸರ್ಜನೆಗಳಿಲ್ಲದೆ ಇರೋಣವು ಇಂತಪ್ಪ ಕ್ರಿಯಾಚಾರವು ಶುದ್ಧಾಂಗದಲ್ಲಿ ಇಷ್ಟವಧರಿಸಿ ಶುದ್ಧಹಸ್ತದಿಂದ ಆಚರಿಸಿದ ಹೊರತು ಉಂಟಾಗದು ಶುದ್ಧಾಂಗವೂ ಹಸ್ತಶುದ್ಧಿಯೂ ಇಷ್ಟದ ಅಖಂಡವಾದ ಸಂಗದಿಂದಲೇ! ಕಾರಣ ಬಾಹ್ಯದಲ್ಲಿ ಇಷ್ಟವಿಡಿದು ಅಂತರಂಗದ ಸಕೀಲಾನುಸಂಧಾನದಿಂದ ವ್ಯವಹರಿಸುವದರಿಂದಲೇ ಕ್ರಿಯಾಶುದ್ಧಿಯು. ಕ್ರಿಯಾಶುದ್ಧಿಯೇ ವ್ಯಕ್ತವಾದ ಚೈತನ್ಯವು. ಇಷ್ಟವೇ ವ್ಯಕ್ತಲಿಂಗವು. ಅಂತರಂಗದ ಅವ್ಯಕ್ತವಾದ ಶುದ್ಧ ಚೈತನ್ಯಕ್ಕೂ ಲಿಂಗಕ್ಕೂ ಎಂದೂ ಅಗಲದ ಅಭೇದವೃತ್ತಿಯು ಇರುವಂತೆ ಬಹಿರಂಗದ ವ್ಯಕ್ತವಾದ ಶುದ್ಧಕ್ರಿಯೆಗೂ ಇಷ್ಟಕ್ಕೂ ಎಂದೂ ಅಗಲದ ಅಭೇದವೃತ್ತಿಯುಂಟು. ಶುದ್ಧಿಕ್ರಿಯೆಗೆ ಶುದ್ಧಕಾಯವೇ ಕುರುಹಾಗಿರುವದು. ಇಷ್ಟಕ್ಕೆ ಲಿಂಗವೇ ಕುರುಹಾಗಿರುವದು. ಈ ಲಿಂಗವಿಲ್ಲದೆ ಆ ಕಾಯಶುದ್ಧಿಯು ಇಲ್ಲ. ಶುದ್ಧಕಾಯವಿಲ್ಲದೆ ಇಷ್ಟಲಿಂಗವಿಲ್ಲ! ಆದುದರಿಂದ ಲಿಂಗಾಂಗಸಾಮರಸ್ಯಯೋಗಕ್ಕಾಗಿ ಗುರುವು ತೋರಿಸಿದ ಮಾರ್ಗದಲ್ಲಿ ಶಿವಧರ್ಮವನ್ನು ಆಚರಿಸುವ ವ್ಯಕ್ತಿ ಮೊದಲುಗೊಂಡು ಸಕಲಾತ್ಮರು ಭೋಗಿಸುವ ಅಂಗಶುದ್ಧಿಗಾಗಿ, ಶುದ್ಧವಾದ ಕ್ರಿಯಾಚಾರವನ್ನು ಆಚರಿಸುವ ಹಸ್ತಶುದ್ಧಿಗಾಗಿ ಅಂಗದಮೇಲೆ ಲಿಂಗವ ಧರಿಸಿಯೇ ಆಚರಿಸಬೇಕಾಗುವದು.

ಪಾಣಿಯು ( ಕೈ ) ಕಾಯದ ಕ್ರಿಯೆಗೆ ಮೂಲವಾದುದು. ಆದುದರಿಂದ ಆವದೊಂದು ವ್ಯಕ್ತಿಯ ಹಸ್ತದಿಂದ ಅವನ ಅಂಗದಲ್ಲಿದ್ದ ದೋಷಾದೋಷಗಳು ಓತಪ್ರೋತವಾಗಿ, ಸೂರ್ಯನಿಂದ ಕಿರಣಗಳು ಸುತ್ತಲು ಪಸರಿಸುವಂತೆ ಹಬ್ಬುತ್ತಿರುವವು. ಅದೇ ವೇಳೆಗೆ ನಡೆಗೆ ಪಾದವು ( ಕಾಲು ) ಮೂಲವಾದುದ.. ಅದರಿಂದಲೂ ಪಸರಿಸುತ್ತಿರುವವು ಕೈಂಕರ್ಯವು ಪಾದಸೇವೆಯಲ್ಲುಂಟು. ಆದುದರಿಂದ ಸಾಧಕ ಭಕ್ತರು ಸಿದ್ಧಭಕ್ತರ ಪಾದಸೇವೆಯಿಂದ ತಮ್ಮ ಶುದ್ಧಕ್ರಿಯೆಗೆ ಬೇಕಾದ ಪವಿತ್ರತೆಯನ್ನು ಹೊಂದಿ, ಆ ಪವಿತ್ರತೆಯಿಂದ ಶುದ್ಧಕ್ರಿಯಾಚಾರವನ್ನು ಆಚರಿಸಬೇಕಾಗುವದ . ಆದುದರಿಂದ ಭಕ್ತನು ಒಂದಾವರ್ತಿ ಪಾದಪೂಜೆಯಿಂದ ಹೊಂದಿದ ಪವಿತ್ರತೆಯು. ಸಿದ್ಧಭಕ್ತನ ಜ್ಞಾನಸಮರಸಕ್ರಿಯೆಯನ್ನು ಆಚರಿಸುವ ಕರಕ್ಕೆ ಪವಿತ್ರತೆಯನ್ನುಂಟುಮಾಡಲು ಪರಿಣಮಿಸುವದರಿಂದ ಅದು ಗುರುಪಾದೋದಕವೆನಿಸಿತು. ಆ ಗುರುಪಾದೋದಕದಿಂದ ಪವಿತ್ರವಾದ ಪಾಣಿಯಿಂದ ಮತ್ತೊಂದಾವರ್ತಿ ಆಚರಿಸಿದ್ದು ಆ ನಿಜಜ್ಞಾನಕ್ಕೆ ಸಮರಸವಾದ ಕ್ರಿಯಾಚಾರವಾಗಿ ಆ ಪವಿತ್ರತೆಯು ಕ್ರಿಯಾಪಾದೋದಕವೆನಿಸಿತು. ಇಂತು ಕ್ರಿಯಾಜ್ಞಾನಸಮರಸಯೋಗದಲ್ಲಿ ಆಚರಿಸಿದ್ದು ವಸ್ತುರೂಪವಾಗಿ ಪ್ರಸಾದವೆನಿಸಿತು. ಇಂತಪ್ಪ ಸಮಯಾಚಾರದ ಕಾಯನ್ಮುಕ್ತಿಯ ತತ್ತ್ವಾನುವರ್ತನವೆಲ್ಲ ಕಾಯಶುದ್ಧಿಗಾಗಿ; ಆ ಕಾಯಶುದ್ಧಿಯಿಂದ ಆಚರಿಸುವದು ಪಾಣಿಶುದ್ಧಿಗಾಗಿ ಸಹಜವಾಗಿ ಪರಿವರ್ತಿಸುತ್ತಿರುವದು. ಇದೇ ಪಾಣಿಯ ಪವಿತ್ರತೆಯ ಗುಟ್ಟು. ನಿಜಸ್ವರೂಪ ಚಿಂತನೆಯ ರೂಪಾದುದು, ಮನದ ಮಂತ್ರವು; ನಿಜೇಷ್ಟ ಕ್ರಿಯಾರೂಪವಾದುದು ಪಾಣಿಮಂತ್ರವು.ಆದುದರಿಂದ ಕಾಯನ್ಮುಕ್ತಿಯ ತತ್ತ್ವಾನುವರ್ತನದಲ್ಲಿ " ಪಾಣಿಮಂತ್ರಂ ಪವಿತ್ರಂ " ಎಂಬುದು ಸಹಜವಾಗಿರುವದು. ಮತ್ತು ಇಷ್ಟನಿಧಿದಾಚರಿಸುವದಲ್ಲಿಯೇ ಜಪಿಸಲ್ಪಡುವದು.

ಸಾರಾಂಶ, ಕಾಯನ್ಮುಕ್ತಿಯ ಗುರುಲಿಂಗಜಂಗಮದ ತತ್ತ್ವಾನುವರ್ತನವು ಲಿಂಗರಹಸ್ಯದ ಯಥಾರ್ಥಪ್ರಯೋಗವಾಗಿರುವದು. ಇದರಲ್ಲಿ ಲೋಕದೊಳಗಿನ ಯಾವತ್ತೂ ಧರ್ಮಗಳ ಹಾಗು ಮತಗಳ ತತ್ತ್ವಾನುವರ್ತನಗಳ ರಹಸ್ಯವು ಒಳಕೊಂಡಿರುವದು. ಪರಬ್ರಹ್ಮಾದಿಗಳಿಗೂ ಅಸಾಧ್ಯವಾದ ಮೂಲಾಹಂಕಾರವನ್ನು ಲಿಂಗಸಾಮರಸ್ಯಯೋಗದಲ್ಲಿ ಲಯವ ಪಡಿಸಿ, ಸಹಜವಾಗಿ ಆತ್ಮಗ್ರಂಥಿಯು ಒಡೆದು ಲಿಂಗೈಕ್ಯವನ್ನು ಹೊಂದಿಸುವ ಸತ್ಯವಾದ ಸಹಜಧರ್ಮವೇ ಆಗಿರವದರಿಂದ ಮಾನವಪ್ರಾಣಿಗೆಲ್ಲ ಸರ್ವಸಾಮಾನ್ಯವಾದುದು. ಪಂಚಸೂತಕಗಳ ಸುಳಿಗಾಳಿಗೂ ಸಹ ಇದರಲ್ಲಿ ಆಸ್ಪದವಿಲ್ಲದಿರುವದರಿಂದ ಮಾನವಕೋಟಿಯನ್ನೆಲ್ಲ ನಿರ್ವಿಕಾರದ ನಿಜಕಲ್ಯಾಣಮಾರ್ಗದ ನಿಜಾಚಾರದಲ್ಲಿ ಅನಿಮಿತ್ತಬಾಂಧವ್ಯದಿಂದ ಏನೊಂದು ದ್ವಂದ್ವಭಾವವಿಲ್ಲದೆ ನಿರಹಂಭಾವದಲ್ಲಿ ಏಕಾಗಿ ಸಾಗಿಸಿಕೊಂಡು ಹೋಗುವದಾದುದು. ಇದೇ ನಿಜಕಲ್ಯಾಣವನ್ನು ವ್ಯಕ್ತಪಡಿಸುವ ಸತ್ಯಶರಣ

ಮಾರ್ಗವು- ಲೋಕವು ತಮ್ಮ ನಿಜಕಲ್ಯಾಣವನ್ನು ಕಟ್ಟಿಕೊಂಡು, ಮಾನವಸೃಷ್ಟಿಯಲ್ಲಿ ಪರಮಾತ್ಮನು ದಯಪಾಲಿಸಿದ ಸಕಲದೇಣಿಗೆಗಳ ಸದುಪಯೋಗದಿಂದ ಲಿಂಗವಾಗಿ ಲಿಂಗದಲ್ಲಿ ಬೆರೆಯಲೆಂದು ಆಚರಿಸಿ ತೋರಿದ್ದಾಗಿರುವದು. ಮಾನವಸೃಷ್ಟಿಯು ಸರ್ವಸಾಮಾನ್ಯವಾದುದಲ್ಲ! ಲಿಂಗರಹಸ್ಯಮಾರ್ಗಾನುವರ್ತನದಿಂದ ದೇವಾನುದೇವತೆಗಳಿಗೂ ಮಿಗಿಲಾದುದು. ತ್ರಿಮೂರ್ತಿಗಳೂ ಕೂಡ ಲಿಂಗವಾಗಿ ಲಿಂಗದಲ್ಲಿ ಬೆರೆಯಲು ಈ ಮಾನವಸೃಷ್ಟಿಯಲ್ಲಿ ತಲೆಯತ್ತಿ ಸ್ಥೂಲಕಾಯ ಹಿಡಿದು ಲಿಂಗರಹಸ್ಯವನ್ನು ಆಚರಿಸಿಯೇ ತೀರಬೇಕಾಗುವದು. ಇದೇ ಆತ್ಮಾನಾತ್ಮವಿವೇಕಶಾಲಿಗಳಾದ ಆತ್ಮರುಗಳೆಲ್ಲರಿಗೂ ಅಂತಿಮಧ್ಯೇಯವಾಗಿ ಸಾಧಿಸ್ಸವದಾಗಿರುವದು. ಎಲ್ಲರೂ ಈ ಧ್ಯೇಯವನ್ನೇ ಕಟ್ಟಿಕೊಂಡು ಪ್ರಯತ್ನಿಸುತ್ತ ಬಂದಾಗ್ಯೂ ಆತ್ಮಗ್ರಂಥಿಯು ಒಡೆಯದ ಮೂಲಕ, ತಮ್ಮ ತಮ್ಮ ಮತಮಾರ್ಗಗಳಲ್ಲಿ ಚಿತ್ತವೃತ್ತಿಯನ್ನು ನಿರೋಧಿಸಿಕೊಂಡು, ತಮತಮಗೆ ನಿಲುಕಿದ ಕ್ಷೇತ್ರಗಳಲ್ಲಿ ಅಭಿಮಾನದೇವತೆಗಳಾಗಿ ಉಳಿದುಕೊಂಡರಲ್ಲದೆ ಲಿಂಗೈಕ್ಯರಾಗಲಿಲ್ಲ! ಅಂತೇ ಲೋಕದಲ್ಲಿ ಇಷ್ಟು ಭಿನ್ನ ಭಿನ್ನ ಧರ್ಮಗಳ ಹಾಗು ಮತಗಳ ಅಸ್ತಿತ್ವಕ್ಕೆ ಕಾರಣವಾಗಿರುವದು. ನಿರ್ವಿಕಾರದ ಲಿಂಗರಹಸ್ಯಾನುವರ್ತನದ ಸಹಜವಾದ ಸತ್ಯಧರ್ಮದಲ್ಲಿ ಇವೆಲ್ಲ ತಮ್ಮಿಂದ ತಾವೇ ಮರೆಮಾಜಿ ಹೇಳಹೆಸರಿಲ್ಲವಾಗುವವೇ! ಇಡೀ ಭೂಮಂಡಲಕ್ಕೆ ಈ ಮಾತಿನ ಅರುಹಿರಲಿ! ಎಚ್ಚರಿಕೆ! ಎಚ್ಚರಿಕೆ!! ಬಲು ಎಚ್ಚರಿಕೆ !!

ಅಧರ್ಮವೇ ಮೂರ್ತಿಗೊಂಡು ಜನ್ಮವೆತ್ತಿದ ಆತ್ಮರು ಅತ್ಯಂತ ಕ್ರೂರರಾಗಿ ಲೋಕದಲ್ಲಿ ವರ್ತಿಸಿದರೂ, ತಮ್ಮ ಸಂಸಾರಯಾತ್ರೆಯಲ್ಲಿ ಮಾಯಾಮೋಹಗಳಿಂದ ಇದ್ದೇ ಇರುವರು. ತಮ್ಮ ತಮ್ಮ ಮಾಯಾಮೋಹಗಳಿಗೊಳಪಟ್ಟ ಕ್ಷೇತ್ರಪರಿಪಾಲನೆಗಾಗಿ, ಜ್ಞಾನಕಲೆಯುಳ್ಳ ಮಾನವನು ತನ್ನ ಸ್ವಾಭಾವಿಕವಾಗಿದ್ದ ದೇಣಿಗೆಗಳನ್ನೆಲ್ಲ ಬಳಿಸಿಕೊಳ್ಳುವ ಸಹಜ ಸ್ವಭಾವದವನಾದುದರಿಂದ, ಈ ಸಹಜಸ್ವಭಾವಾನುವರ್ತನವೇ ಧರ್ಮವೆನ್ನಿಸುವದು. ಆದುದರಿಂದ ಯಾವ ಆತ್ಮರೂ ಧರ್ಮಬಾಹ್ಯರಲ್ಲ! ಪ್ರತಿಯೊಬ್ಬರಿಗೆ ಒಂದಿಲ್ಲ ಒಂದು ಧರ್ಮವಿದ್ದೇ ಇರುವದು. ತಮ್ಮ ಸಹಜಸ್ವಭಾವಧರ್ಮದಲ್ಲಿ ವರ್ತಿಸುವ ಆತ್ಮರನು ಮೊದಲಗೊಂಡು ಆತ್ಮಗ್ರಂಥಿಯು ಒಡೆಯದೆ, ತಮ್ಮ ತಮ್ಮ ಭಾವಕ್ಕೆ ಹೊಳೆದ ಇಷ್ಟವಾದ ಕಲ್ಪಿತ ಕ್ಷೇತ್ರದಲ್ಲಿ ಚಿತ್ತವೃತ್ತಿಯ ನಿರೋಧದಿಂದ ತಲ್ಲೀನರಾಗಿ ಉಳಿದುಕೊಂಡ ಆತ್ಮರುಗಳವರೆಗೆ, ಆತ್ಮಾನಾತ್ಮವಿವೇಕಾನುವರ್ತಿಗಳಷ್ಟು ವಾಚಾಮಾತ್ರದಿಂದ ಆಸ್ತಿಕರಾಗಿ ತೋರಿದಾಗ್ಯೂ, ಲಿಂಗದೃಷ್ಟಿಗೆ ಆತ್ಮವೃತ್ತಿಯಿಂದ ಎಲ್ಲರೂ ನಾಸ್ತಿಕರಾಗುಳಿದಿರುವರು ಕಾರಣ ಈ ಆತ್ಮವೃತ್ತಿಯಿಂದ ನಾಸ್ತಿಕರಾಗುಳಿದವರಲ್ಲಿ, ಲಿಂಗದ ನಿಜದೃಷ್ಟಿಯಿಂದ ಬಾಯಬ್ರಹ್ಮಗಳೆಂತಲೂ, ಚಾರ್ವಾಕರೆಂತಲೂ ಪ್ರಾಮುಖ್ಯವಾಗಿ ಎರಡೇ ಭೇದಗಳಾಗುವವು. ಲಿಂಗಸಾಮರಸ್ಯಯೋಗದ ಅಖಂಡವಾದ ಅರುಹಿನ

ವ್ಯಾಪಾರದಲ್ಲಿ ಸಹಜವಾಗಿ ನಿರಂಜನದಲ್ಲಿ ಬೆರೆಯಲು, ಲಿಂಗರಹಸ್ಯದ ಸತ್ಯವಾದ ಸಹಜಧರ್ಮದಲ್ಲಿ ನಿಜಸೂತ್ರವಿಡಿದು ಗುರುಲಿಂಗಜಂಗಮದ ದಾಸೋಹಿಗಳಾದ ವರೇ ನಿಜವಾದ ಆಸ್ತಿಕರು. ಯೋಗದ ಅಷ್ಟಾಂಗಗಳಲ್ಲಿ ಅಂತರಂಗದ ಸಕೀಲ ವನ್ನು ಕಾಯ್ದುಕೊಳ್ಳುವ ಧ್ಯಾನಧಾರಣ ಸಮಾಧಿಗಳು ಇದ್ದಾಗ್ಯೂ, ನಿಜಸೂತ್ರ ಸಂಬಂಧವಿಲ್ಲದುದರಿಂದ ಗಂಡರಿಲ್ಲದ ಮುಂಡೆಯರು ದಿನಹಾಕುವ ಉಪಾಯ ಕರ್ಮಗಳಂತಾಗುವವು ಮುಂಡೆಯರು ಎಷ್ಟು ವ್ರತನಿಯಮಾದಿಗಳನ್ನು ಆಚ ರಿಸುತ್ತಿದ್ದರೂ, ಗಂಡರ ಅಂಗಸಂಗವಿಲ್ಲದೆ ಸಂಗಸುಖೈಕ ಚಿತ್ತವೃತ್ತಿಯುಳ್ಳವರಾಗಿ ಸಕಲಸಾಧನಗಳನ್ನು ದುರುಪಯೋಗಿಸಿ ಅತ್ಯಾಚಾರಕ್ಕೆಳಸುತ್ತಿರುವಂತೆ ಈ ಒಳ ಹೊರಗೂ ಲಿಂಗಸೂತ್ರಸಂಬಂಧವಿಲ್ಲದ ಭವಿಗಳ ಆಟವೆಲ್ಲವೂ ಲಿಂಗಪಾತಿವ್ರತ್ಯ ಧರ್ಮಕ್ಕೆ ಹೊರತಾದುದಾಗಿ ವಿಕಾರದ ಏಳ್ಗೆಗೆ ಕಾರಣವಾಗಿರುವದು. ಏಕೆಂ ದರೆ ಅವೆಲ್ಲ ಪ್ರಾಪಂಚಿಕರು ನಡಿಸಲಾರದ, ಅತ್ಯಂತ ಬಿಗಿಯಾದ, ಸಹಜವಲ್ಲದ, ಸೃಷ್ಟಿಯ ಸ್ವಾಭಾವಿಕಧರ್ಮಕ್ಕೆ ವಿರುದ್ಧವಾದ, ಗುರುಲಿಂಗಜಂಗಮದ ದಾಸೋ ಹಕ್ಕೆ ಹೊರತಾದ ನಡೆಗಳಾಗಿರುವವು. ಲಿಂಗಕ್ಷೇತ್ರಕ್ಕೆ ಬಾಹ್ಯರೂ, ಸೂಳೆಯ ರಂತೆ ಅತ್ಯಂತ ಸಾಹಸಿಗಳೂ ಆಗಿ ತಮ್ಮನ್ನೂ ಸಹಾ ಪಾರಗಾಣಿಸಲಾರದ ಈ ಬಡಿವಾರದ ಆತ್ಮರು ಜಗತ್ತಿನ ನಿಜಧರ್ಮವನ್ನು ಕಾಯ್ದುಕೊಳ್ಳಲು ಎಷ್ಟೂ ಅಧಿ ಕಾರಿಗಳಲ್ಲ! ಅಂಗಸಂಗಸೌಭಾಗ್ಯಶಾಲಿಯಾದ ಮುತ್ತೈದಿಯು ತನ್ನ ಗಂಡನ ಸಹಜ ಇಚ್ಛೆಯಲ್ಲಿ ಸಂಸಾರಸಾಗರದ ಎಷ್ಟೂ ಹೆದರಿಕೆಯಿಲ್ಲದೆ, ಸಹಜ ಧೀರಳಾ ಗಿ ಅಂತಹ ಬಿಗಿಯಾದ ವ್ರತನಿಯಮಾದಿಗಳಿಲ್ಲದೆ, ಸುಲಭವಾದ ನಿಯಮಗಳಲ್ಲಿ ಸೃಷ್ಟಿಯ ಸ್ವಾಭಾವಿಕಧರ್ಮವಿಡಿದು ಈ ಸಂಸಾರಯಾತ್ರೆಯನ್ನು ಮಾಡುತ್ತಿರು ವಂತೆ,ನಿಜಸೂತ್ರವಿಡಿದು ಒಳಗೂ ಹೊರಗೂ ಲಿಂಗಸಂಗಿಗಳಾಗಿ ಆಚರಿಸುವ ಆತ್ಮರು ಸಹಜ ಗುರುಲಿಂಗಜಂಗಮದ ದಾಸೋಹಿಗಳೂ, ಪಂಚಮಹಾಪಾತಕ ವಿದೂರರೂ, ಪಂಚಾಚಾರಪರಾಯಣರೂ, ಅಷ್ಟಾವರಣನಿರತರೂ, ಷಟ್ಸ್ಥಲ ಸಂಪನ್ನರೂ, ಪಂಚಸೂತಕವಿರಹಿತರೂ ಆಗಿ, ಲಿಂಗಪಾತಿವ್ರತ್ಯದ ನಿಜಸಮರಸ ಯೋಗದಲ್ಲಿ ನಿಜೈಕ್ಯತೆಯಿಂದ ಆಚರಿಸುತ್ತಿರುವರು. ಇವರ ಆಚರಣೆಯಲ್ಲಿ ಯಮ, ನಿಯಮ, ಆಸನ, ಪ್ರಾಣಾಯಾಮ, ಪ್ರತ್ಯಾಹಾರಾದಿಗಳು ಸಹಜವಾಗಿ ಅಡಕವಾಗಿರುವವು ನೋಡಿರಿ.

ಲೋಕದೊಳಗಿನ ಆತ್ಮರೆಲ್ಲರೂ ಎಷ್ಟು ಹರಿದಾಡಿ ಏನು ಮಾಡಿದರೂ ತಮ್ಮ ಗಳಿಗಾಗಿಯೇ ಬಡಿವಾಡುತ್ತಿರುವರು. ಹೆಂಡರು ಬೇಕು; ಗಂಡರು ಬೇಕು; ಮಕ್ಕ ಳು ಬೇಕು; ಸಿರಿ ಬೇಕು. ಭೂಮಿ ಬೇಕು; ಸೀಮೆ ಬೇಕು; ಆಮುಷ್ಮಿಕ ಫಲಪದವಿ ಗಳುಬೇಕು; ಸಕಲಸಿದ್ಧಿಗಳು ಬೇಕು; ಚತುರ್ವಿಧಪದಗಳು ಬೇಕು; ಯಾರಿಗಾಗಿ? ತನಗಾಗಿ! ಅಂತೇ "ನ ವಾರೆ ವಿತ್ತಸ್ಯ ಕಾಮಾಯ ವಿತ್ತಂ ಪ್ರಿಯಂ ಭವತಿ ಆತ್ಮ

ನಸ್ತು ಕಾಮಾಯ ವಿತ್ತಂ ಪ್ರಿಯಂ ಭವತಿ। ನ ವಾರೆ ಜಾಯಾಯಾಃ ಕಾಮಾಯ ಜಾಯಾ ಪ್ರಿಯಾ ಭವತಿ ಆತ್ಮನಸ್ತು ಕಾಮಾಯ ಜಾಯಾ ಪ್ರಿಯಾ ಭವತಿ....ಇತ್ಯಾದಿ ಭವತಿ '' ಅನುಭವೋಕ್ತಿಯುಂಟಾಗಿರುವದು. ಲೋಕವೆಲ್ಲವೂ ತನ್ನನ್ನು ಕಾಯ್ದುಕೊಂಡೇ ಬಡಿದಾಡುತ್ತಿರುವದರಿಂದ ಅದರಾಟವೆಲ್ಲವೂ ಭವಚಕ್ರದಿಂದ ಪಾರಗಾಣಿಸದಾಗಿರುವದು. ಅದರಿಂದ ಲೋಕದಾಟವು ಸತ್ಯಧರ್ಮಕ್ಕೆ ಹೊರತಾಗಿ, ತಡುಗುತನಕ್ಕೆ ಎಳಸಿಸುವದು. ಲಿಂಗಸೂತ್ರಸಂಬಂಧವಿಲ್ಲದೆ ನಿಜವಾದ ಬ್ರಹ್ಮಚರ್ಯವಿಲ್ಲ. ಸ್ಥೂಲದೇಹಗಳ ಕೂಟಾಟಕೆಯನ್ನು ತಡೆದ ಮಾತ್ರದಿಂದ ಬ್ರಹ್ಮಚರ್ಯವೆಂದು ಪ್ರತಿಪಾದಿಸುತ್ತಿರುವದು, ಬ್ರಹ್ಮನನ್ನು ಲಕ್ಷಿಸಿ ಹೇಳುವ ಸಂಗತಿಯಲ್ಲ.. ಅವರಲ್ಲಿ ಬ್ರಹ್ಮಾನುಸಂಧಾನದ ಸದ್ದೇ ಇಲ್ಲ! ಬ್ರಹ್ಮನು ಎತ್ತೋ! ಇವರ ದೇಹದ ವಿಚಾರವೆತ್ತೋ; ನಿಜದೃಷ್ಟಿಯಿಂದ ಅದು ಬ್ರಹ್ಮಚರ್ಯವೇ ಅಲ್ಲ; ಹಾಗಿರುತ್ತಿದ್ದರೆ ಷಂಡರಿಗೆ ಪ್ರಪಂಚದ ಸುದ್ದಿಯೇ ಗೊತ್ತಿರುವದಿಲ್ಲ. ಅವರೆಲ್ಲರೂ ಬ್ರಹ್ಮಚಾರಿಗಳೇಕಾಗಬಾರದು? ದೇಹದ ಬೆಳವಣಿಗೆಯೂ, ಬೆಳೆದ ಧಾತುಗಳ ತಕ್ಕಷ್ಟು ಬಲಿಯುವಿಕೆಯೂ ಆಗಲೆಂದು ಆ ಶರೀರದ ತಾಳಿಕೆಗಾಗಿ ಕೆಲವೊಂದು ಅವಧಿಯವರೆಗೆ ಕಾಯ್ದುಕೊಂಡದ್ದು ಬ್ರಹ್ಮಾನುಸಂಧಾನದ ಕ್ರಿಯೆಗೆ ಅನುಕೂಲವಾಗಬಹುದು. ಇದು ದೇಹದ ಸ್ವಾಭಾವಿಕ ಸ್ಥಿತಿಯನ್ನು ಕಂಡು ಗೊತ್ತುಪಡಿಸಿದ ಅನುಭವದ ಸಂಗತಿಯಾಗಿರುವದು. ಬ್ರಹ್ಮಾನುಸಂಧಾನದಲ್ಲಿ ನಿರತವಾದ ಸಹಜವೃತ್ತಿಯು ಅಂಗವಿಸಿ, ಲೋಕಕಲ್ಯಾಣಕಾರ್ಯದಲ್ಲಿ ಧುರಂಧರರಾದ ವ್ಯಕ್ತಿಗಳ ಹೊರತು, ಮಿಕ್ಕಾದವರು ಬ್ರಹ್ಮಚರ್ಯವನ್ನು ಪರಿಪಾಲಿಸಲು ಗೊತ್ತುಪಡಿಸಿದ ಅವಧಿಯನ್ನು ಮೀರಿ, ವೀರ್ಯ ಬಲಿತವರಾಗಿ ಈ ಲೌಕಿಕ ಬ್ರಹ್ಮಚರ್ಯವನು ಪರಿಪಾಲಿಸುವದು, ಅನಂತದೋಷಗಳಿಗೂ, ಅಂತಃಕರಣಗಳ ಹೆಚ್ಚಿನ ಹೊಯ್ದಾಟಕ್ಕೂ ಕಾರಣವಾಗುವದು. ಈ ಬಗ್ಗೆ ಡಾಕ್ಟರ ಎಥೆಲ್ ಬ್ರಾನಿಂಗನೆಂಬವನ ಅಭಿಪ್ರಾಯವೇನಂದರೆ— ಆತ್ಮಸಂಯಮನವನ್ನು ಆಚರಿಸುವ ಮೂರು ಹಾದಿಗಳುಂಟು. ೧ನೆಯದು ಜನನೇಂದ್ರಿಯವನ್ನೇ ಕಡೆಗೆ ತೆಗೆದು ಷಂಡನನ್ನು ಮಾಡುವದು. ೨ನೇಯದು ತನ್ನ ವಿವೇಕಸಂತತಿಯಿಂದ ಅಂತರಂಗದ ಊರ್ಮಿಗಳನ್ನು ತಡೆದು ವ್ಯವಹರಿಸುವದು. ೩ನೇಯದು ಚಿತ್ತವೃತ್ತಿಯನ್ನು ಧಾರ್ಮಿಕ ಕಾರ್ಯಗಳಲ್ಲಿ ತೊಡಗಿಸಿ ಅದರಲ್ಲಿಯೇ ಗುಂಗುಮಾಡುವದು. ಆದರೆ ಅಂತರಂಗದಲ್ಲುದ್ಭವಿಸುವ ಸಹಜ ಊರ್ಮಿಗಳು ಯಾವದರಿಂದಲೂ ತಡೆಯವು. ಸ್ವಾಭಾವಿಕ ಧರ್ಮಕ್ಕೆ ವಿರುದ್ಧವಾಗಿ ಆಚರಿಸುವದು ನಾನಾಪ್ರಕಾರದ ರೋಗಗಳಿಗೆ ಕಾರಣವಾದುದು. ಈ ಮಾತು ಈಗೀಗ ಲೋಕದ ನಿದರ್ಶನಕ್ಕೆ ಬಂತು. ಇದನ್ನು ನಮ್ಮ ಬಸವಣ್ಣನು ತನ್ನ ವಚನಗ್ರಂಥದಲ್ಲಿ ಎಂದೋ ಹಾಡಿಕೊಂಡಿರುವದನು ನೋಡಿರಿ.

'' ಇಂದ್ರಿಯನಿಗ್ರಹವ ಮಾಡಿದರೆ ಹೊಂದುವವು ದೋಷಂಗಳು. ಮುಂದೆ ಕಾಡುವವು ಪಂಚೇಂದ್ರಿಯಂಗಳು, ಸತಿಪತಿರತಿಸುಖವ ಬಿಟ್ಟರೆ ಸಿರಿಯಾಳ ಚಂಗ

ಳಿಯುವರು? ಸಿಂಧಬಲ್ಲಾಳನವರು ? ನಿಮ್ಮ ಮುಟ್ಟಿ ಪ್ರಧಾನ ಗರತ್ರೀಯರಿಗೆ ಎಳಿ
ಸಿದರೆ ನಿಮ್ಮ ಚರಣಕ್ಕೆ ದೂರು ಕೂಡಲ ಸಂಗಮದೇವಯ್ಯ "

ಆತ್ಮಗ್ರಂಥಿಯು ಒಡೆದು, ಆತ್ಮರ ಅಹ್ಮಭಾವವು ಹಿಂಗಿ ಅಂಗವು ಲಿಂಗವಾಗು
ವ ಯೋಗವಿಲ್ಲದೆ ತ್ಯಾಗವಿಲ್ಲ. ಎಲ್ಲಿಯವರೆಗೆ ತನ್ನನ್ನು ಲಯಿಸಿಕೊಳ್ಳುವ ಯೋ
ಗವಿಲ್ಲದೆ, ಆತ್ಮೋನ್ನತಿಯಲ್ಲಿ ಕಾಯ್ದುಕೊಂಡು ಹೋಗುವ ಯೋಗವಿರುವದೋ!
ಅಲ್ಲಿಯವರೆಗೆ ಪರಮಾತ್ಮನಿಗೆ ತನುಮನಭಾವಗಳನ್ನು ಸಂಪೂರ್ಣವಾಗಿ ಸೂರಿ
ಗೊಳ್ಳಲು ಯಾರಿಗೂ ಶಕ್ಯವಿಲ್ಲ. ತಾನಿದ್ದ ಪ್ರಮಾಣಕ್ಕನುಸರಿಸಿ ಇವು ಇದ್ದೇ
ಇರುವವು. ಇವುಗಳನ್ನುಕೊಟ್ಟು ತನಗೆ ಇರಲಿಕ್ಕೆ ಬರುವದಿಲ್ಲ. ಏಕೆಂದರೆ
ಆತ್ಮರಿಗೂ, ಇವಕ್ಕೂ ಅಗಲಿಸಲಿಕ್ಕೆ ಬಾರದ ಸಂಬಂಧವು ಸ್ವಾಭಾವಿಕವಾಗಿರು
ವದು. ಅಂತೇ " ಕ್ಷರಾತ್ಮನಾವೀಶತೇ ದೇವ ಏಕಃ ' ಶ್ರುತಿಯು ಸಾರುತ್ತಿರುವ
ದು. ಅಲ್ಲದೆ ಬಸವಣ್ಣನು ಹಾಡಿರುವದನ್ನು ನೋಡಿರಿ, " ಗುರುಜಗದ ಬಿನ್ನಾಣಿ
ಯ ತೊಡಕು ಬಿಡಿಸಬಾರದು. ಎಲ್ಲಿ ಪರಮಾತ್ಮನಿಗೆ ತನ್ನನೇ ನೀಡಿ ವ್ಯಕ್ತಾವ್ಯ
ಕ್ತಚೈತನ್ಯಸ್ವರೂಪದಲ್ಲಿ ವ್ಯವಹರಿಸುವ ಯೋಗವಿರುವದೋ, ಅಲ್ಲಿ ಅವು
ತಮ್ಮಿಂದ ತಾವೇ ಅಡಿಗಿದಂತಿರುವವು. ಅಂದರೆ ಲಿಂಗಸಾಮರಸ್ಯವು ಅಳವಡು
ತ್ತ ಹೋದಂತೆ, ಆತ್ಮಭಾವವು ಹಿಂಗುತ್ತಿರುವ ಪ್ರಮಾಣದಲ್ಲಿ ಯೋಗದೊಳಗೆ
ಸ್ಥಿರಪಟ್ಟು ಲಯಪಡುತ್ತಿರುವವು. ಇಲ್ಲಿ ತನುವು ಲಯಪಡುವದೆಂದರೆ ತನುವಿ
ನ ಮೇಲಿನ ಚಿತ್ತವೃತ್ತಿಯು ಕುಂದುತ್ತ ಹೋಗೋಣವು. ಮನವು ಲಯಪ
ಡುವದೆಂದರೆ ಅದರ ಚಂಚಲವೃತ್ತಿಯು ಕಡಿಮೆಯಾಗುತ್ತ ಹೋಗೋಣವು.
ಭಾವವು ಲಯಪಡುವದೆಂದರೆ ಅದರೊಳಗಿನ ವಿಕಾರಗಳು ಅಡಗೋಣವು. ಗರ್ಭ
ವತಿಯಾದ ತಾಯಿಯನ್ನು ಕೊಂದು ಆಕೆಯ ಹೊಟ್ಟೆಯೊಳಗಿನ ಕೂಸನ್ನು ಬದು
ಕಿಸಿಕೊಳ್ಳುವದು ಎಂದೂ ಶಕ್ಯವಿಲ್ಲ. ಆಕೆಯ ಪ್ರಾಣಗಳು ಹಾರುವದರೊಳ
ಗಾಗಿಯೇ ಕೂಸಿನ ಪ್ರಾಣಗಳು ಹಾರಿಬಿಟ್ಟಿರುವವು. ಅಥವಾ ಹೊಟ್ಟೆಯೊಳಗಿನ
ಕೂಸಿನ ಪ್ರಾಣಗಳು ಹಾರಲೊಡನೆಯೇ ತಾಯಿಯ ಪ್ರಾಣಗಳು ತಮ್ಮಿಂದತಾ
ವೇ ಹಾರಹತ್ತುವವು. ಆದರೂ ಈ ಗರ್ಭವತಿಯಾದ ತಾಯಿಯ ಕೂಸಿನ ಹಾಗು
ಸಂಬಂಧವು ಆತ್ಮರಿಗೂ ಅವರ ತನುಮನಭಾವಗಳಿಗೂ ಇರುವಸಂಬಂಧದಂತಹ
ಸಂಬಂಧವಲ್ಲ ಅಂತೇ ಡಾಕ್ಟರರು ಹೊಟ್ಟೆಯೊಳಗೆ ಸಾಯಲಿಕ್ಕಾದ ಕೂಸುಗಳ
ಳನ್ನು ಕಡೆಗೆ ತೆಗೆದು ತಾಯಿಯನ್ನು ಬದುಕಿಸಿಕೊಳ್ಳುತ್ತಿರುವರು. ಹಾಗೆ ಕಾಯ
ವಿಡಿದಾಚರಿಸುವ ಆತ್ಮರ ತನುಮನಭಾವಗಳನ್ನು ಆಹ್ಮಭಾವವು ಇರುವವರೆಗೆ
ಆತ್ಮರಿಂದ ಕಡೆಗೆಮಾಡಿ ಬರೇ ಆತ್ಮರನ್ನು ಉಳಿಸಲು ಪರಮಾತ್ಮನಿಗೂ ಶಕ್ಯವಿಲ್ಲ
ಅಂದಮೇಲೆ ಇನ್ನುಳಿದವರ ಪಾಡೇನ ; ಈ ಅಶಕ್ಯವಾದ ಸ್ವಾಭಾವಿಕ ಸಂಬಂಧ
ವನ್ನೇ ಕಂಡುಕೊಂಡು ಬಸವಣ್ಣನು ತ್ಯಾಗಾಂಗದಲ್ಲಿ ಸಹಜ ಲಯಯೋಗದ ಗು
ರುಲಿಂಗಜಂಗಮದ ದಾಸೋಹವನ್ನು ಏರ್ಪಡಿಸಿ, ತ್ಯಾಗಾಂಗದ ಭಕ್ತಮಾಹೇಶ

ಸ್ಥಳಗಳನ್ನು ವಿವರಿಸಿರುವನು. ಈ ಬಗ್ಗೆ ಅವನು ಹಾಡಿರುವದನ್ನು ನೋಡಿರಿ, “ ಸಿರಿಯಾಳ ಮಗನ ಕೊಟ್ಟನಲ್ಲದೆ ತನ್ನಕೊಟ್ಟುದಿಲ್ಲ” ಸಿಂಧುಬಲ್ಲಾಳ ವಧುವ ಕೊಟ್ಟನಲ್ಲದೆ ತನ್ನಕೊಟ್ಟುದಿಲ್ಲ” ಇತ್ಯಾದಿ; ನಿದ್ರೆ-ತೂರ್ಯ-ತೂರ್ಯಾತೀತಾವಸ್ಥೆಗಳಲ್ಲಿಯೂ ಸವಿಕಲ್ಪ ನಿರ್ವಿಕಲ್ಪ ಮುಂತಾದ ಸಮಾಧಿಗಳಲ್ಲಿಯೂ ತನುಕರಣಾದಿಗಳ ಯಾವವುಗಳ ಹಂಗು ಏನೊಂದು ಇಲ್ಲದಂತೆ ಆತ್ಮರು ತಾವೇ ತಾವಾಗಿ ಇದ್ದರೂ ಅವು ಆತ್ಮರನ್ನು ಬಿಟ್ಟಿರುವದಿಲ್ಲ. ಏಕಂದರೆ ಜಾಗರಾವಸ್ಥೆಗೆ ಬರಲು ಅವುಗಳನ್ನು ಕೂಡಿಕೊಂಡೇ ಇರುವರು. ಆದುದರಿಂದ ಆತ್ಮಾನಾತ್ಮವಿವೇಕಸಂಪನ್ನರಾದ ಆತ್ಮರು, ಶಮದಮಾದಿವಿವೇಕಸಂತತಿಯನ್ನು ಉಪಯೋಗಿಸಿಕೊಳ್ಳುತ್ತಿರುವರು. ಆತ್ಮಗ್ರಂಥಿಯು ಒಡೆಯದೆ ಆತ್ಮಭಾವವು ಎಂದೂ ಹಿಂಗದು, ಕಾರಣ ಯೋಗಾದಿಸಾಧನಗಳಿಂದ ಆತ್ಮೋನ್ನತಿಯನ್ನು ಹೊಂದಿದವರೆಲ್ಲರೂ ತಮತಮ್ಮ ಸಿದ್ಧಿಗೆ ನಿಲುಕಿದ ಇಷ್ಟಕ್ಷೇತ್ರಗಳಲ್ಲಿ ತಮ್ಮ ಚಿತ್ತವೃತ್ತಿಯನ್ನೆಲ್ಲ ಬಿಗಿದು ಲೋಕದ ಹಂಗು ಹರಿದುಕೊಂಡವರಂತೆ ತೋರಿದರೂ ಅವರು ನಿಜವಾದ ತ್ಯಾಗಿಗಳಲ್ಲ. ಈ ತ್ಯಾಗವು ಲಿಂಗದಲ್ಲಿ ಲಿಂಗವಾಗಿ ತನ್ನನ್ನು ಸಂಪೂರ್ಣವಾಗಿ ಲಯಿಸಿಕೊಂಡ ಹೊರತು ಸಂಪೂರ್ಣವಾಗಲರಿಯದು.

ತನ್ನ ಮರೆತು ಆಚರಿಸುವ ಯೋಗವಿಲ್ಲದೆ ಸಹಜವಾದ ಕ್ಷಮೆ ಶಮೆದಮೆ ದಯಾದಾಕ್ಷಿಣ್ಯ ಆರ್ಜವ (ಸರಳತನ) ಮುಂತಾದವುಗಳು ಇಲ್ಲ. ವ್ಯವಹಾರದಲ್ಲಿ ಆತ್ಮರು ಪ್ರತಿಪ್ರಾಣವಾದ ವಸ್ತುಗಳ ವಿಷಯವಾಗಿ ತಮ್ಮ ತನುಮನಭಾವಗಳನ್ನು ಮಾರಿಕೊಂಡು ತಮ್ಮನ್ನೇ ಮರೆತವರಂತೆ ವರ್ತಿಸಿದರೂ ಅವರಿಗಾಗಿ ಅವರ ತನುಕರಣಾದಿಗಳು ಇದ್ದೇ ಇರುವವು. ಆದರೂ ಆತ್ಮರು ಪರಸ್ಪರರಲ್ಲಿ ಅತ್ಯಂತ ಪ್ರೇಮದ ಬಳಿಕೆಯಿಂದ ಏಕಜೀವವನ್ನಾಗಿಸಬಲ್ಲರು. ಈ ತತ್ತ್ವಾನುವರ್ತನದ ಅನುಭವವೇ ಲೋಕದಲ್ಲಿ ಪಾತಿವ್ರತ್ಯಧರ್ಮವನ್ನುಂಟುಮಾಡಿರುವದು. ಈ ಲೌಕಿಕಪಾತಿವ್ರತ್ಯವು ಆತ್ಮಗ್ರಂಥಿಯು ಒಡೆಯದೆ ಯಾವದೇ ಒಂದು ಇಷ್ಟಧ್ಯೇಯದ ಸಮರಸಯೋಗದಲ್ಲಿ ಎಲ್ಲಿಯವರೆಗೆ ದ್ವಂದ್ವವಿಲ್ಲದೆ ಪರಿವರ್ತನವಿರುವದೋ, ಅಲ್ಲಿಯವರೆಗೆ ಆ ಧ್ಯೇಯದ ಸಮರಸಯೋಗದಲ್ಲಿ ವ್ಯವಹರಿಸುವ ಆತ್ಮರನು ಏಕ ಜೀವಾದವರಂತೆ ತೋರ್ಪಡಿಸುವದು . ಧ್ಯೇಯದಲ್ಲಿ ತುಸು ಅಭ್ಯಂತರವಾಗಲು, ದ್ವಂದ್ವಭಾವಕ್ಕೆ ಆಸ್ಪದವು ದೊರೆದು ಪುನಃ ಅಗಲಿಸುವದಾದುದರಿಂದ ಇಂತಹ ಐಕ್ಯವು, ಕೃತ್ರಿಮವಾದುದಲ್ಲದೆ ಎಂದೂ ಅಗಲದ ಸಹಜವಾದ ನಿಜೈಕ್ಯವಾಗಲರಿಯದು ಮತ್ತು ಆ ಕೃತ್ರಿಮ ಐಕ್ಯದ ಪ್ರಯೋಗವು, ನಿಜೈಕ್ಯದ ಪ್ರಯೋಗವು ಬಲಿದು ಹಿಮ್ಮೆಟ್ಟುವವರೆಗೆ ತನ್ನ ಪ್ರಭಾವವನ್ನು ಮೆರೆಯಿಸುವದೇ. ಈ ಸಹಜವಾದ ನಿಜೈಕ್ಯದ .ಲಿಂಗಪಾತಿವ್ರತ್ಯಧರ್ಮವೇ ಎಂದೂ ಅಗಲಿಸಲೀಯದ್ದು ಸತಿಯು ಪತಿಯಲ್ಲಿಟ್ಟು ಸೇವಿಸುವ ಅನನ್ಯಭಾವದ ಅಂತಃಕರಣವೃತ್ತಿಯ

ನ್ನೇ ಲಿಂಗದಲ್ಲಿಟ್ಟು ಆಚರಿಸಲಾರಂಭಿಸಿದವರೇ ಪುರಾತನರು. ಇದನ್ನೇ ವೀರಶೈವರ ಕ್ರಿಯಾಜ್ಞಾನಸಮರಸ ಯೋಗಕ್ಕೆ ಯೋಜಿಸಿ; ಗುರುಲಿಂಗಜಂಗಮದ ದಾಸೋಹದಲ್ಲಿ ಪರಿಪೂರ್ಣಗೊಳಿಸಿದವನೇ ಸಹಜವಾದ ಲಿಂಗಾಂಗಿಧರ್ಮದ ಜಗದ್ವಾದಿದೇಶಕನಾದ ಶ್ರೀಮದ್ಬಸವಣ್ಣನು. ಅಚೇತನವಾದ ಲಿಂಗವು ಆತ್ಮರ ಸ್ವಾಭಾವಿಕವಾದ ಅಂತಃಕರಣವೃತ್ತಿಯ ಪರಿಪೂರ್ಣವಾದ ಉಪಚಾರಗಳಿಗೆ ಬಲವಾದ ಸಾಧನವಾಗಲಾರದು. ಏಕೆಂದರೆ ಆ ಅಂತಃಕರಣವೃತ್ತಿಯು, ಅತ್ಯಲ್ಪ ಅರುಹಿನ ಈ ಮಾಯಾಸೃಷ್ಟಿಯಲ್ಲಿ, ಆ ಆತ್ಮರ ಮಲಾವರಣವು ಹರಿಯಹತ್ತಿ ಅರುವಿನ ಸುಳುವು ತೋರಹತ್ತಿದಂದಿನಿಂದ ಸಚೇತನವಾದ ವಸ್ತುಗಳ ಉಪಚಾರದಲ್ಲಿಯೇ ಬೆಳೆದಿರುವದು. ಆದುದರಿಂದ ಪುರಾತನರ ಅನನ್ಯಭಾವದ ಭಕ್ತಿಯು ಶಿವಸಾಯುಜ್ಯದ ಗಣಪದವಿಗೆ ಕಾರಣವಾದುದಾಯಿತಲ್ಲದೇ, ಲಿಂಗಸಾಮರಸ್ಯಯೋಗದ ಮೆಟ್ಟಿಗೆ ನಿಲುಕಿಸಲು ಸಮರ್ಥವಾಗಲಿಲ್ಲ! ಪ್ರಪಂಚದಲ್ಲಿ ಅಂತಃಕರಣಗಳ ಪರಿಪೂರ್ಣವ್ಯಾಪಾರದಲ್ಲಿ ಆತ್ಮರು ತಮ್ಮನ್ನೇ ಮರೆತು ನಡೆಯುವ ಯೋಗವಿದ್ಯೆಯೆಂಬುದನ್ನು ಮಕ್ಕಳುಳ್ಳ ತಾಯಿಯ ಪರಿಪೂರ್ಣವಾದ ಅಂತಃಕರಣಗಳ ವ್ಯಾಪಾರದಿಂದ ಕಂಡುಹಿಡಿದರು. ಅಂತೇ "ಅಪುತ್ರಸ್ಯ ಗತಿರ್ನಾಸ್ತಿ" ಎಂಬ ಅನುಭವೋಕ್ತಿಯುಂಟಾಗಿರುವದು ಲೋಕದಲ್ಲಿ ಮಕ್ಕಳ ವಿಷಯಕವಾದ ವ್ಯಾಪಾರದಲ್ಲಿ ಅಂತಃಕರಣಗಳು ಸ್ವಾಭಾವಿಕವಾಗಿ ವಿಕಸಿತವಾಗುವಷ್ಟು ಇನ್ಯಾವುಗಳ ಬಳಿಕೆಯಲ್ಲಿ ಆಗಲಾರವು. ಆತ್ಮರಿಗೆ ಮಕ್ಕಳು ತೋರಲೊಡನೆಯೇ ಅವು ತಮ್ಮಿಂದ ತಾವೇ ಅರಳುವವು. ಅಂತೇ ತಾಯಿಯ ಎದೆಯು "ಜುನ್ಮೊ"ದು ಆಕೆಯ ಮೊಲೆಗಳೊಳಗಿಂದ ಹಾಲು ಚಿಮ್ಮಹತ್ತುವವು. ಮಕ್ಕಳುಳ್ಳವರಿಗೆ ಅಂತಃಕರಣಗಳ ಪರಿಪೂರ್ಣವಾದ ಬಳಿಕೆಯ ನೆಲೆಯು ಸಹಜವಾಗಿ ನಿಲುಕುವದಲ್ಲದೆ, ಮಕ್ಕಳಿಲ್ಲದವರಿಗೆ ತಿಪ್ಪರಲಾಗಾ ಹೊಡೆದು ದಿಂಡರಕಿ ಹಾಕಿದರೂ ನಿಲುಕಲಾರದು, ಮತ್ತು ಈ ಪರಿಪೂರ್ಣವಾದ ಅಂತಃಕರಣವೃತ್ತಿಯು ಅಖಂಡವಾದ ವ್ಯಾಪಾರದ ಪ್ರತ್ಯಕ್ಷ ಬಳಿಕೆಯಿಂದಲೇ ಅಂಗವಿಸಿ ಗಟ್ಟಿಗೊಳ್ಳುವದಲ್ಲದೆ, ಪ್ರತ್ಯಕ್ಷ ಬಳಿಕೆಯ ವ್ಯಾಪಾರವಿಲ್ಲದವರು, ಮಕ್ಕಳುಳ್ಳವರಿಗಾಗಿ ಪರಿಪೂರ್ಣವಾದ ಅಂತಃಕರಣಗಳ ಸೀಮೆಯ ನೆಲೆಯನ್ನು ಕಂಡರೂ ಅದನ್ನು ಅಂಗವಿಸಿಕೊಳ್ಳಲಾರರು. ಪರಿಪೂರ್ಣವಾದ ಅಂತಃಕರಣವೃತ್ತಿಯನ್ನು ಅಂಗವಿಸಿಕೊಳ್ಳದವರಲ್ಲಿ, ಅಂಗವಿಸಿಕೊಂಡವರಲ್ಲಿ ಸಹಜವಾಗಿದ್ದಷ್ಟು ಕ್ಷಮೆ, ಶಮೆ, ದಮೆ, ದಯಾ, ದಾಕ್ಷಿಣ್ಯ, ಆರ್ಜವಾದಿಗುಣಗಳು ನೆಲೆಸಿರಲಾರವು. ಇವರು ವಿವೇಕಶಾಲಿಗಳಾಗಿ ಪರಿವರ್ತಿಸದ ಹೊರತು, ಆ ಅಂಗವಿಸಿಕೊಂಡವರಿಗೆ ಸರಿಯಾಗಿ ತೋರಲಾರರು, ಆದರೂ ಈ ವಿವೇಕಶಾಲಿಗಳ ಕ್ಷಮಾದಿಗಳು, ಅಂಗವಿಸಿಕೊಂಡವರ ಸಹಜವೃತ್ತಿಯ ಪಾಸಂಗಕ್ಕೆ ಹತ್ತಲಾರವು, ಅಂತೇ ವಿವೇಕಶಾಲಿಯಾದ ತಂದೆಗಿಂತ ಕ್ಷಮಾಶೀಲಳಾದ

ಅವಿವೇಕ ತಾಯಿಯು ಲೋಕದಲ್ಲಿ ದೊಡ್ಡವಳೆನಿಸಿರುವಳು. ಯೋಗಿಗಳು ಯೋಗಸಮಾಧಿಯಲ್ಲಿ ಬ್ರಹ್ಮದನಿಲುವುಗಂಡವರಾದಾಗ್ಯೂ, ಅಂತಹ ಅಂತಃಕರಣವೃತ್ತಿಯು ಅಂಗವಿಸಿವವರಾದುದರಿಂದ ವಿವೇಕಸಂತತಿಯಿಂದಲೇ ಕ್ಷಮೆಕಾಯ್ದುಕೊಂಡು ಲೋಕದವರೊಂದಿಗೆ ವ್ಯವಹರಿಸಬೇಕಾಗುವದು. ಆದರೂ ಅವರ ನಿಷ್ಕರುಣವೃತ್ತಿಯು ಆಗಾಗ್ಗೆ ಕ್ಷಮೆಯ ಸೀಮೆಯಿಂದ ದೂರ ಒಯ್ದು ವಿವೇಕ ಸಂತತಿಯನ್ನು ಕೆಡಿಸುತ್ತಿರುವದರಿಂದ, ಈ ಯೋಗಸಿದ್ಧರ ಶಾಪಕ್ಕೆ ದೇವಾನುದೇವತೆಗಳೂ ಗುರಿಯಾಗಿ ಹಲವು ಪರಿಯಿಂದ ಕಷ್ಟಪಟ್ಟದರ ಉದಾಹರಣೆಗಳು ಪುರಾಣಗಳಲ್ಲಿ ತುಂಬಿರುವವು. ಅಂತೇ "ಯತೀನಾಮ್ ಕೋಪ ಚಾಂಡಾಲಃ" ಎಂಬ ಪ್ರವಾದ ಇರುವದು. ಅದೇ ಗುರುಲಿಂಗಜಂಗಮದಾಸೋಹದಲ್ಲಿ ಅಂತಃಕರಣಗಳ ಎಷ್ಟೂ ವಂಚನೆಯಿಲ್ಲದ ಪರಿಪೂರ್ಣವಾದ ಬಳಿಕೆಯು ಒಳಕೊಂಡಿರುವದರಿಂದ, ಇವರಲ್ಲಿ ಕ್ಷಮೆಯೇ ಸಹಜವಾಗಿ ಅಂಗಭೂತವಾಗಿರುವದು. ವೇದವಿದನಾದ ಬ್ರಹ್ಮನು ವೇದವನ್ನು ಕಾಯ್ದುಕೊಂಡು ಹೋಗುವ ವಿಷ್ಣುವಿನಷ್ಟು ಕ್ಷಮಾಶೀಲನಲ್ಲವಾದುದರಿಂದ ಸೃಷ್ಟಿಯ ಉತ್ಪತ್ತಿಗಷ್ಟೇ ಅಧಿಕಾರಿಯಾದನಲ್ಲದೆ ಸ್ಥಿತಿಯನ್ನು ಕಾಯ್ದುಕೊಳ್ಳಲಿಕ್ಕೆ ಸಮರ್ಥನಾಗಲಿಲ್ಲ! ಗುರುಲಿಂಗಜಂಗಮದ ದಾಸೋಹದಿಂದ ಸಹಜಕ್ಷಮಾಶೀಲನಾದ ಭಕ್ತನು ಅಂತಃಕರಣವೃತ್ತಿಯಿಂದ, ಸರ್ವಜ್ಞನೂ, ಸರ್ವಶಕ್ತನೂ, ಪರಿಪೂರ್ಣನೂ, ನಿತ್ಯನೂ, ಸರ್ವಾಂತರ್ಯಾಮಿಯೂ ಆದ ಪರಮಾತ್ಮನಿಗಿಂತ ಲೋಕಕ್ಕೆ ದೊಡ್ಡವನು. ಅಂತೆ ನನಗಿಂತ ನನ್ನ ಭಕ್ತರೇ ಹೆಚ್ಚಿನವರೆ"ಂದು, (ಮಮ ಭಕ್ತೋ ಮಮಾಧಿಕಃ) ಶಿವೋಕ್ತಿಯಿರುವದು. ಅಲ್ಲದೆ ಭಕ್ತಾಧಿಕ್ಯವು ಸಾರುತ್ತಿರುವದು. ಆತ್ಮರಿಗೆ ಅಂತಃಕರಣಗಳ ಯೋಗದಿಂದಲೂ, ಅವುಗಳ ಸಂಸ್ಕಾರದಿಂದಲೂ, ತಮ್ಮ ಅರುಹು ಸ್ಥೂಲದೇಹವಿಡಿದು ಎಚ್ಚರದಲ್ಲಿ ವ್ಯವಹರಿಸುವಾಗ ಅಂತಃಕರಣಗಳ ಯೋಗವು ತಪ್ಪದು. ಸ್ಥೂಲದೇಹದ ಪರಿವೆಯಿಲ್ಲದೆ, ಸ್ಥೂಲದೇಹದಲ್ಲಿದ್ದು ಸೂಕ್ಷ್ಮತನುವಿಡಿದು ಕನಸಿನಲ್ಲಿ ವ್ಯವಹರಿಸಿದಂತಿದ್ದಾಗ, ಸಂಸ್ಕಾರವು ಬಿಡದು. ಸ್ಥೂಲ ಹಾಗು ಸೂಕ್ಷ್ಮತನುಗಳ ಪರಿವೆಯಿಲ್ಲದೆ ನಿದ್ರೆಯಲ್ಲಿ ಆತ್ಮರು ಕಾರಣತನುವಿಡಿದು ತಾವು ಗಳಿಸಿದ ದೋಷದ ಸಮಾಧಿಯಲ್ಲಿ, ತಮ್ಮವಿಷಯಕವಾದ ಹೆಚ್ಚಿನ ಅರುಹು ಏನೂ ಇಲ್ಲದೆ ಸಹಜವೆನಿಸುವ ಅರುವಿನ ಯೋಗದಲ್ಲಿರುವರು. ಕಾರಣ ಈ ಸಂಸ್ಕಾರದೋಷವು ಆತ್ಮರು ಎಲ್ಲಿ ಹೋದರೂ, ಯಾವ ಅವಸ್ಥೆಯಲ್ಲಿದ್ದರೂ, ಅದನ್ನು ಸ್ಥೂಲದೇಹವಿಡಿದು ಸಂಪೂರ್ಣವಾಗಿ ತೊಳೆದುಕೊಂಡ ಹೊರತು ಬಿಡದು. ಇಂತಹ ಆತ್ಮರು ನಿದ್ರಾವಸ್ಥೆಯನ್ನು ದಾಟಿ ತೂರ್ಯ-ತೂರ್ಯಾತೀತ-ಅವಸ್ಥೆಗಳನ್ನು ಸಾಧಿಸಿಕೊಂಡರೂ ತಮ್ಮ ಇರುವಿಕೆಯಲ್ಲಿ ಏನೊಂದು ಹೆಚ್ಚುಕಡಿಮೆಯಾಗದು. ಆದುದರಿಂದ ಎಚ್ಚರದ ವ್ಯವಹಾರದಲ್ಲಿ ಅವರು ತಮ್ಮನ್ನು ಮರೆತು ವ್ಯವಹರಿಸುವದು, ನಿಸ್ಸೀಮವಾದ ಅಂತಃಕರಣಗಳ ಬಳವಳಿಕೆಯ ಯೋಗವಿಲ್ಲದೆ ಶಕ್ಯವಿಲ್ಲ; ತೋರಿ

ತೋರಿ ಅಡಗುವ ಈ ಸುಳ್ಳು ತೋರಿಕೆಯ ವಿಷಯವಾಗಿ ಅಂತಃಕರಣಗಳ ನಿಸ್ಸೀಮ ಬಳವಳಿಕೆಯಲ್ಲಿದ್ದು ತಮ್ಮನ್ನು ಮರೆತು ಆಚರಿಸುವವರಂತೆ ತೋರಿದಾಗ್ಯೂ, ಅದು ನಿಜವಾಗಿ ಮರೆತುದರ ಸ್ಥಿತಿಯಲ್ಲವು. ಆ ವ್ಯವಹಾರದಲ್ಲಿ ತಮ್ಮ ಜೀವಾಳಕ್ಕೆ ಎಲ್ಲಿಯ ವರೆಗೆ ಪೆಟ್ಟು ಹತ್ತುವದಿಲ್ಲವೋ ಅಲ್ಲಿಯ ವರೆಗೆ ತಮ್ಮನ್ನು ತಾವು ಲೆಕ್ಕಿಸುವದಿಲ್ಲ. ತಮಗೆ ಪೆಟ್ಟು ಹತ್ತಿದೊಡನೆಯೇ, ಯಾವ ತೋರಿಕೆಯ ವಿಷಯವಾಗಿ ತಮ್ಮನ್ನು ತಾವು ಮರೆತವರಂತೆ ಆಚರಿಸಿದರೋ, ಅದೇ ತೋರಿಕೆಯನ್ನು ತಮ್ಮಗೋಸುಗ ಹಾಳುಮಾಡಿ ತಮ್ಮನ್ನು ತಾವು ಕಾಪಾಡಿಕೊಳ್ಳಲು ಯತ್ನಿಸುವರು. ತನ್ನ ಜೀವವೇ ಮೇಲಾದ ಬಂಗಾರವೆಂಬುದನ್ನು ಸಿದ್ಧಿಸಿ ತೋರಿಸಲು, ಬೀರಬಲ್ಲನು ಬಾದಶಹನ ಮುಂದೆ, ಮಾಡಿದ ಮರಿಯುಳ್ಳ ಮಂಗನ ಪ್ರಯೋಗವು ಈ ಮಾತಿಗೆ ಬಲವಾದ ಸಾಕ್ಷಿಯಾಗಿರುವದು. ಅಥವಾ ರಾಮಕೃಷ್ಣ ಪರಮಹಂಸರು,ಬಹಳ ದಿವಸಗಳ ವರೆಗೆ ಮಕ್ಕಳಿಲ್ಲದೆ ತೀರಕಡೆಯ ಭಾಗಕ್ಕೆ ಒಂದೇ ಒಂದಾಗಿ, ಆ ಕೂಸು ಉಮನಿಯಲ್ಲಿ ಸಿಕ್ಕಾಗ್ಗೆ ಅವರ ಸಿರಿವಂತ ಮುದಿ ತಾಯಿತಂದೆಗಳು ಯಾತಕ್ಕಾಗಿ ಕಷ್ಟಪಡುತ್ತಿದ್ದರೆಂಬದನ್ನು ವ್ಯಕ್ತಪಡಿಸಿ ವಿವರಿಸಿ ಹೇಳಿದ ದೃಷ್ಟಾಂತವೂ ಬಲವಾದ ಸಾಕ್ಷಿಯಾಗಿರುವದು. ಏಕಂದರೆ ಆತ್ಮರು ಆತ್ಮಹಿತದ ನಂಬುಗೆಯಿಂದಲೇ ತಮಗೆ ಉಪಯೋಗಿಸಿಕೊಳ್ಳುವ ಅಂತಃಕರಣಗಳನ್ನು ಇನ್ನೊಬ್ಬರಿಗಾಗಿ ಸಂಪೂರ್ಣವಾಗಿ ಕೊಟ್ಟವರಂತೆ ನಡೆಯುವ ಸಹಜ ಸ್ವಭಾವದವರಿರುವರು. ಈ ಸ್ವಭಾವವೇ ಯಾವದೊಂದು ಸಾಮಾನ್ಯ ಹಿತದ ಸಂಗತಿಯಲ್ಲಿ ಅನೇಕ ಭಿನ್ನ ಭಿನ್ನ ಸ್ವಭಾವದ ಹಾಗು ಧ್ಯೇಯದ ವ್ಯಕ್ತಿಗಳನ್ನು ಕೆಲವೊಂದು ಅವಧಿಯ ವರೆಗೆ ಒಂದಾಗಿ ಮಾಡಬಲ್ಲದು; ಲೋಕವು ಈ ತತ್ತ್ವದ ಮೇಲಿಂದಲೇ ಇಲ್ಲಿಯವರೆಗೆ ಬಡಿದಾಡುತ್ತ ಬಂದಿರುವದು. ತಮ್ಮನ್ನು ತಾವು ಲಯಿಸಿಕೊಳ್ಳುತ್ತ ಸಹಜವಾಗಿ ತನುಮನಭಾವಗಳನ್ನು ಈಡ್ಯಾಡುವ ಯೋಗದಲ್ಲಿ ಸತ್ಯಶರಣರ ಹೊರತು ಲೋಕದಲ್ಲಿ ಯಾರೂ ಪರಿವರ್ತಿಸಿರುವದಿಲ್ಲ. ಪರಮಾತ್ಮವೆಂಬ ಅಗ್ನಿಯು ಆತ್ಮವೆಂಬ ಕಾಷ್ಠದಲ್ಲಿ ಪ್ರಕಟವಾಗಿ, ಆ ಪ್ರಕಟಾವಸ್ಥೆಯ ಯೋಗವು ಕೆಡದಂತೆ ಆ ತನುಮನಭಾವಗಳಿಂದ ಕಾಯ್ದುಕೊಂಡಲ್ಲಿ, ಆ ಪ್ರಕಟವಾದ ಅಗ್ನಿಯ ಸಂಯೋಗದಿಂದಲೇ ಆತ್ಮರು ಸುಟ್ಟು ವಿಭೂತಿಯಾಗಬಲ್ಲರಲ್ಲದೆ (ಅಂಗಲಿಂಗವನ್ನಾಗಿಸಬಲ್ಲರಲ್ಲದೆ) ಇನ್ಯಾತರಿಂದಲೂ ಆಗದು. ಪರಮಾತ್ಮನ ಪ್ರಕಟಾವಸ್ಥೆಯನ್ನು ಕಾಯ್ದುಕೊಂಡು ತತ್ಸಮರಸದಿಂದ ತಮ್ಮನ್ನು ಲಯಿಸಿಕೊಳ್ಳುವದಕ್ಕಾಗಿಯೇ ತನುಮನಭಾವಗಳಿರುವವಲ್ಲದೆ ಬರೇ ಆತ್ಮೋನ್ನತಿಯನ್ನು ಸಾಧಿಸಿಕೊಂಡು, ತಮ್ಮ ವಿವೇಕಸಂತತಿಯಿಂದ ಅವುಗಳನ್ನು ಬಿಗಿಹಿಡಿದುಕೊಂಡು ವ್ಯವಹರಿಸಲಿಕ್ಕಲ್ಲ; ಈ ರೀತಿ ಬಿಗಿಹಿಡಿದು ವ್ಯವಹರಿಸುವದು ಮೇಲೆ ಹೇಳಿದ ಮೇರೆಗೆ ಕೆಲವೊಂದು ಅವಧಿಯವರೆಗೆ; ಆ ಮರ್ಯಾದೆಯನ್ನು ಮೀರಲೊಡನೆಯೇ ಆ ತನುಮನಭಾವಗಳ ಕಟ್ಟು ಹರಿದು, ವಿವೇಕ

ಸಂತತಿಯು ಹಾಳಾಗಿ, ಅನಿಷ್ಟಕಾರ್ಯಗಳು ತಮ್ಮಿಂದ ಜರಗುವವು. ತಮ್ಮ ವಿವೇಕಸಂತತಿಯು ಮರ್ಯಾದೆಯಲ್ಲಿಯೇ ಕ್ಷಮೆಶಮೆದಮೆದಯಾದಾಕ್ಷಿಣ್ಯ ಆರ್ಜವಾದಿಗಳು; ತನುಮನಭಾವಗಳು, ಪರಮಾತ್ಮನ ಪ್ರಕಟತೆಯು ಯೋಗವು ಕೆಡದಂತೆ ಕಾಯ್ದುಕೊಳ್ಳುವ ಕಾರ್ಯದಲ್ಲಿ ಅಖಂಡವಾಗಿ ತೊಡಕಿಕೊಂಡವಾದರೆ ಆ ನಿಜಾಗ್ನಿಯು ಸಂಯೋಗದಲ್ಲಿ ತಾನು ಸುಡುತ್ತ ಹೋದ ಮೇರೆಗೆ, ಆ ಯೋಗ ದಲ್ಲಿ ಅವುಗಳ ಲಯವೂ ತನ್ನಿಂದ ತಾನೇ ಆಗುತ್ತಹೋಗಿ, ಆ ಕ್ಷಮೆ ಶಮೆ ದಮೆ ದಯಾದಾಕ್ಷಿಣ್ಯ ಆರ್ಜವಾದಿಗಳು ಸಹಜ ಅಂಗಭೂತವಾಗುವವು. ಆತ್ಮರು ವಿ ವೇಕಸಂಪನ್ನರಾಗಿ ಆ ಆ ವಿವೇಕಸಂತತಿಯಿಂದ ಶಮದಮಾದಿಗಳನ್ನು ಪರಿ ಪಾಲಿಸುವದು ಏತಕ್ಕೆ ? ನಿಜಾಗ್ನಿಯ ಪ್ರಕಟತೆಯು ಯೋಗವನ್ನು ಸಾಧಿಸಲಿಕ್ಕೆ; ಆ ಪ್ರಕಟತೆಯು ಕರದಿಷ್ಟವಿಡಿದು ಗುರುಲಿಂಗಜಂಗಮದ ದಾಸೋಹವನ್ನು ಆಚ ರಿಸುವವರಲ್ಲಿಯೇ ಉಂಟು. ಅದಿಲ್ಲದೆ ಸವಿಕಲ್ಪ ಇಲ್ಲದೆ ನಿರ್ವಿಕಲ್ಪ ಸಮಾಧಿಗ ಳಲ್ಲಿ ಉಳಿದುಕೊಂಡರೆ, ಪ್ರಯೋಜನವೇನು ? ನಿದ್ರೆಹತ್ತಿ ಮಲಗಿದ ದುಷ್ಟನು ನಿದ್ರೆಯು ತೀರುವವರೆಗೆ ಸಹಜ ಒಳ್ಳೆಯವನಾಗಿರುವಂತೆ, ಈ ಸಮಾಧಿಸ್ಥರು ನಿರುಪದ್ರವಿಗಳಾದ ಮಾತ್ರದಿಂದ ತಮ್ಮ ಹಾಗು ಲೋಕದ ಕಲ್ಯಾಣವಾಗಲಿಲ್ಲ. ಅಂಗವ ಲಿಂಗವನ್ನಾಗಿಸುವ ಗುರುಲಿಂಗಜಂಗಮದ ದಾಸೋಹದಲ್ಲಿಯೇ ನಿಜವಾ ದ ಕಲ್ಯಾಣವಿರುವದಲ್ಲದೆ, ಇನ್ನೊಂದರಿಂದ ಕೇಳಬಾರದು. ಇವೆಲ್ಲ ಕೆಲವೊಂ ದು ಅವಧಿಯವರೆಗೆ ಕಲ್ಯಾಣದ ಪ್ರಯೋಗವನ್ನು ತೋರಿಸುವ ಘಾಸುಗಳಾಗಿರು ವವು. ಇವು ತಮ್ಮನ್ನು ತಾವು ನಿಜವಾಗಿ ಮರೆತು ವ್ಯವಹರಿಸುವ ಯೋಗಗಳಲ್ಲ. ನಿದ್ರೆಯಿಂದ ಎಚ್ಚತ್ತವನು ತನ್ನನ್ನು ತಾನು ಮರೆತು ಇರಬಲ್ಲರೆ ಲಿಂಗಸಮರಸ ಯೋಗವಿಲ್ಲದೆ ಸವಿಕಲ್ಪ ನಿರ್ವಿಕಲ್ಪ ಸಮಾಧಿಸ್ಥರು ತಮ್ಮ ಸಮಾಧಿಯಿಂದ ಎಚ್ಚ ತ್ತು, ಸ್ಥೂಲದೇಹದ ವ್ಯವಹಾರದಲ್ಲಿ ತಮ್ಮನ್ನು ತಾವು ಮರೆತು ವ್ಯವಹರಿಸಬಹು ದು. ತನ್ನ ಲಯವಿಲ್ಲದೆ ತನುಮನಭಾವಗಳ ಲಯವಿಲ್ಲ. ಅವುಗಳ ಬಗ್ಗೆ ಎಷ್ಟು ವಿಭಜನೆಯನ್ನು ಮಾಡಿ, ಲೋಕದ ಮುಂದೆ ಅವುಗಳ ಹಿಂಜಾನು ಹಿಂಜು ಬಿಚ್ಚಿ ವಿವರಿಸಿದರೂ ಅವೆಲ್ಲ ನಿಷ್ಪ್ರಯೋಜನವು.

ಒಳಗೂ ಹೊರಗೂ ಆವ್ಹಾನವಿಸರ್ಜನೆಗಳಿಲ್ಲದ ಅವ್ಯಾಹತವಾದ ಇಷ್ಟಾ ನುಸಂಧಾನವಿಲ್ಲದೆ ನಿಜವಾದ ಉಪವಾಸ ಯಜ್ಞ, ಯಾಗ, ಹೋಮ, ಹವನ, ಸ್ವಾಧ್ಯಾಯ, ತಪಸ್ಸು ಮುಂತಾದ ಕರ್ಮಗಳೂ, ವ್ರತ, ಮೌನ, ಶೌಚ, ಸ್ನಾನ, ಮೊದಲಾದ ನಿಯಮಗಳೂ ಇಲ್ಲ. ನಿಜವಾದ ಉಪವಾಸವಿಲ್ಲದೆ ಯಜ್ಞಯಾ ಗಾದಿಗಳೂ, ತಪಸ್ಸೂ ಇಲ್ಲ. ಕೂಳು ನೀರು ಬಿಟ್ಟು ತನ್ನ ಕಲ್ಪಿತ ಕ್ಷೇತ್ರದಲ್ಲಿ ವ್ರತಮೌನಾದಿಗಳಿಂದ ವ್ಯವಹರಿಸುವದು ಉಪವಾಸವಲ್ಲ. ಲಿಂಗವು ಆತ್ಮರ ಅಳುವಿಗೆ ಎಂದೂ ನಿಲುಕತಕ್ಕದ್ದಲ್ಲ. ಆತ್ಮರ ಅಳವು ಮೀರಿ ಪ್ರತ್ಯಕ್ಷವಲ್ಲದುದ ನು ನಿಜಸೂತ್ರ ಸಂಬಂಧಿಸಿ ಸದ್ಗುರುರಾಯನು ಕರಕ್ಕೆ ಕೊಟ್ಟ ಇಷ್ಟದಲ್ಲಿ, ಆ

ಸದ್ಗುರುರಾಯನು ತೋರಿಸಿದ ಮಾರ್ಗವಿಡಿದು, ಆ ವಾಙ್ಮನಭಾವಾತೀತವಾದ ಪರೋಕ್ಷದಲ್ಲಿ ತಾನೇ ತಾನಾಗಿದ್ದ ವಸ್ತುವೇ ಈ ದೃಷ್ಟವಾದ ಇಷ್ಟವೆಂದು ಹೇಳಿದ ವಚನದಲ್ಲಿ ಸಂಪೂರ್ಣವಾದ ನಂಬುಗೆಯನಿಟ್ಟು, ದೀಕ್ಷಾಕಾಲದಲ್ಲಿ ಉಪದೇಶಿಸಿ ಮನಕ್ಕೆ ನಿಲುಕಿಸಿದ ನಿಜಮಂತ್ರಮೂರ್ತಿಯ ಸಕೀಲಾನುಸಂಧಾನದಲ್ಲಿ, ಒಳಹೊರಗೂ ಅಖಂಡವಾದ ಗುರುಲಿಂಗಜಂಗಮದಾಸೋಹನಾಚರಿಸುವದೇ ನಿಜ ಉಪವಾಸವಾಗಿರುವದು. ಅಂದರೆ ನಿಜಸೂತ್ರವಿಡಿದು ಕರಕ್ಕೆ ಬಂದ ನಿಜೇಷ್ಟದಲ್ಲಿ ಪರಿಪೂರ್ಣವಾದ ನಂಬುಗೆಯನಿಟ್ಟು ಪಂಚಾಚಾರಾದಿಗಳಿಂದ ಪ್ರಕಟೀಕರಿಸಿಕೊಂಡು ಅದನ್ನು ಎಷ್ಟೂ ಅಗಲದಿರುವದು. ಏಕಂದರೆ ಉಪವಾಸದ ನಿಜಾರ್ಥವಿದು. ಅಂದರೆ ಯಾವಾಗಲು ಸಮೀಪದಲ್ಲಿರೋಣ ಅಥವಾ ಹೊಂದಿಕೊಂಡಿರೋಣ; ಸಾಂನಿಧ್ಯಯೋಗಕ್ಕಾಗಿ ಕೂಳು ನೀರು ಬಿಟ್ಟು ಆಚರಿಸುವದು ಎಷ್ಟೂ ಯಥಾರ್ಥವಾದುದಲ್ಲ. ಒಳಹೊರಗೂ ಗುರುಲಿಂಗಜಂಗಮದ ಎಡೆವಿಡದ ದಾಸೋಹದಲ್ಲಿ ಸಹಜವಾದ ನಿತ್ಯ ಉಪವಾಸದಿಂದ ಕ್ರಮವಾಗಿ ತನ್ನ ಪ್ರಮಾಣದಲ್ಲಿ ತನ್ನಿಂದ ತಾನೇ ಕುಂದುತ್ತ ಹೋಗುವ ಹಸಿವೆನಿದ್ರೆನೀರಡಿಕೆಗಳನ್ನು ತನ್ನಳವು ತಾನರಿಯದ್ಕೆ, ವ್ರತನಿಯಮಾದಿಗಳಲ್ಲಿ ಸಹಜಪ್ರಮಾಣವನ್ನತಿಕ್ರಮಿಸುವದು ಒಂದುಪ್ರಕಾರದ ಬಳಲಿಕೆಗೆ ಕಾರಣವಾಗುವದು. ಮತ್ತು ಆ ವ್ರತನಿಯಮಾದಿಗಳಿಗಾಗಿ ತನುಮನಭಾವಗಳನ್ನು ಈಡ್ಯಾಡಿ ತತ್ಪರವಶವಾಗಿರುವದು ಪ್ರಾಧಾನ್ಯವಾದುದಲ್ಲ! ದಾಸೋಹಪರವಶತೆಯೇ ಪ್ರಾಧಾನ್ಯವಾದದ್ದು. ಅದ್ದರಿಂದ ಆತ್ಮನ ಅಭಿಮಾನವು ಕುಂದಿ ಆಚಾರವು ಅಂಗವಿಸುತ್ತ ಹೋದಮೇಲೆಗೆ ವ್ರತನಿಯಮ ಸ್ನಾನಶೌಚಾದಿಗಳು ತಮ್ಮಿಂದ ತಾವೇ ಉಂಟಾಗುವವು. ದಾಸೋಹಕ್ಕೆ ಹೊರಗಾಗಿ ಕೂಳುನೀರಿನ ವ್ರತನಿಯಮಾದಿಗಳಲ್ಲಿ ಉಪವಾಸವನಾಚರಿಸುವದರಿಂದ ತನುವು ಕುಂದುವದಲ್ಲದೆ ಆತ್ಮನು ಎಷ್ಟೂ ಕುಂದುವದೂ ಇಲ್ಲ! ಕುಂದುವದೂ ಇಲ್ಲ!! ಅಲ್ಲದೆ ತನ್ನಿಂದ ತನ್ನ ಭಾವಕ್ಕೆ ಹೊಳೆದದ್ದು ನಿಜೇಷ್ಟವೇ ಅಲ್ಲ!!! ನಿಜೇಷ್ಟವಲ್ಲನುದನು ಕೂಳುನೀರು ಬಿಟ್ಟು ಶರೀರದ ಬಳಲಿಕೆಯಲ್ಲಿ ಅದರೊಡನೆ ವ್ರತನಿಯಮಾದಿಗಳಲ್ಲಿರುವದು ಸ್ವಾಧ್ಯಾಯವಾಗಲರಿಯದು. ಮತ್ತು ಅದರಿಂದ ನಿಜವಾದ ಸ್ನಾನವಿಲ್ಲ. ನೀರನಿಂದ ಶರೀರ ತೊಳೆದದ್ದು ಶರೀರದ ಸ್ನಾನವಾಯಿತು. ಆತ್ಮನ ಸ್ನಾನವು ಸತ್ಕ್ರಿಯಾಜಲದಲ್ಲುಂಟು. ಆತ್ಮನ ಸ್ನಾನವಿಲ್ಲದೆ ತನ ಕೊಳಚೆಯ ತಿಳಿಯಲ್ಲಿ ಬರೇ ಶರೀರದ ಶುಚಿಯಿಂದ ತನ್ನನ್ನು ಶುಚಿಯೆಂದು ಭಾವಿಸುವದು ಶೌಚವಾಗಲರಿಯದು. ತನ್ನ ದೂಷಿತವಾದ ಸ್ಥಿತಿಯಲ್ಲಿ ಏನೊಂದು ಮಲಪರಿಹಾರವಿಲ್ಲದೆ ತನ್ನ ಕೊಳಿಯಲ್ಲಿಯೇ ಇದ್ದು, ಸ್ಥೂಲತನುವಿನ ಸ್ನಾನ ಶೌಚಾದಿಗಳಿಂದ ತಾನು ಶುಚಿಯಾಗುತ್ತಿದ್ದರೆ, ಕಾಗೆಬಕಕೀಟಕಾದಿಗಳ ಪವಿತ್ರತೆಗೆ ಏನು ಕೊರತೆಯು? ಪ್ರಕಟವಾದ ಲಿಂಗಸಾನ್ನಿಧ್ಯಯೋಗವೇ ಶೌಚಕ್ಕೆ ಕಾರಣವಾಗಿ ನಿತ್ಯ ಉಪವಾಸವಾಗಿಸುವದಲ್ಲದೆ, ಲಿಂಗಸಾನ್ನಿಧ್ಯಯೋಗಕ್ಕೆ ಬಾಹ್ಯನಾಗಿ

ಬರೀ ಸ್ನಾನ ಮೌನ, ಜಪ ತಪ, ಹೋಮ ಹವನ, ವ್ರತ ನಿಯಮಾದಿಗಳಿಂದ ತನ್ನನ್ನು ಪವಿತ್ರನೆಂದು ಬಗೆದು, ಕೂಳು ನೀರು ಬಿಟ್ಟು, ಶಾಸ್ತ್ರಮುಖದಿಂದಾಗಲಿ, ಐಶ್ವರ್ಯಸ್ಥಲಸಂಪನ್ನನಾಗಿ ಸಹಜದ ಕೂಡ ಸಹಜವಾದ ನಿರಂಜನವಸ್ತುವಲ್ಲದ ಅನಧಿಕಾರಿಯಾದ ಯೋಗಸಿದ್ಧರ ಬೋಧೆಯಿಂದಾಗಲಿ ತನ್ನ ಭಾವಕ್ಕೆ ಹೊಳೆದ ಕಲ್ಪಿತಸ್ವರೂಪದ ಚಿಂತನದಲ್ಲಿ ಮಗ್ನವಾದವರಂತೆ ಕೂಡ್ರುವದರಿಂದ ಉಪವಾಸವಾಗಲಿಲ್ಲ. ನಿತ್ಯಉಪವಾಸಯೋಗದ ಗುರುಲಿಂಗಜಂಗಮದ ದಾಸೋಹದಲ್ಲಿ ತನ್ನನ್ನೂ ಸಹಿತವಾಗಿ ನೀಡಿ ಆಚರಿಸುತ್ತಿರುವ ಕ್ರಮದಲ್ಲಿ ತನ್ನ ಅಭಿಮಾನವು ಕುಂದುತ್ತ ಹೋದಮೇರೆಗೆ, ತನ್ನದೆಂದು ತನಗಾಗಿ ಕೂಡಹಾಕಿಕೊಂಡ ಗಳಿಕೆಯ ಮೇಲಿನ ಲೋಭಮೋಹಗಳು ಕುಂದುತ್ತ ಹೋಗಿ, ಆ ಅಂಗವಿಸುತ್ತಿರುವ ನಿರ್ಲೋಭನಿರ್ಮೋಹಗಳ ಪ್ರಮಾಣದಲ್ಲಿ ಮಾಡುವ ದಾನಕಾರ್ಯದಲ್ಲಿ ಸಹಜ ನಿಷ್ಕಾಮವೃತ್ತಿಯು ಇರುವದಲ್ಲದೆ, ಇದಕ್ಕೆ ವ್ಯತಿರಿಕ್ತವಾಗಿ ಮಾಡುವ ದಾನಧರ್ಮಾದಿಗಳು ಕೀರ್ತಿಗೂ, ಪುಣ್ಯಕ್ಕೂ ಎಳಿಸದೆ ಬಿಡವು. ಎಷ್ಟು ನಿಷ್ಕಾಮವೃತ್ತಿಯಿಂದ ತಾನು ವರ್ತಿಸುವೆನೆಂದು ತನಗೆನಿಸುತ್ತಿದ್ದರೂ, ಅಂಗವ ಲಿಂಗವನ್ನಾಗಿಸುವ ಯೋಗವು ಇರದಿದ್ದರೆ, ಆ ಕರ್ಮಗಳು ತಮ್ಮ ಪ್ರತಿಫಲವನ್ನು ಉಣಿಸಲು ಪರಿಪಕ್ವದೆಸೆಗೆ ಆತ್ಮರನ್ನು ಒಯ್ದೇ ಒಯ್ಯುತ್ತಿರುವವು. ಅಂತೆ "ತಾ ಮಾಡಿದ ಕರ್ಮ ತನ್ನನ್ನು ಬಿಡದೆಂಬ ಅನುಭವೋಕ್ತಿಯುಂಟಾಗಿರುವದು" ಏಕೆಂದರೆ ಎಲ್ಲಿಯ ವರೆಗೆ ಆತ್ಮಗ್ರಂಥಿಯು ಒಡೆದಿಲ್ಲವೋ ಅಲ್ಲಿಯವರೆಗೆ ನಿಯತಿತತ್ತ್ವವು ಅವರು ಲಿಂಗಸಾಮರಸ್ಯಯೋಗದಲ್ಲಿ ಮಗ್ನರಾದ ಹೊರತು, ಅವರನ್ನು ಬಿಡದು. ನಿಜಸೂತ್ರಕ್ಕೆ ಒಳಪಟ್ಟು ಗುರುಲಿಂಗಜಂಗಮದ ದಾಸೋಹದಲ್ಲಿ ಪರವಶರಾಗಿ ಧುರಂಧರರಾದವರೇ ನಿಜಗುರುಪುತ್ರರಲ್ಲದೆ, ಉಳಿದವರಾರು ಅಲ್ಲ. ಇಂತಹ ಗುರುಪುತ್ರರನ್ನು ಕರ್ಮಗಳು ತಮ್ಮ ಪರಿಪಕ್ವದೆಶೆಗೆ ಎಳಿಸವು. ಅಂತೇ "ದಿನಮಾನವು ಬಲುಕೆಟ್ಟವೋ, ಸದ್ಗುರುಪುತ್ರಾ ನಿನಗವು ಬಂದು ತಟ್ಟವು' ಎಂಬ ಅನುಭವೋಕ್ತಿಯುಂಟಾಗಿರುವದು. ಸಹಜ ನಿರ್ಲೋಭ ನಿರ್ಮೋಹಗಳ ನಿಷ್ಕಾಮವೃತ್ತಿಯಲ್ಲಿ ಮಾಡಿದ ದಾನಧರ್ಮಾದಿಗಳು ಪುನಃ ಮನಕ್ಕೆ ಹೊಳೆದು ಅಂತಃಕರಣಗಳನ್ನು ಲಿಂಗಸಾನ್ನಿಧ್ಯಯೋಗದಿಂದ ಕಲಕಿಸಿದ್ದಾದರೆ ಅವು ಆತ್ಮರನ್ನು ಬಾಧಿಸದೆ ಬಿಡವು. ಈ ಬಗ್ಗೆ ಬಸವಣ್ಣನು ಹಾಡಿರುವದನ್ನು ನೋಡಿರಿ 'ಮಾಡಿದೆನೆನ್ನದಿರಾ ಮನವೇ, ಮಾಡಿದೆನೆಂಬುದು ಮನಕೆ ಹೊಳೆದುದಾದರೆ ಏಡಿಸಿ ಕಾಡಿತ್ತು ಕೂಡಲಸಂಗಯ್ಯನ ಡಂಗುರವು" ಈ ಕರ್ಮಗಳನ್ನು ಸಹಜಕ್ರಿಯಗಳನ್ನಾಗಿಸುವ ಅಧಿಕಾರವು, ನಿಜಸೂತ್ರಕ್ಕೊಳಪಟ್ಟು ಗುರುಲಿಂಗಜಂಗಮದ ದಾಸೋಹದಲ್ಲಿ ಅಖಂಡವಾಗಿ ಮುಳುಗಿದ ಹೊರತು ಯಾರಿಗೂ ಬರಲಾರದು.

ಗುರುಲಿಂಗಜಂಗಮದ ದಾಸೋಹದಿಂದಲೇ ಇಂದ್ರಿಯಮುಖಗಳಲ್ಲೆಲ್ಲ ಸಹಜ ಲಿಂಗಸಂಬಂಧವಾಗಿ, ವಿಷಯೋಪಭೋಗಗಳೆಲ್ಲ ಸಹಜ ಲಿಂಗೋಪಭೋಗವಾಗುವದರಿಂದ, ಪ್ರಸಾದಾನುಸಂಧಾನದ ಸಹಜಯೋಗದಲ್ಲಿ ಇಂದ್ರಿಯನಿಗ್ರಹವಿರುವದಲ್ಲದೆ, ಅವುಗಳಲ್ಲಿದ್ದ ಸ್ವಭಾವಧರ್ಮವನ್ನು ಬೇರೆ ಉಪಾಯಗಳಿಂದ ಕುಂದಿಸಲು ಶಕ್ಯವೇ ಇಲ್ಲ. ಅವನ ಷಣ್ಮುಖಮುದ್ರಾದಿ ಸ್ಥೂಲದೇಹದ ಕಾರ್ಯಗಳಿಂದ ಅವುಗಳನ್ನು ವಿಷಯೋಪಭೋಗದಿಂದ ತಡೆಯಲು ಯತ್ನಿಸಿದರೆ, ಆತ್ಮರ ಸಂಸ್ಕಾರದೋಷವು ಎಚ್ಚರದಲ್ಲಿ ಮನದ ಚಿಂತನದ ವ್ಯಾಪಾರದಿಂದ ಉತ್ಪನ್ನವಾಗುವ ಮಂಡಿಗೆಯ ಭೋಜನವನ್ನೂ, ಸ್ವಪ್ನದಲ್ಲಿ ಸೂಕ್ಷ್ಮತನುವಿನ ವ್ಯಾಪಾರದಿಂದ ಉಣಿಸುವ ಆ ವ್ಯಸನದ ಭೋಜನವನ್ನೂ ತಪ್ಪಿಸುವವರಾರು? ಕಾರಣ ಇಂದ್ರಿಯ ನಿಗ್ರಹಕಾರ್ಯಗಳೆಲ್ಲ ಪರಿಪೂರ್ಣವಾದವುಗಳಲ್ಲ. ಸೃಷ್ಟಿಯ ಸಹಜಧರ್ಮಕ್ಕೆ ವಿರೋಧವಾದವುಗಳು. ಅವುಗಳನ್ನು ಅವುಗಳ ಸ್ವಭಾವಧರ್ಮದಲ್ಲಿ ಸಹಜ ಲಿಂಗೋಪಭೋಗವಾಗುವಂತೆ ಮಾಡುವ ಒಳಹೊರಗಿನ ಗುರುಲಿಂಗಜಂಗಮದಾಸೋಹವೇ ಪರಿಪೂರ್ಣವಾದದ್ದೂ, ಸೃಷ್ಟಿಯ ಸ್ವಾಭಾವಿಕಧರ್ಮಕ್ಕೆ ಅವಿರೋಧವಾದದ್ದೂ ಆಗಿರುವದು. ಪಂಚಕರ್ಮೇಂದ್ರಿಯಗಳಲ್ಲಿಯೂ ಪಂಚಜ್ಞಾನೇಂದ್ರಿಯಗಳಲ್ಲಿಯೂ ಬರುವ ಜನನೇಂದ್ರಿಯ ಹಾಗು ರಸನೇಂದ್ರಿಯಗಳ ಕಾಡಾಟವೇ ಆತ್ಮರಿಗೆ ಸ್ವಾಭಾವಿಕವಾಗಿ ಹೆಚ್ಚು. ಅದರೊಳಗೆ ಜನನೇಂದ್ರಿಯದು ರಸನೇಂದ್ರಿಯಗಿಂತ ಹೆಚ್ಚು. ಇದನ್ನು ಹಿಂದೆ ವಿವರಿಸಿರುವದು. ಅವುಗಳ ವಿಷಯೋಪಭೋಗವು, ಪ್ರತ್ಯಕ್ಷವಾಗಿ ಸ್ಥೂಲಪದಾರ್ಥಗಳ ಸ್ಪರ್ಶಯೋಗದಲ್ಲಿರುವದರಿಂದ, ಆ ವಿಷಯಕ್ಕೆ ಕಾರಣವಾದ ಸ್ಥೂಲಪದಾರ್ಥಗಳಿಂದ ದೂರಿದ್ದಮಾತ್ರದಿಂದ ಅವುಗಳನ್ನು ನಿಗ್ರಹಿಸಿದಂತಾಗಲಿಲ್ಲ. ಹಾಗೆ ಮಾಡುವದರಿಂದ ಅಂತರಂಗದಲ್ಲಿ ಅವುಗಳ ಕಾಡಾಟವು ಹೆಚ್ಚಾಗುವದು. ಮತ್ತು ಆ ವ್ಯಸನದ ಮೂಲಕ ಅನುಸಂಧಾನದ ಸಾಧನಗಳೆಲ್ಲ ಗುರುಲಿಂಗಜಂಗಮದಾಸೋಹದಿಂದ ಕಡೆಗಾಗಿ ಬಹಿರಂಗದ ಸದಾಚಾರಗಳನ್ನೆಲ್ಲ ಮಲವರ್ಧಕ ಕಾರ್ಯಗಳನ್ನಾಗಿಸುವದಲ್ಲದೆ, ಅಂತರಂಗದಲ್ಲಿ ನಾನಾತರಹದ ದೋಷಗಳನ್ನು ಹೆಚ್ಚಿಸಿ, ಹೊಸ ಹೊಸ ರೋಗಗಳ ಉತ್ಪತ್ತಿಗೆ ಕಾರಣವಾಗುವವು. ಆದುದರಿಂದ ಇವೆರಡು ಇಂದ್ರಿಯಗಳಲ್ಲಿ ವಿಶೇಷವಾಗಿ ಜನನೇಂದ್ರಿಯವನ್ನು ನಿಗ್ರಹಿಸುವ ಉಪಾಯವು ಯೋಗದ ಅಂಗಪ್ರತ್ಯಂಗಗಳನ್ನು ಒಳಕೊಂಡಿರುವದು. ಏನುಮಾಡಿದರೂ ತಡೆಯುವದಾಗದೆ ಕುಂಡಲಿಯ ಮುಖವನ್ನು ಊರ್ಧ್ವಕ್ಕೆ ತಿರುಗಿಸಿಕೊಳ್ಳುವ ಬಿಗಿಯಾದ ಉಪಾಯವು ಯೋಗದಲ್ಲಿ ಯೋಜಿಸಲ್ಪಟ್ಟಿತು. ಹಾಗೆ ಮಾಡದೆ ಧ್ಯಾನಧಾರಣಸಮಾಧಿಗಳು ನಡೆಯದಾದವು. ಆದರೂ ಸಂಸ್ಕಾರದ ದೋಷವು ಆತ್ಮರನ್ನು ವಿಷಯೋಪಭೋಗಕ್ಕೆಳಸದೆ ಎಂದೂ ಬಿಡದು. ಏಕೆಂದರೆ ಇದು ಇಂದ್ರಿಯಗಳ ದುರುಪಯೋಗ

ಧ್ದಿಂದಲೇ ಬೆಳೆದದ್ದಾಗಿರುವದು. ಈ ಸಂಸ್ಕಾರದೋಷವು ಹರಿದಲ್ಲದೆ ಅಮುಖೈಕ್ಯವಾಗಿ ನಿಜಲಿಂಗಸಂಬಂಧವಾಗದು. ನಿಜವಾದ ಅಮುಖೈಕ್ಯವೇ ಕೂಡಲಸಂಗಮನ ಸಮಾಧಿಯು. ಆದುದರಿಂದ ಬಸವಣ್ಣನು ಲಿಂಗೋಪಭೋಗದ ಭೋಗಾಂಗಕ್ಕಾಗಿ, ಸಹಜ ಮಲಪರಿಹಾರಕವಾದ ತ್ಯಾಗಾಂಗವನ್ನು ಸಾಧಿಸುವ ಉಪಾಯದಲ್ಲಿಯೇ ಪ್ರಯೋಗಿಸಿ, ಇಂದ್ರಿಯಗಳನ್ನು ಅವುಗಳ ಸ್ವಾಭಾವಿಕ ಧರ್ಮದಲ್ಲಿ ಸಹಜವಾಗಿ ನಿಗ್ರಹಿಸುವ ಪ್ರಸಾದಾನುಸಂಧಾನದನ್ನು ಮುಂದೆ ಮಾಡಿ, ಅವರಲ್ಲಿ ಯೋಗದ ಪಂಚಾಂಗಗಳನ್ನೆಲ್ಲ ಸಹಜವಾಗಿ ಒಳಕೊಂಡಿರುವನು.

ಲಿಂಗಾನುಸಂಧಾನವ ಯೋಗದಿಂದ ವಾಯುಪ್ರಾಣವಳಿದು ಲಿಂಗಪ್ರಾಣನ್ನಾಗಿಸದ ಹೊರತು, ನಿಜವಾದ ಪ್ರಾಣಾಯಾಮವಿಲ್ಲ. ಆದರೆ ಯೋಗಿಗಳ ಪ್ರಾಣಾಯಾಮದ ಗುಟ್ಟು ಇದಲ್ಲ. ಶರೀರದ ಬೇರೆ ಬೇರೆ ಭಾಗಗಳಲ್ಲಿ ಬೇರೆ ಬೇರೆ ಸ್ಥಿತಿರೀತಿಗಳಲ್ಲಿದ್ದು, ಅಲ್ಲಲ್ಲಿಯ ವ್ಯಾಪಾರಗಳನ್ನು ಸೃಷ್ಟಿಯ ಸ್ವಾಭಾವಿಕ ಧರ್ಮದ ಸಹಜ ಇಚ್ಛೆಯಲ್ಲಿ ನಡಿಸುತ್ತಿರುವ ದಶವಿಧವಾಯುಗಳನ್ನು ತನ್ನ ಸ್ವಾಧೀನ ಪಡಿಸಿಕೊಂಡು ತನ್ನಿಚ್ಛೆಯಲ್ಲಿ ದೈಹಿಕ ಕಾರ್ಯಗಳೆಲ್ಲ ನಡೆಯುವಹಾಗೆ ಮಾಡಿಕೊಳ್ಳುವದಿರುವದು. ಆದರಿಂದ ತಮ್ಮ ತಮ್ಮದೇಹದ ಸ್ಥಿತಿರೀತಿಗಳಿಗನುಸರಿಸಿ, ಸೃಷ್ಟಿಯ ಸ್ವಾಭಾವಿಕಧರ್ಮದಲ್ಲಿ ಕೆಲವೊಂದು ಎಣಿಕೆಯ ಪ್ರಮಾಣದ ಶ್ವಾಸಸಂಖ್ಯೆಯು ತೀರುವವರೆಗೆ ತಾಳುವದಾದ ದೇಹಗಳನ್ನು ತಮಗೆ ಬೇಕಾದ್ದಾಗ್ಗೆ ಬೇಕಷ್ಟು ಅವಧಿಯವರೆಗೆ ತಮ್ಮಿಚ್ಛೆಯಲ್ಲಿ ಖರ್ಚುಮಾಡಿ, ಬೇಡಾದ್ದಾಗ್ಗೆ ತಡೆದು, ತಾಳಿಕೆಯ ಅವಧಿಯನ್ನು ಬೆಳಿಸಿಕೊಳ್ಳಲನುವಾಗುವದೇನೋ ನಿಜ! ಆದರೆ ಆದು ಜೀವಗಳ್ಳತನದ ಉಪಾಯವಾಗಿದೆಯೇ ಹೊರತು, ಸೃಷ್ಟಿಯ ಸ್ವಾಭಾವಿಕ ಧರ್ಮದಲ್ಲಿ ಕೆಲವೊಂದು ಅವಧಿಯಲ್ಲಿ ಮಲಾವರಣವು ಹರಿದು, ವಿಕಸಿತವಾದ ಸ್ವಾಭಾವಿಕ ಅರುಹಿನ ಸೀಮೆಯಲ್ಲಿ ಶ್ವಾಸರೂಪದಿಂದ ಜೀವನ ಕಾಯಕ್ಕೆ ಸಹಾಯಕಾರಿಯಾದ ಪ್ರಾಣದ ವ್ಯವಹಾರವನ್ನು ಲಿಂಗಾನುಸಂಧಾನದ ನಿರ್ವಿಕಾರದ ನಿಜವ್ಯಾಪಾರದಲ್ಲಿ ಬೆರಿಸಿಕೊಳ್ಳುವ ಉಪಾಯವಾಗಲಿಲ್ಲ ಆತ್ಮರ ಸಂಸ್ಕಾರದೋಷವೆಲ್ಲ ಹಿಂಗಿ, ನಿಜ ಅರುಹು ಬೆಳಗಿ, ನಿಜದ ನೆಲೆಗಂಡು, ನಿಜಾನುಸಂಧಾನದತ್ತ ಮುಖದಿರುಗಿ, ನಿಜದ ವ್ಯಾಪಾರವೇ ವ್ಯಯವಾಗಿ ಅಂಗವಾಗುವವರೆಗೆ ಪರಿಶುದ್ಧವಾದ ಮಂತ್ರಮಯದ ಪ್ರಾಣದ ವ್ಯಾಪಾರವನ್ನು ಕೇಳಬಾರದು. ಆತ್ಮರು ಸಂಸ್ಕಾರದೋಷದಿಂದ ತೊಳೆಯಲ್ಪಟ್ಟು ಪರಿಶುದ್ಧ ಜೀವನಕಾರ್ಯವುಳ್ಳವರಾಗುವವರೆಗೆ ಆಚಾರಲಿಂಗಸಮರಸಿಗಳಲ್ಲ. ಆಚಾರಲಿಂಗ ಸಮರಸಿಗಳಾದುದೇ ಮಾಂಸಪಿಂಡವಳಿದು ಮಂತ್ರಪಿಂಡವು ಸಿದ್ಧಿಸಿದುದರ ಕುರುಹು. ನಿಜ ಅರುಹು ಬೆಳಗಿ ಜೀವನವ್ಯಾಪಾರವೆನಿಸುವ ಪ್ರಾಣದ ಎಲ್ಲಾಸ ಕ್ರಿಯೆಗಳೆಲ್ಲ ಪ್ರಸಾದಮಯ ವಾಗುವವರೆಗೆ ಶಿವಲಿಂಗಸಮರಸಿಗಳಲ್ಲ. ಶಿವಲಿಂ

ಗಸಮುರಸಿಗಳಾದುದೇ ಪ್ರಸಾದಕಾಯವು ಸಿದ್ಧಿಸಿದುದರ ಕುರುಹು. ಇಂತಪ್ಪ ಪ್ರಸಾದಕಾಯವನ್ನು ಸಿದ್ಧಿಸಿಕೊಳ್ಳುವದು ನಿಜವಾದ ಪ್ರಾಣಾಯಾಮವಾಗಿರಲು ಅದನ್ನು ಬಿಟ್ಟು, ಆತ್ಮರ ಸಂಸ್ಕಾರದೋಷವುಳ್ಳ ಜಡತ್ವದ ಸ್ಥಿತಿಗೆ ಹೋಳಿದ ಅಂತಿಮಭಾವದಲ್ಲಿ, ರೇಚಕ ಪೂರಕ ಕುಂಭಕಾದಿಗಳಿಂದ ಪ್ರತಿ ಎರಡು ಶ್ವಾಸಗಳ ನಡುವಿನ ಅವಧಿಯನ್ನು ಬೆಳಸಿಕೊಳ್ಳುವ ಸಾಧನದ ಉಪಾಯದಿಂದ ಆತ್ಮರ ಜಡತ್ವವು ಹಿಂಗಿ ಊರ್ಧ್ವಮುಖವಾಗುವ ಬಗೆಯಾವದು? ಅಧೋಮುಖರಾದ ಆತ್ಮರು ಎಲ್ಲಿದ್ದರೇನು? ನಿರಂಜನ ಸ್ಥಿತಿಯಲ್ಲಿ ಬೆರೆಯುವದೊತ್ತಟ್ಟಿಗಿರಲಿ ಶಾಶ್ವತವಾಗಿ ಉಳಿದುಕೊಳ್ಳಲು ಅಧಿಕಾರಿಗಳು ಅಲ್ಲವೇ ಅಲ್ಲ.

ಗುರುಲಿಂಗಜಂಗಮದ ದಾಸೋಹದಲ್ಲಿ ತನುಕರಣಾದಿಗಳು ನೆಲಿಸಿ, ಬಲಿತು, ಸಹಜ ಲಿಂಗಕಿರಣಗಳಾಗುವ ಹಾಗೆ, ಅತ್ತಿತ್ತ ವಿಷಯಗಳಿಗಾಗಿ ಅವುಗಳನ್ನು ಎಷ್ಟೂ ಹರಿದಾಡಗೊಡದೆ, ಕೇವಲ ಅನುಸಂಧಾನದಲ್ಲಿ ಅಖಂಡವಾಗಿ ತೊಡಗಿಸಲು ಪಡುವ ಎಚ್ಚರದ ಯೋಗದಲ್ಲಿ ನಿಜವಾದ ಹಠಯೋಗವಿರುವದು. ಇದು ಸರ್ವಸಾಮಾನ್ಯವಾದುದಲ್ಲ ತನುತ್ರಯಗಳಿಗೆ ದೀಕ್ಷಾತ್ರಯಗಳಿಂದ ಸಹಜಲಿಂಗತ್ರಯಗಳೆನಿಸುವ ಗುರುಲಿಂಗಜಂಗಮದ ಸಂಬಂಧವು ಎಷ್ಟೂ ಕೆಡದಂತೆ ಶಕ್ತಿಪಾತಪ್ರಯೋಗದಿಂದ ಪರಿಣಮಿಸುವ ಹಾಗೆ ಮಾಡಿದ ಹೊರತು, ಆತ್ಮರು ತಮ್ಮ ಜನ್ಮಜನ್ಮಾಂತರಸಂಸ್ಕಾರದ ಯೋಗದ ಬಲದಿಂದ ಆಗಾಗ್ಗೆ ವಿಷಯಗಳತ್ತ ಎಳಿಸುವ ಕರಣಗಳನ್ನು ದಾಸೋಹದಲ್ಲಿಯೇ ನಿಲಿಸುವ ಎಚ್ಚರವನ್ನು ಎಡೆವಿಡದೆ ಕಾಯ್ದುಕೊಳ್ಳುವ ಯೋಗದಲ್ಲಿ ಇದರ ಹೊರತು, ಆರಿಗೂ ಸಾಧ್ಯವಾಗಲರಿಯದು. ಐಹಿಕಆಮುಷ್ಮಿಕ ಫಲಪದವಿಗಳ ಭೋಗಗಳನ್ನೆಲ್ಲ ಹುಲ್ಲುಕಡ್ಡಿಗೆ ಕಡೆಯಾಗಿ ಬಗಿದು ಕೇವಲ ಕಾಯಕವ್ಯಾಪಾರದಿಂದ ಗುರುಲಿಂಗಜಂಗಮದಾಸೋಹದಲ್ಲಿಯೇ ಆಚರಿಸಲು ಸಿದ್ಧರಾದ ಹೊರತು, ಆತ್ಮರಿಗೆ ಈ ನಿಜವಾದ ಹಠಯೋಗದಲ್ಲಿ ಅಡಿಯಿಡಲು ಅಧಿಕಾರವು ಬರಲಾರದು. ಈ ನಿಜವಾದ ಹಠಯೋಗದಲ್ಲಿ ಅಡಿಯಿಟ್ಟಹೊರತು ನಿಜಮಂತ್ರಲಯರಾಜಯೋಗಗಳ ಸಹಜ ಪ್ರವರ್ತನೆಯು ನಿಲವಿಲ್ಲವು. ಆತ್ಮರಿಗೆ ಇಂತಪ್ಪ ಅಧಿಕಾರ ಪಾತ್ರತೆಯು ಜಗತ್ಕಲ್ಯಾಣಕರವಾದ ಶಿವತತ್ತ್ವದಲ್ಲಿ ಅಚಲವಾದ ಭಕ್ತಿಯನ್ನು ಆಚರಿಸಿದ ಹೊರತು, ಎಂದೂ ಬರಲಾರದು. ಇಂತಪ್ಪ ಪಾತ್ರತೆಯು ಮೆಟ್ಟಿಗೆ ಆತ್ಮರು ಆಗಮಿಸುವ ಕುರಿತು ಆಚರಿಸಿ ತೋರಿದರು ಪುರಾತನರು ಗುರುಲಿಂಗಜಂಗಮದ ದಾಸೋಹದಲ್ಲಿ ಆಚಾರವೇ ಅಂಗವಾಗಿ ನಿಜದ ನೆಲೆಯಲ್ಲಿ ಹೆಜ್ಜೆಗಳು ನೆಲಿಸಿ ಲಿಂಗಚೈತನ್ಯದ ಲಿಂಗೈಕ್ಯದ ನಿರ್ವಿಕಾರದ ಲಿಂಗಕ್ಷೇತ್ರದಲ್ಲಿ ಆಚರಿಸುವ ಸಹಜ ಪಂಚಸೂತಕವಿರಹಿತವಾದ ನಡೆಯನ್ನು, ಅಚಲವಾದ ಪುರಾತನರ ಭಕ್ತಿಯೋಗದಲ್ಲಿ ಬೈಲಲಿಂಗಕ್ಕಾಗಿ ಗುರುಲಿಂಗಜಂಗಮದ ದಾಸೋಹವಿಲ್ಲದೆ ಆಚರಿಸಿ, ಆತ್ಮಕ್ಯದ ತತ್ತ್ವಗಳನು ಪ್ರಯೋಗಪೂರ್ವಕವಾಗಿ ವ್ಯಕ್ತಪಡಿಸುತ್ತಿಹುದು ಇಷ್ಟಾ

ಹ್ಮಣವೆಂದರೆ ಅದು ನಿಜವಲ್ಲ; ಏಕೆಂದರೆ ಬಿದ್ದುಹೋದ ಹಾಗು ಹೋಗದೆ ಇದ್ದ ಅನೇಕ ದೇಹಗಳೊಳಗಿನ ಜೀವಗಳು ಒಂದೇ ರೂಪವುಳ್ಳವುಗಳಾಗಿರುವವು; ಕರ್ಮವಶದಿಂದ ಒಂದೇ ಜೀವಕ್ಕೆ ಅನೇಕ ದೇಹಗಳು ಸಂಭವಿಸುವವು; ಮತ್ತು ಆ ಎಲ್ಲ ಶರೀರಗಳಲ್ಲಿ ಜೀವವು ಒಂದೇ ವಿಧವಾಗಿರುವದು. ಹಾಗಾದರೆ ದೇಹವು ಬ್ರಾಹ್ಮಣನೋ? ಅದೂ ಅಲ್ಲ; ಏಕೆಂದರೆ ಚಾಂಡಾಲರ ಮೊದಲುಮಾಡಿಕೊಂಡು ಕಡೆಯುಪರಿಯುಂತರದಲ್ಲಿರುವ ಮನುಷ್ಯರ ಪಂಚಭೂತಾತ್ಮಕ ದೇಹವು ಒಂದೇ ರೂಪವಾಗಿರುವದು; ಹಾಗು ಜರಾ, ಮರಣ, ಧರ್ಮ, ಅಧರ್ಮ ಮೊದಲಾದವು ಸಮವಾಗಿರುವದು ಕಂಡು ಬರುತ್ತದೆ; ಬ್ರಾಹ್ಮಣನು ಬಿಳಿಯ ಬಣ್ಣದವನು, ಕ್ಷತ್ರಿಯನು ಕೆಂಪುಬಣ್ಣದವನು, ವೈಶ್ಯನು ಹಳದೀಬಣ್ಣದವನು; ಶೂದ್ರನು ಕಪ್ಪು ಬಣ್ಣದವನು ಎಂಬ ನಿಯಮವಿಲ್ಲ; ಮತ್ತು ಪಿತೃಗಳ (ಮೃತರಾದ ಹಿರಿಯರ) ಶರೀರಗಳನ್ನು ದಹನಮಾಡುವದರಿಂದ ಅವರ ಮಕ್ಕಳು ಮೊದಲಾದವರಿಗೆ ಬ್ರಹ್ಮಹತ್ಯಾಮೊದಲಾದ ದೋಷಗಳು ತಟ್ಟುವವು. ಹಾಗಾದರೆ ಜಾತಿ ಬ್ರಾಹ್ಮಣನೋ? ಅದೂ ಅಲ್ಲ! ಏಕೆಂದರೆ ಬೇರೆ ಜಾತಿಯ ಜಂತುಗಳ ಅನೇಕ ಪ್ರಕಾರಗಳಲ್ಲಿ ಬಹಳ ಮಂದಿ ಮಹರ್ಷಿಗಳು ಹುಟ್ಟಿರುವರು:- ಋಷ್ಯಶೃಂಗನು ಮೃಗದಿಂದ, ಕೌಶಿಕನು ಕುಶದಿಂದ, ಜಾಂಬೂಕನು ಜಂಬೂಕದಿಂದ, ವಾಲ್ಮೀಕಿಯು ವಲ್ಮೀಕದಿಂದ, ವ್ಯಾಸನು ಕೈವರ್ತಕಕನ್ನಿಕೆಯಿಂದ, ಗೌತಮನು ಶಶದ ಬೆನ್ನಿನಿಂದ, ವಶಿಷ್ಠನು ಊರ್ವಶಿಯಿಂದ, ಅಗಸ್ತ್ಯನು ಕಲಶದಿಂದ, ಹುಟ್ಟಿದರೆಂದು ಶ್ರುತಿಯಿರುವದು ಈ ಋಷಿಗಳ ಜಾತಿಯ ಹೊರತು, ಮೊದಲು ಜ್ಞಾನಮೂಲಕ ಬ್ರಾಹ್ಮಣರೆಂದು ಪ್ರತಿಪಾದಿಸಲ್ಪಟ್ಟ (ಕರಿಸಿಕೊಂಡ) ಋಷಿಗಳು ಬಹಳ ಮಂದಿ ಇರುವರು. ಹಾಗಾದರೆ ಜ್ಞಾನ ಬ್ರಾಹ್ಮಣನೋ? ಅದೂ ಅಲ್ಲ; ಏಕೆಂದರೆ ಕ್ಷತ್ರಿಯ ಮೊದಲಾದವರು ಪರಮಾರ್ಥಕಂಡವರೂ, ಅಬಿಜ್ಞರಾದವರೂ, (ಜ್ಞಾನಿಗಳಾದವರೂ) ಬಹಳಮಂದಿ ಇರುತ್ತಾರೆ. ಹಾಗಾದರೆ ಕರ್ಮ ಬ್ರಾಹ್ಮಣನೋ? ಅದೂ ಅಲ್ಲ. ಎಲ್ಲ ಪ್ರಾಣಿಗಳಿಗೆ ಪ್ರಾರಬ್ಧ ಸಂಚಿತ ಹಾಗು ಆಗಾಮಿ ಕರ್ಮವು ಸಮವಾಗಿರುವದೆಂದು ಕಂಡುಬರುವದು; ಕರ್ಮವಶರಾಗಿ ಕ್ರಿಯೆಗಳನ್ನು ಮಾಡುವರು. ಹಾಗಾದರೆ ಧಾರ್ಮಿಕ ಬ್ರಾಹ್ಮಣನೋ? ಅದೂ ಅಲ್ಲ. ಏಕೆಂದರೆ ಕ್ಷತ್ರಿಯ ಮೊದಲಾದವರು ಬಂಗಾರ ಕೊಟ್ಟವರು ಬಹಳಮಂದಿ ಇರುತ್ತಾರೆ ಹಾಗಾದರೆ ಬ್ರಾಹ್ಮಣನ್ಯಾರು? ಯಾವನೊಬ್ಬನು ಅದ್ವಿತೀಯವಾದಂಥ, ಜಾತಿ ಗುಣಕ್ರಿಯೆಗಳಿಲ್ಲದಂಥ, ಷಡೂರ್ಮಿ, ಷಡ್ಭಾವ ಮೊದಲಾದ ದೋಷಗಳಿಲ್ಲದಂಥ, ಸತ್ಯಜ್ಞಾನಾನಂದಗಳಿಗೆ ಕಡೆಯಿಲ್ಲದ ಸ್ವರೂಪವುಳ್ಳಂಥ, ಸ್ವತಃ ವಿಕಲ್ಪಗಳಿಗೆ ಸಿಲುಕದಿದ್ದು ಎಲ್ಲ ಕಲ್ಪಗಳಿಗೆ ಆಧಾರವಾದಂಥ, ಎಲ್ಲ ಭೂತಗಳಲ್ಲಿ ಅಂತರ್ಯಾಮಿಯಾಗಿರುವಂಥ, ಒಳಹೊರಗೂ ಆಕಾಶದಂತೆ ತುಂಬಿಕೊಂಡಿರುವಂಥ, ಸ್ವಭಾವತಃ ಅಖಂಡಾನಂದವುಳ್ಳಂಥ, ಉಪಮಿಸಬಾರದಂಥ, ಅನುಭವದಿಂದೊಂದರಿಂ

ಪಾತ್ರತೆಯನ್ನು ತಂದುಕೊಡುವ ನಡೆಯ ಸಿದ್ಧಾಂಗಸಾಧಕಪ್ರಯೋಗವೂ ಆಗಿರುವದು. ಹೀಗಿದ್ದು ಒಂದು ಧರ್ಮದವರು ಮತ್ತೊಂದು ಧರ್ಮದವರನ್ನು ದೂಷಿಸುವದೂ, ಮುರಿದುಹಾಕಲು ಯತ್ನಿಸುವದೂ ತಮ್ಮ ತಮ್ಮ ಧರ್ಮಗಳಿಗೇ ಬಾಹ್ಯವಾದವುಗಳು. ಸರ್ವಧರ್ಮಗಳ ಸಾರವನ್ನು ಒಳಕೊಂಡು ನಿರ್ವಿಕಾರದ ನಿಜೈಕ್ಯದ ನಿಜಲಿಂಗಕ್ಷೇತ್ರದಲ್ಲಿ ಆತ್ಮಗನ್ನು ನಿಲುಕಿಸಲು ಸರ್ವತೋಮುಖದಿಂದ ದಿಗ್ಬಂಧಿಸಿ ಲಿಂಗಸಾನಿಧ್ಯಯೋಗದಲ್ಲಿ ಲಿಂಗವನ್ನಾಗಿಸುವ, ಸರ್ವಾಂಗಸುಂದರವಾದ, ಗುರುಲಿಂಗಜಂಗಮದಾಸೋಹದ ಸತ್ಯಶರಣಮಾರ್ಗದ ಪ್ರತ್ಯಕ್ಷ ಪ್ರಯೋಗವು, ಲೋಕದಲ್ಲಿ ಸತ್ಯಶರಣರ ತರುವಾಯ ಮರೆಮಾಜಿದುದರಿಂದಲೇ ವಿಕಾರವು ಇಷ್ಟು ಹೊತ್ತಿದ್ದು ನಿಲ್ಲಲಿಕ್ಕೆ ಕಾರಣವಾಯಿತು. ಇರಲಿ.

ಶರಣಮಾರ್ಗವು ಸರ್ವಾಂಗಸುಂದರವಾದಾಗ್ಯೂ ಅದನ್ನು ಅಚರಿಸುವ ಪಾತ್ರತೆಯು ಉಂಟಾದ ಹೊರತು ನಿಜವಾದ ಹಠಯೋಗದಲ್ಲಿ ಗುರುಲಿಂಗಜಂಗಮದ ದಾಸೋಹವನಾಚರಿಸಲು ಯಾರಿಗೂ ಅಧಿಕಾರವು ಬರಲಾರದಷ್ಟೇ! ಆದುದರಿಂದ ತನುಕರಣಾದಿಗಳನ್ನು ಕಟ್ಟಲು ಅತ್ಯಂತ ಬಿಗಿಯಾದ ಆಸನ, ಷಣ್ಮುಖಮುದ್ರೆ, ಲಂಬಿಕಾದಿಹಠಯೋಗಗಳು ಯೋಗಸಾಧಕರ ಪ್ರಚಾರದಲ್ಲಿ ಬಂದಿರುವವು. ಆದರೂ ಇವು ಸ್ಥೂಲದೇಹವಿಡಿದು ಆಚರಿಸುವಾಗ್ಗೆ ಯತಿಗಳಿಗೆ ಬಲವಾದ ಸಾಧನವಾಗದೆ ಹೋಗುವದರಿಂದ ಸಿಟ್ಟು ಗೆದೆಯುವದಾಗದೆ, "ಯತಿಗಳು ಕೋಪಿಗಳೆಂ"ಬ ಪ್ರವಾದಕ್ಕೆ ಗುರಿಯಾಗಿರುವರು. ನಿಜವಾದ ಹಠಯೋಗವೇ ಸಹಜವಾದ ಸರ್ವಯೋಗಗಳಿಗೆ ಮೂಲವಾಗಿರುವದರಿಂದ ಯಾವ ಯೋಗಗಳ ನಿಜಸ್ಥಿತಿಯು ಯೋಗಿಗಳಿಗೆ ನಿಲುಕದೆ ಹೋಗಿ ಪ್ರತಿಯೊಂದು ಯೋಗಗಳು ಕಷ್ಟಸಾಧ್ಯವಾಗಿರುವದರಿಂದ ಲೋಕದ ಸಹಜ ಬಳಕೆಗೆ ಅವು ಹೊಂತಾದವಾಗಿರುವವು. ಆತ್ಮರ ಸಹಜವೃತ್ತಿಗಳಲ್ಲೆಲ್ಲ ನಿಜಯೋಗಗಳೇ ಒಳಕೊಂಡು ಪ್ರಪಂಚದ ವ್ಯವಹಾರವು ನಡೆದಿರುವದರಿಂದಲೂ, ತೋರುವ ತೋರಿಕೆಯು ಒಳಹೊರಗೂ ಮುಳ್ಳುಮೊನಗೆ ಇಂಬಿಲ್ಲದಂತೆ ಲಿಂಗವೇ ವ್ಯಾಪಿಸಿರುವದರಿಂದಲೂ ಮಹಾನುಭಾವಿಗಳು ಆತ್ಮರ ತಾರತಮ್ಯಗಳನ್ನೇನು ಲಕ್ಷಿಸದೆ, ಪ್ರತಿಯೊಂದು ವ್ಯಕ್ತಿಯು ಲಿಂಗಮಯವಾದ ತಮ್ಮ ತಮ್ಮ ಇಷ್ಟಗಳ ತೋರಿಕೆಗಳಲ್ಲಿಯೂ, ಸಂಗತಿಗಳಲ್ಲಿಯೂ, ವ್ಯವಹರಿಸುವ ಆತ್ಮವೃತ್ತಿಯನ್ನು ಕಂಡು "ಅವರವರಿಗೆ ಅವರವರ ಮನವಲಿದುದೇ ಬ್ರಹ್ಮ" ಎಂದು ಹೇಳುವರು. ಆದರೆ ಇದು ಕೇವಲ ಲಿಂಗವ್ಯಾಪಕ ದೃಷ್ಟಿಯಿಂದ ನುಡಿದ ಮಾತಾಗಿರುವದೇ ಹೊರತು, ಆತ್ಮದೃಷ್ಟಿಯಿಂದ ನುಡಿದುದಲ್ಲ! ಏಕೆಂದರೆ ಆತ್ಮರು ಅಂತಃಕರಣಗಳ ಯೋಗದಿಂದ ಲಿಂಗಸಾನ್ನಿಧ್ಯಯೋಗದ ಲಿಂಗಕ್ಷೇತ್ರಕ್ಕೆ ಹೊರತಾಗಿ ಈ ಸಂಸಾರಚಕ್ರದಲ್ಲಿ ತೊಳಲುವ ವ್ಯವಹಾರವುಳ್ಳವರಾಗಿರುವರು. ಆದುದರಿಂದ ಅವರ ಪ್ರವರ್ತನೆಗಳೆಲ್ಲ ಬಿಂದುಮಾತ್ರಸುಖಕ್ಕಾಗಿ ಬೆಟ್ಟದಷ್ಟು ಕಷ್ಟದಾಯಕವಾಗಿರುವವು, ಆದಾಗ್ಯೂ ಆತ್ಮರ

ಬಹು ದೊಡ್ಡ ಭಾಗವು ಜಡತ್ವದ ವಿವೇಕದೃಷ್ಟಿಯ ಶೂನ್ಯತೆಯ ಮೂಲಕ ಆ ಬಿಂದುಮಾತ್ರಸುಖಕ್ಕೂ ಹೊರತಾಗಿ ಕೇವಲ ಕಷ್ಟಕ್ಕೆ ಗುರಿಯಾಗಿರುವದು. ಅಂತೇ "ಯೋ ಧ್ರುವಾಣಿ ಪರಿತ್ಯಜ್ಯ ಅಧ್ರುವಂ ಪರಿಷೇವತೇ। ಧ್ರುವಾಣಿ ತಸ್ಯ ನಶ್ಯಂತಿ ಹ್ಯಧ್ರುವಂ ನಷ್ಟಮೇವಚ" ಎಂಬ ಅನುಭವೋಕ್ತಿಯುಂಟಾಗಿರುವದು. ಸಹಜವಾಗಿ ಸರ್ವಯೋಗಗಳನ್ನು ಒಳಕೊಂಡ ಅವರ ಸಹಜವೃತ್ತಿಯು ಸಹಜ ವ್ಯವಹಾರಗಳಲ್ಲಿಯೇ ಅಖಂಡವಾದ ಲಿಂಗಸಾನ್ನಿಧ್ಯಯೋಗದ ಗುರುಲಿಂಗಜಂಗಮದ ದಾಸೋಹದ ಮಾರ್ಗವನ್ನು ತೋರಿದುದರಿಂದ, ಜಡರಿಗೆ ಗುರುಲಿಂಗಜಂಗಮದಾಸೋಹಿಯೂ, ಸಂಸಾರಿಯೂ ಒಂದೇ ಸ್ವರೂಪದಲ್ಲಿ ತೋರುವರು. ಆದುದರಿಂದ ಲಿಂಗಕ್ಷೇತ್ರವು ಲೋಕದ ಜಡತ್ವದ ಮೂಲಕ ಇದ್ದೂ ಇಲ್ಲದಂತಾಗಿರುವದು. ನಿಜಸೂತ್ರಕ್ಕೊಳಪಟ್ಟ ದೀಕ್ಷಾತ್ರಯಗಳಿಂದ ತನುತ್ರಯಗಳಿಗೆ ಲಿಂಗತ್ರಯಸಂಬಂಧಿಯಾದ ಅಂಗನು ಲಿಂಗಪಾತಿವ್ರತ್ಯದ ನಿಜಧರ್ಮದ ನಿಜವಾದ ಹಠಯೋಗದಲ್ಲಿ ಲಿಂಗಾನುಸಂಧಾನಿಯಾಗಿರುವದರಿಂದ ಮುಂದಿನ ನಿಜವಾದ ಯೋಗಗಳು ತಮ್ಮಿಂದ ತಾವೇ ಹೇಗೆ ಪರಿವರ್ತಿಸುವವೆಂಬುದನ್ನು ನೋಡಿರಿ.

ಮನ-ಮಾರುತದೃಷ್ಟಿಗಳು ಲಿಂಗದಲ್ಲಿಯೇ ನೆಟ್ಟು ಆ ನೋಟಕೂಟಗಳೇ ಪ್ರಾಣವಾದ ಹೊರತು, ನಿಜವಾದ ರಾಜಯೋಗವಿಲ್ಲ, ಆತ್ಮರು ಆವದೊಂದು ವಿಶೇಷವಾಗಿ ಮನಸ್ಸಿಗೆ ಹತ್ತಿದ ಸಂಗತಿಯಲ್ಲಿ ಚಿಂತನೆಯ ಗುಂಗಿನಲ್ಲಿ, ಆ ಸಂಗತಿಯಲ್ಲಿಯೇ ನೆಟ್ಟ ನೋಟಕೂಟಗಳುಳ್ಳವರು ಸಹಜವಾಗಿಪ್ಪರು. ಈ ಸಹಜಸ್ಥಿತಿಯನ್ನೇ ಲಿಂಗದಲ್ಲಿ ಅಖಂಡವಾಗಿ ಸ್ಥಿರಪಡಿಸುವಹಾಗೆ ಸಾಧಿಸಿಕೊಂಡು ಅಂಗವಿಸಿಕೊಳ್ಳಬೇಕಾದರೆ, ಕರದಿಷ್ಟವು ಪ್ರತಿಪ್ರಾಣವಾಗಿರಲಿಕ್ಕೇ ಬೇಕು. ಹಾಗಲ್ಲದೆ ಆತ್ಮರು ತಮ್ಮತನುಕರಣಾದಿಗಳನ್ನು ಅದಕ್ಕಾಗಿ ಸೂರೆಗೊಟ್ಟು ಆಚರಿಸಲಾರರು. ಇಂತಹ ಸೂರೆಗೊಟ್ಟ ಆಚರಣೆಯಿಲ್ಲದೆ ಸಹಜವಾದ ನಿಜಹಠಯೋಗವು ಶಕ್ಯವಿಲ್ಲವು. ಇಂತಹ ಸಹಜವಾದ ನಿಜಹಠಯೋಗದಲ್ಲಿಯೇ ಸಂಸಾರದ ಆಟವೆಲ್ಲವೂ ನಡೆದಿರುವದು. ಏಕಂದರೆ ತಮ್ಮಹಿತವನ್ನು ಮರೆತು ತಮ್ಮ ಹೆಂಡರು-ಗಂಡರು-ಮಕ್ಕಳು-ಮರಿಗಳ ಹಿತಕ್ಕಾಗಿಯೇ ತನುಮನಧನಗಳನ್ನು ಸೂರೆಗೊಂಡು ಸಹಜವಾಗಿ ವ್ಯವಹರಿಸಿದ ಹೊರತು ಸಂಸಾರದ ಆಟವೇ ಇಲ್ಲ. ಇಂತಪ್ಪ ಅಂತಃಕರಣದ ಬಳವಳಿಕೆಯು ಜ್ಞಾನಕಲೆಯುಳ್ಳ ಮಾನವಕೋಟಿಯಲ್ಲಿಯಷ್ಟೇ ಇರುತ್ತದೆಂತಲ್ಲ. ಕೂಡಿ ನಡೆಯುವ ಸಚೇತನ ಕೋಟಿಯಲ್ಲೆಲ್ಲ ಕಂಡುಬರುವದು. ಆದು ದರಿಂದ ಈ ಅಂತಃಕರಣವೃತ್ತಿಯು ಸ್ವಭಾವಸಿದ್ಧವಾಗಿ ಅಂಗಭೂತವಾದದ್ದು. ಈ ವೃತ್ತಿಗಾಗಿ ಅಧ್ಯಯನಮಾಡುವದು ಇಲ್ಲವೇ ಇಲ್ಲ. ಹೆಂಡರುಗಂಡರುಮಕ್ಕಳುಮರಿಗಳೊಂದಿಗೆ ಏಕಜೀವಾಗಿ ಕೂಡಿ ನಡೆಯುವ ಸಂಸಾರದಲ್ಲಿ ತಮ್ಮ ತಮ್ಮ ಕುಟುಂಬಗಳ ಪೂರ್ತೇ ಇದ್ದ ಈ ಸಹಜವೃತ್ತಿಯ ಬಳವಳಿಕೆಯನ್ನು

ಪ್ರಾಣಿಕೋಟಿಗೆಲ್ಲ ಸಹಜವಾಗಿ ಉಪಯೋಗಿಸುವ ಹಾಗೆ ಸಾಧಿಸುವದೇ ಮೊದಲನೆಯ ಅಧ್ಯಯನವಾಗಿರುವದು. ಆದರೆ ಇದಕ್ಕೆ ಮಾಯಾಮೋಹರಾಗದ್ವೇಷಾದಿಗಳು ಅಡ್ಡನಿಂತಿರುವವು. ಶಾಸ್ತ್ರಾಧ್ಯಾಯನದಲ್ಲಿ ಗುಂಗಾದ ಸ್ಥಿತಿಯೊಳಗೆ ಇವು ತಮ್ಮಲ್ಲಿ ಮರೆಮಾಜಿರುವವೆಂದು ಅನಿಸುವದೇನೋ ನಿಜ. ಆದರೆ ಅದು ರಾಗವು ಕೆಟ್ಟುದರ ನಿಜವಾದ ಸ್ಥಿತಿಯಲ್ಲ. ಆ ಗುಂಗಾದ ಅವಸ್ಥೆಯಲ್ಲಿದ್ದಾಗ ಮಾತ್ರ ವೈರಾಗ್ಯವು ತೋರುವದು. ಆತ್ಮರಿಗೆ ಈ ವೈರಾಗ್ಯವು ಶಾಶ್ವತವಾದುದಲ್ಲ. ರಾಗವನ್ನು ಕೆಡಿಸಿಕೊಂಡ ಹೊರತು, ನಿಜವಾದ ವಿರಾಗವು ತೋರದು. ಈ ವಿರಾಗವು ವಿವೇಕದ ಬಳಿಕೆಯಿಂದ ಕೆಡುವದು. ಬರೇ ಅಧ್ಯಯನದಿಂದ ಎಂದೂ ಕೆಡದ್ದು. ಹಾಗಿರುತ್ತಿದ್ದರೆ "ಓದಿದವರಿಗೆ ಓಣಿಯು ಸಿಗದು" ಎಂಬ ಅನುಭವದ ಗಾದೆಯ ಮಾತು ಇರುತ್ತಿದ್ದಿಲ್ಲ. ಶಾಸ್ತ್ರಾಧ್ಯಾಯನದಿಂದ ಮಾಯಾಮೋಹಗಳ ನಿರಸನವಾಗುವದೇನೋ ನಿಜ! ಆ ನಿರಸನಮಾತ್ರದಿಂದ ಅವು ಕೆಟ್ಟವಂತಲ್ಲ. ಅಷ್ಟರ ಮಟ್ಟಿಗೆ ಅವುಗಳ ಕಸುವು ಮಾತ್ರ ಕಡಿಮೆಯಾಗುವದು. ಈ ಸ್ಥಿತಿಯನ್ನು ಅದು ಕೆಡುವದರೊಳಗಾಗಿಯೇ ಸಾಧಿಸಿಕೊಂಡು ಯಾರು ತಮ್ಮ ಅಂತಃಕರಣಗಳ ಬಳಿಕೆಯ ಕ್ಷೇತ್ರವನ್ನು ಶಕ್ತ್ಯಾನುಸಾರ ಬೆಳೆಸುತ್ತ ಹೋಗುವರೋ, ಆ ಬೆಳವಣಿಗೆಯು ಅಳವಟ್ಟ ಕ್ರಮದಲ್ಲಿ ಅವರ ರಾಗವು ಕೆಡುವದು. ಅಲ್ಲದೆ, ಬರೇ ಸಾಯುವತನಕವರೆಗೆ ಶಾಸ್ತ್ರಾಧ್ಯಯನ ಮಾಡಿದರೂ ಪ್ರಯೋಜನವಾಗದು. ರಾಗವು ಕೆಡುವ ಕ್ರಮದಲ್ಲಿ ಮಾಯಾಮೋಹಗಳು ಕೆಡುವವಲ್ಲದೆ, ಬರೇ ಬಾಯಮಾತಿನಿಂದ ಅವುಗಳ ನಿರಸನಮಾಡುವದು ಬಾಯಬ್ರಹ್ಮಗಳ ಆಟವಾಗಿರುವದು. ಅಂತೆ ಮಹಾನುಭಾವಿಗಳು "ಪ್ರಪಂಚಕ್ಕೆ ರಾಗವೇ ಬೀಜವೆಂ"ದು ಹೇಳುವರು ಬಸವಣ್ಣನು ಈ ರಾಗವನ್ನು ಕೆಡಿಸುವದಕ್ಕಾಗಿಯೇ ಸ್ಥೂಲತನುವಿನ ಕರಕ್ಕೆ ಇಷ್ಟವನ್ನು ಕೊಟ್ಟು, ಆತ್ಮವೃತ್ತಿಗೆ ಸರಿಯಾಗಿ ಷಟ್ಸ್ಥಲಮಾರ್ಗವನ್ನು ಏರ್ಪಡಿಸಿದನು. ಈ ರಾಗವು ಕೆಡುವ ಕ್ರಮದಲ್ಲಿ ಅಭಿಮಾನವು ಕುಂದಿ ನಿರಹಂಕಾರವು ಅಳವಡುತ್ತ ನಿಜದ ನಿಲವು ತೋರಹತ್ತಿ ಪ್ರತ್ಯಕ್ಷಸಾನ್ನಿಧ್ಯಯೋಗವು ಬಲಿತು,ಲಿಂಗಸಮರಸಯೋಗದಿಂದ ಅಂಗವು ಲಿಂಗವಾಗುವ ಕ್ರಮದಲ್ಲಿ, ಸಹಜ ಲಯಯೋಗದ ಯೋಜನೆಯು ಇರದಿದ್ದರೆ,ಭಕ್ತಿಯೋಗದ ಷಟ್ಸ್ಥಲದ ಮಾರ್ಗಾನುವರ್ತನದಲ್ಲಿ ವ್ಯಕ್ತವಾದ ಲಿಂಗಪರವಶತೆಯಲ್ಲಿ ನೆಟ್ಟ ನೋಟ ಕೂಟಗಳು ಪ್ರಾಣವಾಗಲಾರವು. ಈ ಯೋಜನೆಯೇ ಮಂತ್ರಯೋಗವು. ಅದು ದರಿಂದ ನಿಜಮಂತ್ರಯೋಗವು ನಾಮರೂಪಕ್ರಿಯಾದಿಗಳನ್ನು ಮರೆತು, ಸಹಜ ಲಿಂಗಚೈತನ್ಯವನ್ನೇ ಕಾಯ್ದುಕೊಳ್ಳುವದಾಗಿರುವದು.

ಲಿಂಗಚೈತನ್ಯಸ್ವರೂಪವನ್ನು ಕಾಯ್ದುಕೊಂಡೇ ವ್ಯವಹರಿಸುವದು ಸುಲಭಸಾಧ್ಯವಾದುದಲ್ಲ. ಸಹಜಲಯಯೋಗವಿಲ್ಲದೆ ಬರೇ ಹಠರಾಜಯೋಗಗಳಿಂದ ಅಂಗವು ಮಂತ್ರಮಯವಾದುದಾಗಲಾರದು. ಸಹಜಲಯಯೋಗವಿಲ್ಲದ

ಮಂತ್ರಾನುಸಂಧಾನದಲ್ಲಿ ನಿಜಲಿಂಗದ ನಿಜಸೂತ್ರಸಂಬಂಧವಿರದೆ ಇಷ್ಟವು ತನ್ನ ಕಲ್ಪಿತಕ್ಷೇತ್ರವಾದುದರಿಂದ ತಾನು ತನ್ನ ಸ್ವರೂಪದಲ್ಲಿ ಉಳಿದು ತನುಕರಣಾದಿಗಳು ತನ್ನ ಕಲ್ಪಿತಕ್ಷೇತ್ರದಲ್ಲಿ ಆ ಅನುಸಂಧಾನವು ಇರುವ ಮಟ್ಟಿಗೆ ಸ್ಥಿರಪಟ್ಟಂತೆ ಮಾತ್ರ ಆಗಿರಿಸುವದಾಗಿರುವದು. ತನ್ನ ಕಲ್ಪಿತಕ್ಷೇತ್ರವು ತನ್ನನ್ನು ದಹಿಸುವದೂ ಅಲ್ಲ! ತನ್ನ ಮಲಪರಿಹಾರಕವೂ ಅಲ್ಲ; ಆದುದರಿಂದ ನಿಜಸೂತ್ರಸಂಬಂಧವಿರದ ಈ ಕಲ್ಪಿತ ಕ್ಷೇತ್ರದ ಅನುಸಂಧಾನವು ಪ್ರಾಣಾಯಾಮಾದಿ ಬಿಗಿಯಾದ ಸಾಧನಗಳಿರದೆ ತನ್ನ ವಿಕಾರಮಯ ಸ್ಥಿತಿಯಲ್ಲಿ ಬಹಳಹೊತ್ತು ತಡೆಯಲಾರದು. ನಿಜಸೂತ್ರಾನುಸಂಧಾನವಿರದೆ ಸಹಜವಾದ ಯಾವ ಯೋಗಗಳೂ ಜರಗಲಾರವು. ಒಂದುವೇಳೆ ಸೃಷ್ಟಿಯ ಸ್ವಾಭಾವಿಕಧರ್ಮಕ್ಕೆ ವಿರೋಧವಾಗಿ ಅವುಗಳ ಅಭ್ಯಾಸದಲ್ಲಿದ್ದರೂ ಅವರಿಂದ ಮಲಪರಿಹಾರಕವಾಗಿ ಶುದ್ಧಾಂಗ ಸಾಧ್ಯವೂ ಇಲ್ಲ! ಅಭಿಮಾನವು ಕುಂದಿ ನಿರಹಂಕಾರವೂ ಇಲ್ಲ !! ಅಂಗವು ಲಿಂಗವಾಗುವ ಸಹಜ ಲಯಯೋಗವು ಮುನ್ನವೇ ಇಲ್ಲ!!! ಆದುದರಿಂದ ನಿಜಲಯಯೋಗವು ಲಿಂಗಸಮರಸದ ಸಹಜ ಸಮಾಧಿಯಲ್ಲಿ ನಿರಹಂಕಾರವು ಅಳವಟ್ಟಮೇರೆಗೆ ಆತ್ಮಗ್ರಂಥಿಯು ಬಿಚ್ಚುತ್ತ ಅಂಗ ಲಿಂಗವಾಗುವ ಕ್ರಮದಲ್ಲಿಯೇ ಇರುವದಲ್ಲದೆ ಇನ್ನಾವ್ಯವದರಲ್ಲಿಯೂ ಕೇಳಬಾರದು.

ನಿಜಸೂತ್ರಸಂಬಂಧವು, ನಿಜದ ನಿಲುವುಗಂಡು ಆ ನಿಲುವಿನಲ್ಲಿ ನಿಜದ ಪ್ರತ್ಯಕ್ಷವಾದ ಅಭೇದ್ಯಸಂಬಂಧದಿಂದ ವ್ಯವಹರಿಸುವ ಮಂತ್ರಮಯವಾದ ಸಹಜ ಶುದ್ಧಾಂಗಸಿದ್ಧರಾದ ಸದ್ಭಕ್ತರ ಸೇವೆಯ ಉಪಚಾರಗಳಲ್ಲಿ ತ್ರಿಕರ್ಣಪೂರ್ವಕವಾಗಿ ಲಿಂಗಭಕ್ತಿಯನ್ನಾಚರಿಸುವದರಿಂದ ನಿಜೇಷ್ಟದ ಅನುಭವವು ತೋರುವವರೆಗೆ ಪರೋಕ್ಷವಾಗಿಯೂ, ತೋರಿ ಆ ಅನುಭವದಿಂದ ಕರದಿಷ್ಟವಿಡಿದು ಆಚರಿಸುವ ಉಪಚಾರಾದಿಗಳಿಂದ ನಿಜದ ನಿಲವು ನಿಲುಕುವ ವರೆಗೆ ಪ್ರತ್ಯಕ್ಷಪರೋಕ್ಷವಾಗಿಯೂ, ನಿಲುಕಿ ಆಚರಿಸುವಾಗ ಪ್ರತ್ಯಕ್ಷವಾಗಿಯೂ ಇರುವದು. ಈ ರೀತಿ ಸೂತ್ರಸಂಬಂಧಿಗಳಾಗಿ ಪಾಣಿಮಂತ್ರಜಪಾನುಸಂಧಾನದಿಂದ ಪ್ರಕಟವಾದ ಶಿವತತ್ತ್ವದ ಪಂಚಾಚಾರವೆಂಬ ಪವಿತ್ರ ಜಲದಲ್ಲಿ ಆತ್ಮನನ್ನು ಅಖಂಡವಾಗಿ ಇರಿಸುವದೇ ಶಿವಯೋಗವು. ಆದುದರಿಂದ ಶಿವಯೋಗವು ಮಂತ್ರಲಯಹಠರಾಜಯೋಗಗಳನ್ನು ಸಹಜವಾಗಿ ತನ್ನಲ್ಲಿ ಒಳಕೊಂಡು, ಗುರುಲಿಂಗಜಂಗಮದಾಸೋಹದಲ್ಲಿ ಪ್ರತ್ಯಕ್ಷ,ಪರೋಕ್ಷವಾಗಿ ಲಿಂಗಕ್ಕೆ ಸಂಬಂಧಿಸಿ, ಸಹಜ ಅಂಗ ಲಿಂಗವಾಗಿಸುವ ಯೋಗದಲ್ಲಿ ಬೆರೆತು ಹೋಗುವದರಿಂದ, ಒಳಹೊರಗೂ ಗುರುಲಿಂಗಜಂಗಮದಾಸೋಹದ ಸಹಜವಾದ ಲಿಂಗಸಾಮರಸ್ಯಯೋಗವು ಸರ್ವಯೋಗಗಳನ್ನೂ, ಆ ಯೋಗಾಂಗಳನ್ನೂ ತನ್ನಲ್ಲಿ ಒಳಕೊಂಡು ಲೋಕದೊಳಗಿನ ಸರ್ವಧರ್ಮಗಳ ಹಾಗು ಮತಗಳ ಸರ್ವಸಾರಭೂತವಾಗಿರುವ

ದು. ಇದರಲ್ಲಿಯೇ ಆತ್ಮಗ್ರಂಥಿಯು ಒಡೆದು ನಿಜಲಿಂಗದ ನಿಜೈಕ್ಯತೆಯು ಇರುವದರಿಂದ, ಈ ಲಿಂಗಪಾತಿವ್ರತ್ಯದ ನಿಜವಾದ ಸಹಜಧರ್ಮದಲ್ಲಿ ಗುರು-ಲಿಂಗ ಜಂಗಮದ ದಾಸೋಹವನೇ ಮುಂದೆಮಾಡಿ, ಪಂಚಸೂತಕವಿರಹಿತವಾದ ಪಂಚಾಚಾರಾದಿಗಳನ್ನು ಲೋಕೋದ್ಧಾರಕ್ಕಾಗಿ ಬಸವಣ್ಣನೇ ಮುಂದೆಮಾಡಿ ಪ್ರಯೋಗಿಸಿ ಲೋಕದ ಎದುರಿಗಿಟ್ಟು ಆದಿದೇಶಕನಾದನು. ಲಿಂಗಾನುಸಂಧಾನವಿಲ್ಲದ ನಡೆಯಿಂದ, ನರಬಲಿಯಿಂದ ಇಷ್ಟದೇವತೆಯನ್ನು ತೃಪ್ತಿಬಡಿಸಲು ಯತ್ನಿಸುವ ಅನಾರ್ಯನೂ, ಅಷ್ಟಾಂಗಯೋಗದಿಂದ ಸಿದ್ಧನಾದ ಯೋಗಿಯೂ ಸಮಾನರು. ಆದುದರಿಂದ ಇಂತಹ ಆತ್ಮಾನಾತ್ಮವಿವೇಕಶಾಲಿಗಳಾದ ಯೋಗಿಗಳು ಕೂಡ ವಾಗದ್ವೈತರೇ ಹೊರತು, ಶಕ್ತಿವಿಶಿಷ್ಟರಾದ ಕಾಯ.ನ್ಮುಕ್ತರಲ್ಲ. ಈ ರೀತಿ ಪಶುಧರ್ಮನಿರತರಾಗಿ ನುಡಿಯಲ್ಲಿಯೂ ಕೂಡ ಆತ್ಮಾನಾತ್ಮವಿವೇಕವಿರದ ಚಾರ್ವಾಕರು ಪಶುಪತಿಯ ಧರ್ಮಕ್ಕೆ ಯಾವ ಗಿಡದ ತೊಪ್ಪಲು ! ಪಶುಪತಿಯ ಧರ್ಮವನ್ನಾಚರಿಸಿ, ಪಶುತ್ವವನ್ನು ಹಿಂಗಿ, ಲಿಂಗಸಮರಸಯೋಗದಿಂದ ಲಿಂಗದಲ್ಲಿ ಬೆರೆಯುವದಕ್ಕಾಗಿಯೇ ಲೋಕದಲ್ಲಿ ಮಾನವಸೃಷ್ಟಿಯ ನಿರ್ಮಾಣವು.

ಲಿಂಗವು ತನ್ನಲ್ಲಿ ಆತ್ಮಸೃಷ್ಟಿಯು ತೋರಿದಂದಿನಿಂದ ಅವರನ್ನು ಪ್ರತ್ಯಕ್ಷ ತನ್ನ ಸಾನ್ನಿಧ್ಯಯೋಗದ ಮೆಟ್ಟಿಗೆ ತಂದು, ತನ್ನ ಯೋಗದಿಂದ ತನ್ನ ಸಮರಸಗೊಳಿಸಿ ತನ್ನಲ್ಲಿ ಬೆರಿಸಿಕೊಳ್ಳುವದಕ್ಕಾಗಿಯೇ ಆಡುತ್ತಿರುವ ಲಿಂಗಲೀಲೆಯೆಲ್ಲ ಆತ್ಮರ ವಿಲಯಕ್ಕಾಗಿಯೇ ಇದ್ದಾಗ್ಯೂ, ಆ ವಿಲಯಕಾರ್ಯದಲ್ಲಿಯೇ ಸೃಷ್ಟಿಸ್ಥಿತಿಲಯಾದಿಗಳು ನಡೆದಿರುವವು. ಈ ಸೃಷ್ಟಿಸ್ಥಿತಿಲಯಕಾರ್ಯಗಳಿಗೆ ಒಳಪಟ್ಟು ಅನೇಕಯೋನಿಗಳಲ್ಲಿ ತಲೆಯೆತ್ತಿತ್ತಿ, ಕಡೆಗೆ ಜಾಗರಾವಸ್ಥೆಯ ಆರುವಿನ ಮಾನವ ಸೃಷ್ಟಿಯಲ್ಲಿ ಜ್ಞಾನಕಲೆಯನ್ನು ಹೊಂದಿ ಸಕಲಸಾಧನಗಳಿಂದ ವೈದೋರಿದ ಆತ್ಮರು ಆ ಕಲೆಯಿಂದ ಲಿಂಗವ ತಿಳಿದು, ಆ ಸಾಧನಗಳಿಂದ ಲಿಂಗಸೂತ್ರವಿಡಿದು, ಲಿಂಗಸಾನ್ನಿಧ್ಯಯೋಗದಿಂದ ತಮ್ಮನ್ನು ಸಂಪೂರ್ಣವಾಗಿ ವಿಲಯಿಸಿಕೊಳ್ಳುವ ಕಾರ್ಯದಲ್ಲಿಯೇ ಒಳಹೊರಗೂ ಮಗ್ನರಾಗಿ ವ್ಯವಹರಿಸುವದು ಲಿಂಗದ ಸಹಜವಾದ ಇಚ್ಛೆಯೂ ಅನುಗ್ರಾಹಿಕೆಯೂ. ಈ ಸಹಜ ಇಚ್ಛೆಯ ಯೋಗದಲ್ಲಿಯೇ ತಮ್ಮ ಅರುಹು ಎಷ್ಟು ಇಲ್ಲದೆ, ಪರಿಶುದ್ಧವಾದ ಲಿಂಗಚೈತನ್ಯಸ್ವರೂಪದಲ್ಲಿ ಆಚರಿಸುವದೇ ಸಹಜಯೋಗವು. ಇಂತಪ್ಪ ಸಹಜಯೋಗಿಯಲ್ಲಿ ಅಥವಾ ಯೋಗಿಗಳ ತಂಡದಲ್ಲಿ ಏನೊಂದು ಪ್ರಶಾಂತಮಯವಾದ ನಿರ್ವಿಕಾರದ ನಿರಂಜನಸ್ವರೂಪದಲ್ಲಿ ಪರಿಶುದ್ಧವಾದ ನಿಜ ಅರುಹಿನ ಚೈತನ್ಯಮೂರ್ತಿಯು ಪ್ರಕಟವಾಗಿ ತೋರುವದೋ, ಅದೇ ಪ್ರತಿಸೂರ್ಯನು. ಈ ಪ್ರತಿಸೂರ್ಯನ ಉದಯದಿಂದಲೇ ಲೋಕವು ತನಗೆ ತಿಳಿಯಲಿ, ತಿಳಿಯದಿರಲಿ, ನಂಬಲಿ, ನಂಬದಿರಲಿ, ನಿಜಸೂರ್ಯನು ಆದಿಕಾಲದಿಂದ ಲೀಲೆಯ ರೂಪದಿಂದ ನಡಿಸಿದ ದೀಕ್ಷೆಯ ಕಾರ್ಯಗಳೆಲ್ಲ ಭರದಿಂದ ಸಾಗಿ, ಉದಯವಾಗಿ ಒಂದು ಪಟ್ಟದ ಒಳಹೊರಗಾಗಿಯೇ

ದಿಕ್ಷೆಯಕಾರ್ಯಗಳೆಲ್ಲ ಸಾಂಗೋಪಾಂಗವಾಗಿ ಅಂದರೆ ನಿರ್ವಿಕಾರಸಾಮ್ರಾಜ್ಯವು ಉಂಟಾಗಿ, ಆ ನಿರ್ವಿಕಾರಸಾಮ್ರಾಜ್ಯದಲ್ಲಿ ಪ್ರತ್ಯಕ್ಷ ನಿಜಸೂತ್ರಸಂಬಂಧಿಯಾಗಿ, ಸಹಜಯೋಗದ ಗುರುಲಿಂಗಜಂಗಮದಾಸೋಹವೇ ಅಂಗವಾಗಿ ಆಚರಿಸುವದಾಗುವದು.

ಪ್ರತಿಸೂರ್ಯನಿಜಸೂರ್ಯರ ಲೀಲೆಗಳೆಲ್ಲ ಅತ್ಮರ ವಿಲಯಕ್ಕಾಗಿಯೇ! ಆದುದರಿಂದ ಲೋಕದೊಳಗಿನ ಯಾವತ್ತು ಯೋಗಗಳನ್ನು ಒಳಕೊಂಡು ಒಳಹೊರಗೂ ಸಹಜವಾದ ಗುರುಲಿಂಗಜಂಗಮದಾಸೋಹದ ಲಿಂಗಸಾಮರಸ್ಯಯೋಗವೆಲ್ಲ ವಿಲಯಕ್ಕಾಗಿಯೇ ಪರಿಣಮಿಸುತ್ತಿರುವದು. ಎಂದು ಲೋಕದಲ್ಲಿ ದೀಕ್ಷಾಕಾರ್ಯವು ಸಾಂಗೋಪಾಂಗವಾಗಿ ಮುಗಿದು ಲೋಕವು ನಿರ್ವಿಕಾರ ಸಾಮ್ರಾಜ್ಯದಲ್ಲಿ ಅಡಿ ಇಟ್ಟು (ಪತ್ತಿ), ತನ್ನ ಪರಿವೆಯಿಲ್ಲದೆ ನಿಜಲಿಂಗಪರವಶವಾಗಿ (ನಾ ಅಳುಕಿ) ಆಚರಿಸುವದಾಗುವದೋ, ಅಂದೇ ಹದಿನಾಲ್ಕನೆಯ ಮನ್ವಂತರವನ್ನು ಹೊಂದಿದ್ದಾಗಿ, ಆ ಲಿಂಗಸಾನ್ನಿಧ್ಯಯೋಗದಿಂದ ಅತ್ಮರ ನಿಜವಾದ ಪ್ರಳಯಕಾರ್ಯವು ಆರಂಭವಾಗಿ ಕಡೆಗೆ ಲಿಂಗವಾಗಿ ಲಿಂಗದಲ್ಲಿ ಬೆರೆತು ತಾನೇ ತಾನಾಗುವದರಿಂದ ತ್ರಿಕಾಲಜ್ಞರಾದ ಮಹಾನುಭಾವಿಗಳು ಹದಿನಾಲ್ಕನೆಯ ಮನ್ವಂತರದ ಕಡೆಯಲ್ಲಿ ಮಹಾಪ್ರಳಯವೆಂದು ಬರೆದಿಟ್ಟಿರುವರು. ಎಂದು ಪ್ರತಿಸೂರ್ಯನು ಉದಯವಾಗಿ, ತಾನು ಉದಯವಾದುದು ಲೋಕಕ್ಕೆ ಪ್ರತ್ಯಕ್ಷವಾಗಲೆಂದು ಅವರ ಪ್ರದೋಷವನ್ನು ಪರಿಹರಿಸಲು ಕಂಕಣಬದ್ಧನಾಗುವನೋ, ಅಂದೇ ಹದಿನಾಲ್ಕನೆಯ ಮನ್ವಂತರದ ಬೆಳಗಿನ ಜಾವವು. ಪ್ರದೋಷವು ಹರಿದು ಪ್ರತಿಸೂರ್ಯನು ಬೆಳಗಿದ್ದೇ ಉಷಃಕಾಲವು.

ಈಗ ನಡೆದಿರುವದು ವೈವಸ್ವತ ಮನ್ವಂತರವು ಇದು ಏಳನೇದು. ಇದೇ ಮುಗಿಯಲು ಇನ್ನೂ ಎಷ್ಟೋ ಅವಧಿಯು ಬೇಕು. ಹೀಗಿದ್ದು ಮಧ್ಯದಲ್ಲಿಯೇ ಹದಿನಾಲ್ಕನೆಯ ಮನ್ವಂತರದ ಆರಂಭವು ಆದೆಂತು? ಇದು ತೀರ ವಿಪರೀತವಾದದ್ದು; ಎಂಬ ಸಂಶಯವು ಬಂದೇಬರುವದು. ಪ್ರತಿಸೂರ್ಯನ ಅತ್ಯಗಾಧ ಶಕ್ತಿಗೆ ಇದು ಅಸಾಧ್ಯವಾದುದಲ್ಲ. ತೋರುವ ತೋರಿಕೆಯಲ್ಲೆಲ್ಲ ಇದ್ದೂ ಇಲ್ಲದಂತೆ ವ್ಯಾಪಿಸಿಕೊಂಡಿರುವ ಅಗ್ನಿತತ್ತ್ವದಿಂದ ಸೃಷ್ಟಿಯ ಸ್ವಾಭಾವಿಕ ಕ್ರಮದಲ್ಲಿಸ್ವಾಭಾವಿಕವಾಗಿ ಕಾಲಗತಿಯಿಂದಾಗತಕ್ಕ ಕಾರ್ಯವು, ಕಾಷ್ಠದಲ್ಲಿ ಪ್ರಕಟವಾದ ಅಗ್ನಿಯ ಒಂದು ಕಿಡಿಯಿಂದ (ಕಿಚ್ಚಿನಿಂದ ಹಾರಿದ ಒಂದು ಕಿಡಿಯಿಂದ) ಮಾಡಲು ನಿಂತರೆ ತೀರ ಅತ್ಯಲ್ಪ ಅವಧಿಯಲ್ಲಿ ಲೋಕವೆಲ್ಲ ಸುಟ್ಟು ಬೂದಿಯಾಗಬಲ್ಲದು. ಸ್ವಾಭಾವಿಕವಾದ ಅಗ್ನಿತತ್ತ್ವದಿಂದಲೇ ಪ್ರಕಟವಾದ ಬೆಂಕಿಯ ಕಿಡಿಯಲ್ಲಿ ಸುಡುವ ಶಕ್ತಿಯು ಉಂಟಾಗಿದ್ದರೂ, ಕಿಡಿಯಿಂದ ಅತ್ಯಲ್ಪಾವಧಿಯಿಂದ ಆಗುವದನ್ನು ಕಂಡು, ಸ್ವಾಭಾವಿಕವಾದ ಅಗ್ನಿತತ್ತ್ವದಲ್ಲಿ ಪ್ರಕಟವಾದ ಒಂದು ಬೆಂಕಿಯ ಕಿಡಿ

ಯಷ್ಟು ಶಕ್ತಿಯು ಇಲ್ಲೆಂದೂ, ತನ್ನ ಕಾರ್ಯವನ್ನು ಮಾಡಲು ನಿಂತರೆ ಸೃಷ್ಟಿಯ ಸ್ವಾಭಾವಿಕವಾದ ಕಾಲಾವಧಿಯನ್ನುಬದಲುಮಾಡುವದೆಂದೂ ತಾನೇ ವ್ಯಕ್ತವಾಗುವದು. ಇದೇ ಮಾತು ನಿಜಾಗ್ನಿ ತತ್ತ್ವವೆನಿಸುವ ಅನಾದಿಸೂರ್ಯನಿಗೂ, ಪ್ರಕಟವಾದ ನಿಜಾಗ್ನಿ ತತ್ತ್ವವೆನಿಸುವ ಪ್ರತಿಸೂರ್ಯನಿಗೂ ಹತ್ತುವದು. ಈ ಪ್ರಕಟವಾದ ಅಗ್ನಿಕಾಂಶವಾದವರೇ ಹನ್ನೆರಡನೆಯ ಶತಮಾನದಲ್ಲಿ ಅವತರಿಸಿ, ಸರ್ವಾಂಗಸುಂದರವಾದ ಶಿವಧರ್ಮವೆನಿಸುವ ಗುರುಲಿಂಗಜಂಗಮದಾಸೋಹದ ಲಿಂಗಾಂಗಿಧರ್ಮವನ್ನು ನಿಜಾಚರಣೆಯಿಂದ ಆಚರಿಸಿ ತೋರಿಸಿ ಶಿವೈಕ್ಯರಾದ ಸತ್ಯಶರಣರು. ಇವರ ಮಹಿಮೆಯಿಂದಲೇ ಮುಂದಿನ ಏಳು ಮನ್ವಂತರಗಳ ಕೊನೆಗೆ ಸೃಷ್ಟಿಯು ಸ್ವಾಭಾವಿಕಧರ್ಮದಲ್ಲಿ ಉದಯನಾಗುವ ಪ್ರತಿಸೂರ್ಯನು ಏಳು ಶತಮಾನಗಳ ಅವಧಿಯಲ್ಲಿಯೇ (೭೦೦ ವರ್ಷಗಳಲ್ಲಿಯೇ) ಉದಯನಾದುದು ಸೋಜಿಗವಲ್ಲ! ಅತ್ತ ಸತ್ಯಶರಣರು ಶಿವೈಕ್ಯರಾಗಿ ಪ್ರತಿಸೂರ್ಯನನ್ನುದಯಿಸುವಕಾರ್ಯದಲ್ಲಿ ತೊಡಗಿರಲು, ಇತ್ತ ಲೌಕಿಕರ ಗುಣಸ್ವಭಾವಗಳಲ್ಲಿಯೇ ಅವರ ಸಹಜ ಸಿದ್ಧಿಯ ಮಹಿಮೆಯ ಸಹಜ ಪ್ರಭಾವದಿಂದ ಲೌಕಿಕ ಧರ್ಮದ ಕುಲಛಲಾಭಿಮಾನದ ಬಿಜ್ಜಳಸಂತತಿಗೆ ಮುಂದೆ ಏಳು ಮನ್ವಂತರಗಳಲ್ಲಿ ಆಗತಕ್ಕ ಸ್ವಾಭಾವಿಕವಾದ ಲೌಕಿಕಾನುಭವವು ಅಷ್ಟೇ ಅವಧಿಯಲ್ಲಿ ಉಂಟಾಗಿ ಇಷ್ಟು ವಿಕಾರವು ಹೊತ್ತಿದ್ದದ್ದೂ ಸೋಜಿಗವಲ್ಲ! ಪ್ರತಿಸೂರ್ಯನು ಉದಯನಾಗಿ ಒಂದು ಪಟ್ಟದ ಒಳಹೊರಗೇ ಲೋಕದಲ್ಲಿ ಹೊತ್ತಿದ್ದು ಮಲೆತು ನಿಂತ ಪ್ರದೋಷವನ್ನೆಲ್ಲ ಲೋಕದ ವಿಕಾರಕಾರ್ಯದ ಪ್ರಯೋಗದಲ್ಲಿಯೇ ಪರಿಹರಿಸಲು, ತನ್ನ ಉದಯಕಾಲದಿಂದ ಲೋಕದಲ್ಲಿ ಹಿಂದೆ ಎಂದೂ ಇಲ್ಲದ ಉಗ್ರವಾದ ಸೃಷ್ಟಿಯು ಹಾಗು ಲೌಕಿಕ ಕಾರ್ಯಗಳು, ಆ ಪ್ರತಿಸೂರ್ಯನ ಅತ್ಯಗಾಧವಾದ ಶಕ್ತಿಯ ಪ್ರಯೋಗದಿಂದ ಈಗ ಲೋಕದಲ್ಲೆಲ್ಲ ನಡೆವದ್ದೂ ಸೋಜಿಗವಲ್ಲ; ಈ ಸಂಗತಿಯು ಮುಂದಿನಭಾಗದ ವಿವರಣದಿಂದ ತಾನೇಮ ನವರಿಕೆಯಾಗುವದು. ಇರಲಿ ಇದರಿಂದ ಹೊಳೆಯುವದೇನಂದರೆ ಪ್ರತಿಸೂರ್ಯನೇ ಜಗದ್ವ್ಯಾಪಕವಾದ ನಿಜಸೂರ್ಯನ ಕಾರ್ಯವನ್ನು ಇಚ್ಛಾಮಾತ್ರದಿಂದ ಹೆಚ್ಚು ಪುಟಗೊಳಿಸಿ, ಅತ್ಯಂತ ತ್ವರಿತಗತಿಯಿಂದ ಸೃಷ್ಟಿಯ ಸಹಜಧರ್ಮದಲ್ಲಿಯೇ ನಡಿಸಿರುವನು; ಆತ್ಮರ ಚಿತ್ತವೃತ್ತಿಯನ್ನು ತನ್ನ ಕಡಿಗೆ ಸೆಳೆದುಕೊಳ್ಳಲು, ಅವರ ಚಿದ್ಧರ್ಮದಲ್ಲಿಯೇ ತನ್ನ ಶಕ್ತಿಪಾತವನ್ನು ಮಾಡಿ ಹೆಚ್ಚು ಪುಟಗೊಳಿಸಿ ಒಳಹೊರಗೂ ವಿಕಾರನಿರ್ವಿಕಾರದ ಕದನದ ಜ್ವಾಲೆಯನ್ನು ಎಬ್ಬಿಸಿ ಆ ಜ್ವಾಲೆಯ ಅತ್ಯುಗ್ರವಾದ ಕಾರ್ಯದಿಂದ ಲೋಕದ ವಿಕಾರವನ್ನೆಲ್ಲ ಸುಟ್ಟು, ನಿರ್ವಿಕಾರಸಾಮ್ರಾಜ್ಯವನ್ನು ಸೃಷ್ಟಿಯ ಸಹಜಧರ್ಮದಲ್ಲಿಯೇ ಪ್ರಸ್ಥಾಪಿಸುತ್ತಿರುವನು; ಆದುದರಿಂದ ಈತನೇ ಪ್ರತ್ಯಕ್ಷವಾಗಿ ಜಗತ್ಸೂತ್ರಧಾರಿಯಾಗಿರುವನು. ಈ ಪ್ರತಿಸೂರ್ಯನೇ ನಿರ್ವಿಕಾರದ ಸಾಮ್ರಾಜ್ಯದಲ್ಲಿ ಸಕಲಾತ್ಮರ ಅಂತರಾತ್ಮನಾಗಿ ಸಕಲವಿಷಯೋಪಭೋಗಗಳನ್ನೆಲ್ಲ ಲಿಂಗೋಪಭೋಗವನ್ನಾಗಿಸಿ

ನಿಜಸೂರ್ಯನ ಸಾಮರಸ್ಯಯೋಗದಲ್ಲಿ ನಿಲಿಸುವನಾದುದರಿಂದ, ಶ್ರೀಮನ್ನಿರಂಜ ನಜಗದ್ಗುರುವೂ ಆಗಿರುವನು. ಸಕಲ ಸಿದ್ಧರ ಸಿದ್ಧಿಯ ಪ್ರಯೋಗಗಳ ಆಟವು ಏನೊಂದು ನಡೆಯದಂತೆ ಮಾಡಿ, ತನ್ನ ಸಹಜಸ್ಥಿತಿಯಲ್ಲಿ ಅವರನ್ನು ತನ್ನ ಸೂತ್ರಕ್ಕೆ ಒಳಪಡಿಸಿಕೊಂಡು ತಾನೇ ಸಹಜ ಶ್ರೇಷ್ಠತೆಯನ್ನು ಹೊಂದುವನಾದು ದರಿಂದ ಸಿದ್ಧಪ್ರಭುವರನೂ ಆಗಿರುವನು. ಸಕಲಾತ್ಮರ ನಿಜಅರುಹಿನ ಸಹಜ ಸಮಾಧಿಯ ವ್ಯಾಪಾರದಲ್ಲೆಲ್ಲ ತಾನೇ ತನ್ನ ಶಕ್ತಿಪಾತಪ್ರಯೋಗದಿಂದ ಕಾರ್ಯ ಮಾಡುವವನಾದುದರಿಂದ ಪ್ರಾಣಸ್ವರೂಪವಾದ ಚಿನ್ನಲಿಂಗ ಅಥವಾ ಪ್ರಾಣಲಿಂಗ ವಾಗಿರುವನು. ಅಂದರೆ ಜಗತ್ಸೂತ್ರಧಾರಿಯಾದ ಶ್ರೀಮನ್ನಿರಂಜನ ಜಗದ್ಗುರು ಸಿದ್ಧಪ್ರಭುವರನೆಂಬ ಅಸುಲಿಂಗವಾಗಿರುವನು. ಈ ಪ್ರತಿಸೂರ್ಯನು ನಿಜಸೂ ರ್ಯನಿಗೆ ಹೊರತಲ್ಲದಿದ್ದರೂ, ಆತ್ಮರಿಗೂ ನಿಜಸೂರ್ಯನಿಗೂ ಇರುವ ಸಂಬಂಧ ವನ್ನು, ತನ್ನ ಶಕ್ತಿಪಾತಪ್ರಯೋಗದಿಂದ ಅಂತರಂಗದ ವಿಕಾರಗಳನ್ನೆಲ್ಲ ಬೈಲು ಮಾಡಿ, ಲಿಂಗಕ್ಷೇತ್ರದ ಪ್ರತ್ಯಕ್ಷ ಪ್ರಯೋಗದಿಂದ ಮನಗಾಣಿಸಿಕೊಟ್ಟು, ಅವರ ಚಿತ್ತವೃತ್ತಿಯನೆಲ್ಲ ಆ ಲಿಂಗಕ್ಷೇತ್ರದ ನಿಜದ ನಿಲುವಿನಲ್ಲಿ ಬಿಗಿದು, ಲಿಂಗಸಾ ಮರಸ್ಯಯೋಗದಲ್ಲಿಯೇ ಲಿಂಗವನ್ನಾಗಿಸುವ ದಲ್ಲಾಲನಾಗಿರುವದರಿಂದ ಈ ಗು ರುಸಿದ್ಧನೇ ನಿಜವಾದ ಶ್ರೇಷ್ಠಿಯು. ಇವನೇ ಜಗದ್ವಂದ್ಯನೂ, ಜಗತ್ಪೂಜ್ಯನೂ ಜಗತ್ಪಾವಕನೂ, ಜಗದುದ್ಧಾರನೂ ಆದ, ಪ್ರಕಟವಾಗಿ ಕಂಡೂ ಕಾಣದಂತಿರು ವ ಜಗದ್ವ್ಯಾಪಕದೇವನು. ಈ ಬಗ್ಗೆ ಸವಿಸ್ತರ ಮಾಹಿತಿಯನ್ನು "ಶ್ರೀಮನ್ನಿ ರಂಜನ ಜಗದ್ಗುರು ಸಿದ್ಧಪ್ರಭುವರನೆಂಬ ಪ್ರತಿ ಸೂರ್ಯನ ಉದಯವೂ ಲೀಲೆ ಯೂ" ಎಂಬ ಪ್ರಕಟನೆಯಲ್ಲಿ ಕಂಡುಕೊಳ್ಳಬಹುದು.

## ವರ್ಣಾಶ್ರಮನಿರಸನ.

ಲಿಂಗದ ಅರುಹಿನಲ್ಲಿ ಸಂಪೂರ್ಣವಾಗಿ ತನ್ನನ್ನು ಮರೆತು ನಡೆಯುವ ಯೋಗವಿಲ್ಲದೆ, ಲಿಂಗಸೂತ್ರಸಂಬಂಧವಾಗಿ ಆ ನಡೆಯು ಯಾವತ್ತೂ ಯೋಗ ಗಳನ್ನೂ, ಯೋಗಾಂಗಗಳನ್ನೂ, ಸಕಲ ಧರ್ಮಗಳ ಹಾಗು ಮತಗಳ ತತ್ತ್ವ ಸಾರವನ್ನೂ ತನ್ನಲ್ಲಿ ಸಹಜವಾಗಿ ಒಳಕೊಂಡು ಲಿಂಗರಹಸ್ಯಾನುವರ್ತನವಾಗ ಲರಿಯದಷ್ಟೇ! ನಿಜವ ಅರಿತು, ಆ ಅರುವಿನಲ್ಲಿ ತನ್ನನ್ನೂ ಸಹ ಮರೆತು ನಡೆ ಯುವ ಈ ಯೋಗವೇ ಅಸ್ಪೃಷ್ಟವಿಷಯಸ್ನೇಹವಾದ ನಿಜಭಕ್ತಿಯೆನಿಸುವದು. ಲೌಕಿಕವ್ಯವಹಾರದಲ್ಲಿ ತಾಯಿಂದಿರು ಮಕ್ಕಳ ವಿಷಯವಾಗಿಯೂ, ಹೆಂಡರು ಗಂಡರ ವಿಷಯವಾಗಿಯೂ ತಮ್ಮನ್ನು ಮರೆತು ನಡೆಯುವ ಮಾಯಾಮೋಹಾ ದಿಗಳಿರುವದರಿಂದ ಆ ನಡೆಯು ವಿಷಯಸೋಂಕಿನ ಸ್ನೇಹವಾಗಿ ಪ್ರೀತಿಯೆನಿ ಸುವದು. ಪ್ರೀತಿಯಿಂದಲೇ ಸಾಗಿಬಂದಿರುವ ಈ ಸೃಷ್ಟಿಯಲ್ಲಿ ಆಯ್ದು ನೋಡಲು, ಮಾನವನು ತನ್ನ ಯೋಗ್ಯತಾನುಸಾರವಾಗಿ ಒಂಬತ್ತೇ ರತ್ನಗಳನ್ನು ಆರಿಸಿರು ವನು. ಪ್ರೀತಿಯು ಜಡಸಂಗತಿಗಳ ವಿಷಯಗಳಲ್ಲಿಯೇ ಸುತ್ತಿ ಸುಳಿಯುಹಚ್ಚು

ವದರಿಂದ ಆವುಗಳ ಹಂಗು ಹರಿದು ಆಜಡತತ್ತ್ವಗಳನ್ನು ಅಂಟಿ ನಡೆಯುಗೊಡಲಾರದು. ಕಾರಣ ಈ ಪ್ರೀತಿಯೆಂಬ ಬಲೆಯಲ್ಲಿ ಸಿಕ್ಕು, ತಗ್ಗುತ್ತ ಮುಗ್ಗುತ್ತ ನಾನಾರೀತಿಯಿಂದ ತೊಳಲುತ್ತಿರುವ ಆತ್ಮರುಗಳಲ್ಲಿ ತಲೆತಾಗಿ ಹಣ್ಣಾದ ಆತ್ಮರು, ಪಾಶದ ಹೊರಗೆ ಅತರ್ಕ್ಯವಾಗಿ ತೋರುವ ಪರತತ್ತ್ವವನ್ನು ಪಂಜರದೊಳಗಿನ ಗಿಳಿಯು ತನ್ನ ಸ್ವಚ್ಛಂದವೃತ್ತಿಯ ವ್ಯೋಮವಿಹಾರವನ್ನು ನೆನೆನೆನೆದು ಚಡಪಡಿಸುತ್ತಿರುವಂತೆ, ಅಥವಾ ಆನೆಯು ಬಂಧನಕ್ಕೊಳಪಟ್ಟು ಗ್ರಾಮದಲ್ಲಿದ್ದು ತನ್ನ ಪೂರ್ವದ ಅಡವಿಯ ಸಂಚಾರವನ್ನೇ ಚಿಂತಿಸುತ್ತ ಮೇಯುತ್ತಿರುವಂತೆ, ತಮ್ಮ ಯೋಗ್ಯತಾನುಸಾರವಾಗಿ ನಾನಾಪರಿಯ ತರ್ಕವಿತರ್ಕಗಳಲ್ಲಿ ಅಜಡತತ್ತ್ವಗಳನ್ನು ತರ್ಕಿಸಿ, ಲಕ್ಷಿಸುವದಾಗದೆ, ಜಡಸಂಗತಿಗಳ ಯೋಗದಲ್ಲಿ ಭಾವಕ್ಕೆ ನಿಲುಕಿದುದನು ವಿವರಿಸಿ, ಅದೇ ನಿಜವಾದುದೆಂದು ನಂಬಿ, ಅದನ್ನು ಹೊಂದಲು ನಿಜವಾದ ಭಕ್ತಿಯೋಗದಲ್ಲಿರದೆ, ತಮಗೆ ಸರಿಗಂಡ ಮತಮಾರ್ಗಗಳಲ್ಲಿ ವ್ಯವಹರಿಸುತ್ತ ಬಂದಿರುವದೇ ಸಕಲವೇದಾಗಮಶಾಸ್ತ್ರಪುರಾಣೇತಿಹಾಸಾದಿಗಳಿಂದ ವ್ಯಕ್ತವಾಗುತ್ತಿದೆ. ಜಡಸಂಗತಿಗಳು ಐಹಿಕ ಆಮುಷ್ಮಿಕ ಆತ್ಮಿಕ ಸಂಗತಿಗಳನ್ನೆಲ್ಲ ಒಳಕೊಂಡಿರುವವು. ಕಾರಣ ವರ್ಣಕುಲಗೋತ್ರಾದಿಗಳೆಲ್ಲ ಭಾವಕ್ಕೆ ನಿಲುಕಿ, ಕಲ್ಪಿಸಿ ವ್ಯವಹಾರದಲ್ಲಿ ತಂದ ಸಂಗತಿಗಳಾಗಿರುವವೇ ಹೊರತು, ಅತರ್ಕ್ಯವಾದ ತತ್ತ್ವದೊಳಗಿನವಲ್ಲ! ಅತರ್ಕ್ಯವಾದ ಲಿಂಗದ ನೆಲೆಯಲ್ಲಿ ಕೇವಲ ಚೈತನ್ಯಸ್ವರೂಪದಲ್ಲಿ ಅಭೇದ್ಯರಾಗಿ ಸುಟ್ಟಧಾರದಂತೆ ಸ್ಥೂಲಕಾಯವಿಡಿದಾಚರಿಸುವ ಅನುಪಮಾಂಗರೇ ನಿಜಸೂತ್ರಯೋಜಕರೂ, ತರ್ಕ್ಯರೂ ಆಗಿ ನಿಜಲಿಂಗವನ್ನು ವ್ಯಕ್ತಪಡಿಸುವವರು ಅಂದರೆ ಅತರ್ಕ್ಯವಾದ ಲಿಂಗವನು (ಬ್ರಹ್ಮವನ್ನು) ತರ್ಕಿಸಲು ಬ್ರಾಹ್ಮಣಸ್ವರೂಪರಾದವರು. ಈ ಬಗ್ಗೆ (ಈಶಾದ್ಯಷ್ಟೋತ್ತರಶತೋಪನಿಷದ್ಗ್ರಂಥದ ಪುಟ ೨೨೨—೨೨೩ ನೋಡಿಕೊಳ್ಳಬಹುದು.

वज्रसूचीं प्रवक्ष्यामि शास्त्रमज्ञानभेदनम् । दूषणं ज्ञानहीनानां भूषणं ज्ञानचक्षुषाम् ॥

..................................................................................................

.................... अन्यथा हि ब्राम्हणत्वसिद्धिर्नास्त्येव । सच्चिदानन्दमात्मानमद्वितीयं ब्रह्म भावयेदात्मानं सच्चिदानन्दं ब्रह्म भावयेदित्युपनिषत् ॥ ओं आप्यायन्त्विति शान्तिः ॥

ಅಜ್ಞಾನವನ್ನು ಭೇದಿಸುವಂಥ ಜ್ಞಾನಹೀನರನ್ನು ದೂಷಿಸುವಂಥ, ಜ್ಞಾನಚಕ್ಷುಗಳಿಗೆ ಭೂಷಣವಾದಂಥ ವಜ್ರಸೂಚಿಯೆಂಬ ಶಾಸ್ತ್ರವನ್ನು ವಿವರಿಸುವೆನು. ಬ್ರಾಹ್ಮಣ ಕ್ಷತ್ರಿಯ ವೈಶ್ಯ ಶೂದ್ರ ಎಂಬ ನಾಲ್ಕು ವರ್ಣಗಳು ಇರುತ್ತವೆಂದೂ, ಅವುಗಳಲ್ಲಿ ಬ್ರಾಹ್ಮಣನೇ ಪ್ರಧಾನ (ಶ್ರೇಷ್ಠ) ನೆಂದೂ, ಹೇಳುವ ವೇದವಚನಕ್ಕನುಸಾರವಾಗಿ ಸ್ಮೃತಿಗಳಿಂದಲೂ ಉದಾಹರಿಸಲ್ಪಟ್ಟಿದೆ. ಬ್ರಾಹ್ಮಣನೆಂದರೆ ಏನು ಜೀವವೋ, ಏನು ದೇಹವೋ, ಏನು ಜಾತಿಯೋ, ಏನು ಜ್ಞಾನವೋ, ಏನು ಕರ್ಮವೋ, ಏನು ಧಾರ್ಮಿಕನೋ? ಪ್ರಥಮದಲ್ಲಿ ಜೀವವು ಬ್ರಾ

ಹ್ಮಣವೆಂದರೆ ಅದು ನಿಜವಲ್ಲ; ಏಕೆಂದರೆ ಬಿದ್ದುಹೋದ ಹಾಗು ಹೋಗದೆ ಇದ್ದ ಅನೇಕ ದೇಹಗಳೊಳಗಿನ ಜೀವಗಳು ಒಂದೇ ರೂಪವುಳ್ಳವುಗಳಾಗಿರುವವು; ಕರ್ಮವಶದಿಂದ ಒಂದೇ ಜೀವಕ್ಕೆ ಅನೇಕ ದೇಹಗಳು ಸಂಭವಿಸುವವು; ಮತ್ತು ಆ ಎಲ್ಲ ಶರೀರಗಳಲ್ಲಿ ಜೀವವು ಒಂದೇ ವಿಧವಾಗಿರುವವು. ಹಾಗಾದರೆ ದೇಹವು ಬ್ರಾಹ್ಮಣನೋ? ಅದೂ ಅಲ್ಲ; ಏಕೆಂದರೆ ಚಾಂಡಾಲರ ಮೊದಲುಮಾಡಿಕೊಂಡು ಕಡೆಯುಪರಿಯುಂತರದಲ್ಲಿರುವ ಮನುಷ್ಯರ ಪಂಚಭೂತಾತ್ಮಕ ದೇಹವು ಒಂದೇ ರೂಪವಾಗಿರುವದು; ಹಾಗು ಜರಾ, ಮರಣ, ಧರ್ಮ, ಅಧರ್ಮ ಮೊದಲಾದವು ಸಮವಾಗಿರುವದು ಕಂಡು ಬರುತ್ತದೆ; ಬ್ರಾಹ್ಮಣನು ಬಿಳಿಯ ಬಣ್ಣದವನು, ಕ್ಷತ್ರಿಯನು ಕೆಂಪುಬಣ್ಣದವನು, ವೈಶ್ಯನು ಹಳದೀಬಣ್ಣದವನು; ಶೂದ್ರನು ಕಪ್ಪು ಬಣ್ಣದವನು ಎಂಬ ನಿಯಮವಿಲ್ಲ; ಮತ್ತು ಪಿತೃಗಳ (ಮೃತರಾದ ಹಿರಿಯರ) ಶರೀರಗಳನ್ನು ದಹನಮಾಡುವದರಿಂದ ಅವರ ಮಕ್ಕಳು ಮೊದಲಾದವರಿಗೆ ಬ್ರಹ್ಮಹತ್ಯಾ ಮೊದಲಾದ ದೋಷಗಳು ತಟ್ಟುವವು. ಹಾಗಾದರೆ ಜಾತಿ ಬ್ರಾಹ್ಮಣನೋ? ಅದೂ ಅಲ್ಲ! ಏಕೆಂದರೆ ಬೇರೆ ಜಾತಿಯ ಜಂತುಗಳ ಅನೇಕ ಪ್ರಕಾರಗಳಲ್ಲಿ ಬಹಳ ಮಂದಿ ಮಹರ್ಷಿಗಳು ಹುಟ್ಟಿರುವರು:- ಋಷ್ಯಶೃಂಗನು ಮೃಗದಿಂದ, ಕೌಶಿಕನು ಕುಶದಿಂದ, ಜಾಂಬೂಕನು ಜಂಬೂಕದಿಂದ, ವಾಲ್ಮೀಕಿಯು ವಲ್ಮೀಕದಿಂದ, ವ್ಯಾಸನು ಕೈವರ್ತಕಕನ್ನಿಕೆಯಿಂದ, ಗೌತಮನು ಶಶದ ಬೆನ್ನಿನಿಂದ, ವಶಿಷ್ಠನು ಊರ್ವಶಿಯಿಂದ, ಅಗಸ್ತ್ಯನು ಕಲಶದಿಂದ, ಹುಟ್ಟಿದರೆಂದು ಶ್ರುತಿಯಿರುವದು ಈ ಋಷಿಗಳ ಜಾತಿಯ ಹೊರತು, ಮೊದಲು ಜ್ಞಾನಮೂಲಕ ಬ್ರಾಹ್ಮಣರೆಂದು ಪ್ರತಿಪಾದಿಸಲ್ಪಟ್ಟ (ಕರಿಸಿಕೊಂಡ) ಋಷಿಗಳು ಬಹಳ ಮಂದಿ ಇರುವರು. ಹಾಗಾದರೆ ಜ್ಞಾನ ಬ್ರಾಹ್ಮಣನೋ? ಅದೂ ಅಲ್ಲ; ಏಕೆಂದರೆ ಕ್ಷತ್ರಿಯ ಮೊದಲಾದವರು ಪರಮಾರ್ಥಕೋಡವರೂ, ಅಭಿಜ್ಞರಾದವರೂ, (ಜ್ಞಾನಿಗಳಾದವರೂ) ಬಹಳಮಂದಿ ಇರುತ್ತಾರೆ. ಹಾಗಾದರೆ ಕರ್ಮ ಬ್ರಾಹ್ಮಣನೋ? ಅದೂ ಅಲ್ಲ. ಎಲ್ಲ ಪ್ರಾಣಿಗಳಿಗೆ ಪ್ರಾರಬ್ಧ ಸಂಚಿತ ಹಾಗು ಆಗಾಮಿ ಕರ್ಮವು ಸಮವಾಗಿರುವದೆಂದು ಕಂಡುಬರುವದು; ಕರ್ಮವಶರಾಗಿ ಕ್ರಿಯೆಗಳನ್ನು ಮಾಡುವರು. ಹಾಗಾದರೆ ಧಾರ್ಮಿಕ ಬ್ರಾಹ್ಮಣನೋ? ಅದೂ ಅಲ್ಲ. ಏಕಂದರೆ ಕ್ಷತ್ರಿಯ ಮೊದಲಾದವರು ಬಂಗಾರ ಕೊಟ್ಟವರು ಬಹಳಮಂದಿ ಇರುತ್ತಾರೆ ಹಾಗಾದರೆ ಬ್ರಾಹ್ಮಣನ್ಯಾರು? ಯಾವನೊಬ್ಬನು ಅದ್ವಿತೀಯವಾದಂಥ, ಜಾತಿ ಗುಣಕ್ರಿಯೆಗಳಿಲ್ಲದಂಥ, ಷಡೂರ್ಮಿ, ಷಡ್ಭಾವ ಮೊದಲಾದ ದೋಷಗಳಿಲ್ಲದಂಥ, ಸತ್ಯಜ್ಞಾನಾನಂದಗಳಿಗೆ ಕಡೆಯಿಲ್ಲದ ಸ್ವರೂಪವುಳ್ಳಂಥ, ಸ್ವತಃ ವಿಕಲ್ಪಗಳಿಗೆ ಸಿಲುಕದಿದ್ದು ಎಲ್ಲ ಕಲ್ಪಗಳಿಗೆ ಆಧಾರವಾದಂಥ, ಎಲ್ಲ ಭೂತಗಳಲ್ಲಿ ಅಂತರ್ಯಾಮಿಯಾಗಿರುವಂಥ, ಒಳಹೊರಗೂ ಆಕಾಶದಂತೆ ತುಂಬಿಕೊಂಡಿರುವಂಥ, ಸ್ವಭಾವತಃ ಅಖಂಡಾನಂದವುಳ್ಳಂಥ, ಉಪಮಿಸಬಾರದಂಥ, ಅನುಭವದಿಂದೊಂದರಿಂ

ದಲೇ ತಿಳಿಯಬಹುದಾದಂಥ ಪ್ರತ್ಯಕ್ಷ ಭಾಸವಾಗುವಂಥ, ಆತ್ಮವನ್ನು ಅಂಗೈಯೊಳಗಿನ ಸಂಗತಿಯಂತೆ ಸಾಕ್ಷಾತ್ ಪ್ರತ್ಯಕ್ಷಮಾಡಿಕೊಂಡು ಕೃತಾರ್ಥನಾದೆನೆಂದು ಕಾಮರಾಗ ಮೊದಲಾದ ದೋಷಗಳಿಂದ ಬಿಡಲ್ಪಟ್ಟವನಾಗಿ, ಶಮದಮಾದಿ ಸಂಪನ್ನನಾಗಿ, ಭಾವ, ಮಾತ್ಸರ್ಯ, ತೃಷ್ಣೆ, ಆಶೆ, ಮೋಹ ಮೊದಲಾದವುಗಳಿಂದ ದೂರನಾಗಿ, ಚಿತ್ತದಲ್ಲಿ ಡಂಭ, ಅಹಂಕಾರ, ಮೊದಲಾದವುಗಳೇನೂ ಇಲ್ಲದೆ, ಮೇಲೆ ಹೇಳಿದ ಈ ಲಕ್ಷಣಗಳುಳ್ಳವನಾಗಿ, ಆಚರಿಸುತ್ತಾನೋ, ಅವನೇ ಬ್ರಾಹ್ಮಣನು. ಹೀಗೆಂದು ಶ್ರುತಿಗಳು ಸ್ಮೃತಿಗಳು ಪುರಾಣಗಳು ಇತಿಹಾಸಗಳು ಸಾರುತ್ತವೆ. ಬೇರೆ ಯಾವ ರೀತಿಯಿಂದಲೂ ಬ್ರಾಹ್ಮಣತ್ವವು ಸಿದ್ಧಿಸುವದಿಲ್ಲ. ಸಚ್ಚಿದಾನಂದವಾದ ಆತ್ಮನನ್ನು ಅದ್ವಿತೀಯ ಬ್ರಹ್ಮನೆಂದು ಭಾವಿಸಬೇಕು. ಆತ್ಮನನ್ನು ಸಚ್ಚಿದಾನಂದ ಬ್ರಹ್ಮನೆಂದು ಭಾವಿಸಬೇಕು. ಇತಿ ಶಾಂತಿಃ

ಈ ಬಗ್ಗೆ ಬಸವಣ್ಣನು ಹಾಡಿದ ಒಂದೆರಡು ವಚನಗಳನ್ನು
ಕೆಳಗೆ ಕೊಟ್ಟಿರುವದು ನೋಡಿರಿ.

ಎನಿಸು ಓದಿದಡೇನು, ಎನಿಸು ಕೇಳಿದಡೇನು, ಚತುರ್ವೇದಪಾಠ ತೀವ್ರವಾದಡೇನು, ಲಿಂಗಾರ್ಚನೆ ಹೀನವಾದಡೆ ಶಿವಶಿವಾ ಬ್ರಾಹ್ಮಣನೆಂಬೆನೆ! ಎನಲಾಗದು. "ಜನ್ಮನಾ ಜಾಯತೆ ಶೂದ್ರಃ ಸಂಸ್ಕಾರೈರ್ದ್ವಿಜ ಉಚ್ಯತೆ। ಶ್ರುತೇನ ಶ್ರೋತ್ರಿಯಶ್ಚೈವ ಬ್ರಹ್ಮಾಚರತಿ ಬ್ರಾಹ್ಮಣಃ' "ಬ್ರಹ್ಮನಾಸ್ತಿ ಶ್ವಪಚರಮನೆ" ಎಂದುದಾಗಿ ಕೂಡಲಸಂಗಮದೇವ ವೇದಭಾರಭರಾಕ್ರಾಂತೋ ಬ್ರಾಹ್ಮಣೋ ಗರ್ದಭೋ ಧ್ರುವಂ"

ವ್ಯಾಸ ಬೋಯಿತಿಯ ಮಗ, ಮಾರ್ಕಂಡೇಯ ಮಾತಂಗಿಯ ಮಗ, ಮಂಡೋದರಿ ಕಪ್ಪೆಯ ಮಗಳು ಕುಲವನರಸದಿರಿ ಭೋ. ಕುಲದಿಂದ ಮುನ್ನೇನಾದಿರಿ ಭೋ. ಸಾಕ್ಷಾತ್ ಅಗಸ್ತ್ಯ ಕಬ್ಬಲಿಗ, ದುರ್ವಾಸ ಮಚ್ಚಿಗ, ಕಶ್ಯಪ ಕಮ್ಮಾರ, ಕೌಂಡಿಲ್ಯನೆಂಬ ಋಷಿ ಮೂರು ಲೋಕವರಿಯಲು ನಾಯಿದ ಕಾಣಿರೋ ಕೂಡಲಸಂಗನ ವಚನವಿಂತೆಂದುದು. "ಶ್ವಪಚೋಪಿ ಮುನಿಶ್ರೇಷ್ಠೋಯಸ್ತು ಲಿಂಗಾರ್ಚನೇ ರತಃ। ಲಿಂಗಾರ್ಚನವಿಹೀನಸ್ತು ದ್ವಿಜಾನಾಂ ಶ್ವಪಚಾಧಮಃ" ಅದುಕಾರಣ ಶ್ವಪಚನಾದರೇನು ಶಿವಭಕ್ತನೇ ಕುಲಜ ಭೋ.

ಹೊಲೆಗಂಡಲ್ಲದೆ ಪಿಂಡದ ನೆಲೆಗೆ ಆಶ್ರಯವಿಲ್ಲ. ಜಲಬಿಂದುವಿನ ವ್ಯವಹಾರ ಒಂದೇ. ಆಶೆಯಾಮಿಷ ಹರುಷ ವಿಷಯಾದಿಗಳೆಲ್ಲ ಒಂದೇ. ಏನನೋದಿ ಏನಕೇಳಿ ಏನು ಫಲ? ಕುಲಜನೆಂಬುದಕ್ಕೆ ಆವುದು ದೃಷ್ಟಾಂತ! "ಸಪ್ತಧಾತು ಸಮಂ ಪಿಂಡಂ ಸಮಯೋನಿ ಸಮುದ್ಭವಂ। ಆತ್ಮಾ ಜೀವಸಮಾಯುಕ್ತೋ ವರ್ಣನಾಂ ಕಿಂ ಪ್ರಯೋಜನಂ॥" ಎಂದುದಾಗಿ ಕಾಸಿ ಕಮ್ಮಾರನಾದ ಬೀಸಿ ಮಡಿವಾಳನಾದ, ಹಾಸನಿಕ್ಕಿ ಸಾಲಿಗನಾದ. ವೇದವನೋದಿ ಹಾರುವ

ಳನ್ನು ಮಾಡಿ ವ್ಯವಹರಿಸುತ್ತ ಬಂದದ್ದರಿಂದ, ಧರ್ಮಾನುವರ್ತನವು ಅಸ್ಪೃಶ್ಯತೆಗೆ ಕಾರಣವಾಗಿ ಲೋಕವು ಇಷ್ಟೊಂದು ವಿಕಾರಕ್ಕೆ ಗುರಿಯಾಗಿರುವದು. ಆತ್ಮರ ಪರಸ್ಪರ ಕಾರ್ಯಗಳ ಯೋಗದಿಂದ ಕೂಡಿಕೊಂಡು ಸೃಷ್ಟಿಯ ಕಾರ್ಯವು ಸಹಜ ತನ್ನಿಚ್ಛೆಯಲ್ಲಿ ಜರಗಲೆಂದು ಲಿಂಗವು ಪ್ರಾಣಿಗಳ ಆಟಮೆಟಿಕ್ ಧರ್ಮದಲ್ಲಿ (ಚಿದ್ಧರ್ಮದಲ್ಲಿ) ದೇಶಕಾಲಪರಿಸ್ಥಿತಿಗನುಸರಿಸಿ ನಾನಾಪರಿಯಿಂದ ಚಿತ್ರವಿಚಿತ್ರವಾಗಿ ಬೆಳೆಯುತ್ತಿರುವ ಕಲೆಗಳನ್ನು ದಯಪಾಲಿಸಿದ ಮಾತ್ರದಿಂದ, ಆ ಕಲೆಗಳ ವೈಚಿತ್ರ್ಯದಲ್ಲಿ ಕಾಯಕಷ್ಟದಿಂದ ಶರೀರಗಳನ್ನು ಕಾಯ್ದುಕೊಂಡು ಸಾಗಿರುವ ಆತ್ಮರುಗಳನ್ನು ಕಾರ್ಯತಾರತಮ್ಯಗಳಲ್ಲಿ ವಿಭೇದಿಸಿ, ಅವರಲ್ಲಿ ರಕ್ತರೇತಸ್ಸುಗಳ ಅಭಿಮಾನದಿಂದ ವರ್ಣಕುಲಜಾತಿಗಳ ಭೇದವ ಮಾಡಿ, ಆಮೇರೆಗೆ ಅವರನ್ನು ತಮ್ಮ ಶಕ್ತಿಯ ಆಧಿಕ್ಯದಿಂದ ನಡಿಸಿಕೊಂಬುವದು ನಿಜದೃಷ್ಟಿಯಿಂದ ತೀರ ಹೊಲ್ಲದ್ದೂ, ಅಸ್ವಾಭಾವಿಕವಾದದ್ದೂ, ಲಿಂಗಸೃಷ್ಟಿಗೆ ಬಾಹ್ಯವಾದದ್ದೂ ಆಗಿರುವದು. ನಿಜದದೃಷ್ಟಿಯಿಂದ ನಿಜಸೂತ್ರಕ್ಕೊಳಪಟ್ಟ ನಿಜದ ನಿಲವಿನಲ್ಲಿ ಪ್ರತ್ಯಕ್ಷಪರೋಕ್ಷವಾಗಿ ವ್ಯವಹರಿಸುವವರೆಲ್ಲರೂ ಭಕ್ತರೆಂದೂ ನಿಜಸೂತ್ರಕ್ಕೆ ಹೊರತಾಗಿ ಭವಚಕ್ರದಲ್ಲಿ ಸಿಲುಕಿ ತೊಳಲುತ್ತಿರುವವರೆಲ್ಲರೂ ಭವಿಗಳೆಂದೂ ಎರಡೇ ಭೇದಗಳು ತೋರುವವು. ಇದನ್ನೇ ಬಸವಣ್ಣನುನು "ವಿಪ್ರಮೊದಲು ಅಂತ್ಯಜ ಕಡೆಯಾಗಿ ಶಿವಭಕ್ತರಾದವರನೆಲ್ಲನೊಂದೇ ಎಂಬೆ; ಹಾರುವಮೊದಲು ಶ್ವಪಚ ಕಡೆಯಾಗಿ ಭವಿಯಾದವರನೆಲ್ಲನೊಂದೆ ಎಂಬೆ" ಎಂದು ಹಾಡಿ ವ್ಯಕ್ತಪಡಿಸಿರುವನು. ನಿಜಧರ್ಮಮೂರ್ತಿಯಿಂದ ಪ್ರೇರಿಸಲ್ಪಟ್ಟ ಚೇತರಗೊಂಡ ಲೋಕವು ಲಿಂಗದ ಅನುಗ್ರಾಹಿಕೆಯ ಅರುಹಿನ ಸೃಷ್ಟಿಯಲ್ಲಿ ವಿಕಸಿತವಾದ ಜ್ಞಾನಕಲೆಯನ್ನು ಆತ್ಮದೋಷದಿಂದ ದುರುಪಯೋಗಿಸಿ ತಪ್ಪುತಿಳುವಳಿಕೆಯಿಂದ ಧರ್ಮಾಧರ್ಮವೆಂದು ಆಚರಿಸುತ್ತ ಬಂದುದೆಲ್ಲ ಆತ್ಮರ ಜಡತ್ವಕ್ಕೂ ವಿಕಾರವರ್ಧನಕ್ಕೂ ಕಾರಣವಾಗಿ ಈ ಮೆಟ್ಟಿಗೆ ಇಳಿದಿರುವದು.

ನಿಜವಾದ ಯಜ್ಞಪುರುಷನು ಲಿಂಗವು. ಲಿಂಗರಹಸ್ಯಾನುವರ್ತನದಲ್ಲಿ ಯಜ್ಞದ ವಿಧಿವಿಧಾನೋಪಕರಣಗಳೆಲ್ಲ ತಮ್ಮ ಮೂಲಸ್ವರೂಪದಿಂದ ಒಳಕೊಂಡಿರುವವು. ಮೇಲಿನ ಸೂಕ್ತವು ನಾದಬಿಂದುಕಲಾತೀತವೂ ವಾಙ್ಮನೋಗೋಚರವೂ ಅತರ್ಕ್ಯವೂ ಆದ ಲಿಂಗವನ್ನು ಅಂತಃಕರಣಗಳು ಹಿಡಿದು ಆಚರಿಸಲು ಅನುಕೂಲವಾಗುವ ಹಾಗೆ, ಲಿಂಗಚೈತನ್ಯದ ಪಂಚಕೃತಿಗಳಿಂದ ಲಕ್ಷಿಸಲಾಗುವ ಶಿವತತ್ತ್ವವನ್ನು ರೂಪಿಸಿ ವಿವರಿಸಿದ್ದಾಗಿರುವದು ಆದುದರಿಂದ ಸೂಕ್ತದಲ್ಲಿ ಅಲ್ಲಲ್ಲಿ ಬಂದ ಆಜಾಯತ ಪದದ ಅರ್ಥವನ್ನು ಆಸೀತ, ಸೃತಃ, ಸಮವರ್ತತ, ವ್ಯಕಲ್ಪಯನ್ ಈ ಪದಗಳ ಅರ್ಥದಲ್ಲಿ ತಿಳಿಯುವದೇ ಯಥಾರ್ಥವಾಗಿ ಆಕಲ್ಪವಾದುದಲ್ಲದೆ ಯೋನಿಮುಖದಿಂದ ಹುಟ್ಟಿತು. ಹುಟ್ಟಿದನು,ಎಂಬ ಮಾಡುವದು, ಅನ್ಯತ್ರವಾಗಿ ವಿಕಲ್ಪಕ್ಕೆ ಎಳಿಸಿ, ಎಲ್ಲ ಪದಗಳ ಅರ್ಥವನ್ನು ವ್ಯತ್ಯಾಸಮಾಡಿದಂ

ತಾಗುವದು. ಹೀಗ ಒಂದಕ್ಕಾಗಿ ನಾಲ್ಕು ಪದಗಳ ಅರ್ಥವನ್ನು ಕೆಡಿಸುವದು ಯುಕ್ತವಾದುದಲ್ಲ. ಮತ್ತು ಈ ಸೂಕ್ತವು ಯಜ್ಞಪುರುಷನ ಸ್ವರೂಪವನ್ನು ಕೇಳಿದ್ದಕ್ಕೆ ಉತ್ತರರೂಪವಾಗಿ ವಿವರಿಸಿ ಹಾಡಿದ್ದಾಗಿರುವದು. ಯಜ್ಞಪುರುಷನ ಸ್ವರೂಪವನ್ನು ಹೇಳುವ ಬದಲು, ಯಜ್ಞಪುರುಷನಿಂದ ನಾಲ್ಕುವರ್ಣದವರು ಹುಟ್ಟಿದರೆಂದು ಹೇಳುವದು, ರಕ್ತರೇತಸ್ಸಿನ ಅಭಿಮಾನಕ್ಕೆ ಬಿದ್ದು, ಒಣಗೌರವಕ್ಕಾಗಿ ಬಡಿದಾಡುತ್ತ ಬಂದಿರುವದಾಗಿರುವದು. ಈ ವಿಪರೀತ ಭಾವನೆಯು ವ್ಯವಹಾರದಲ್ಲಿ ನಿಜವಾದ ಯಜ್ಞಪುರುಷನು ( ಲಿಂಗವು ) ಒತ್ತಟ್ಟಿಗುಳಿದು, ಅಭಿಮಾನಪುರುಷನನ್ನು ಆರಾಧಿಸುತ್ತ ವಿಪರೀತ ನಡೆಯಲ್ಲಿ ಉಳಿದುಕೊಂಡಾಗಿರುವದು.

ನಿಜಸೂತ್ರಸಂಬಂಧವು ಕರಳಸಂಬಂಧವಾದುದಲ್ಲ; ಕೇವಲ ಕರಣಸಂಬಂಧವಾದುದು. ಆತ್ಮರ ಕರಣಗಳು ಕರಳಸಂಬಂಧವಿದ್ದಲ್ಲಿ ಸಹಜವಾಗಿ ಹರಿಯುವವಲ್ಲದೆ, ಕರಳಸಂಬಂಧವಿಲ್ಲದಲ್ಲಿ ಅಧ್ಯಯನವಿಲ್ಲದೆ ಎಷ್ಟೂ ಹರಿಯುವದಿಲ್ಲ. ಆತ್ಮಾನಾತ್ಮವಿವೇಕದಿಂದ ಶಿವಜೀವರ ಸಂಬಂಧವನ್ನು ಅರಿದು, ಕರಳಸಂಬಂಧದ ಕೆಲವೊಂದು ಮರ್ಯಾದೆಯಲ್ಲಿ ಹರಿಯುತ್ತಿರುವ ಕರಣಗಳನ್ನು, ಕರಳಸಂಬಂಧದಲ್ಲಿ ಹರಿಯುತ್ತಿರುವಂತೆ ಇನ್ನುಳಿದ ಆತ್ಮರಲ್ಲಿ ಹರಿಯುವಂತೆ ಕ್ರಮದಿಂದ ಸಾಧಿಸುವದೇ ಅಧ್ಯಯನವಾಗಿರುವದು. ಹಾಗಲ್ಲದೆ ಬರೀ ಪುಸ್ತಕಗಳನ್ನು ಓದಿ, ಬರೀ ಮೂಗು ಹಿಡಿದುಕೊಂಡು ಕುಳಿತು, ಇನ್ನುಳಿದ ಆತ್ಮರ ಕೂಡ ಮೋರೆಗೆ ಕಾಗೀ ಕಟ್ಟಿಕೊಂಡವರಂತೆ ನಡೆಯುವದು ಅಧ್ಯಯನವಲ್ಲ. ವಿಶ್ವರೂಪ ಬ್ರಹ್ಮನನ್ನು ಪ್ರೀತಿಸಲು ಬಾರದ ಕರಣಗಳು ಬೆಕ್ಕುನರಿನಾಯಿಕಾಗೆಗಳ ಕರಣಗಳಿಂದ ತತ್ತ ಏನನೋದಿ ಏನು ತಿಳಿದರೇನು ಫಲ; ತಿಳಿದಂತೆ ನಡೆಯಲಿಕ್ಕೆ ಬಾರದ ಆತ್ಮರು ಭಾರಹೊರುವ ಕತ್ತೆಗೂ ಕಡೆಯಾದವರು. ಸ್ವಾಭಾವಿಕವಾಗಿದ್ದ ಕರಣಗಳ ವ್ಯಾಪಾರತ್ವವು ಕರಳಸಂಬಂಧದಿಂದ ಆಕುಂಚನವಾಗಿ ರಾಗತತ್ತ್ವವು ಆಗಿರುವದು. ಕರಣಗಳ ಆಕುಂಚನವೃತ್ತಿಯನ್ನು ಕೆಡಿಸಿ, ವಿಸ್ತೃತವಾಗುವ ಹಾಗೆ ಸಾಧಿಸುವದರಲ್ಲಿ ರಾಗತತ್ತ್ವವು ಕೆಡುತ್ತ ಹೋಗುವದಲ್ಲದೆ, ಕರಳಸಂಬಂಧದಲ್ಲಿಯೇ ಬಳಸುತ್ತ ಹೋದರೆ ಅವು ಹೆಚ್ಚೆಚ್ಚು ಆಕುಂಚನವಾಗುತ್ತ ಹೋಗಿ, ಕಡೆಗೆ ತನ್ನ ವಿಷಯದಲ್ಲಿಯಷ್ಟೇ ಹರಿಯುವ ಹಾಗೆ ಆಗುವವು. ಇದೇ ಸ್ವಾರ್ಥದ ಕಡೇ ಮೆಟ್ಟು. ಕರಣಗಳ ವ್ಯಾಪಕತ್ವದಿಂದಲೆ ಪರಿಪೂರ್ಣತ್ವವೂ ವಿಶ್ವಕುಟುಂಬಿಯಾಗೋಣವೂ. ವಿಶ್ವಕುಟುಂಬಿಯಲ್ಲದವರು ಬ್ರಹ್ಮಸೂತ್ರಸಂಬಂಧಿಕರೆಂದು ಹೇಳುವದೂ, ಹುಲಿಯು ಆಕಳನೋರೆಯನ್ನು ಕಟ್ಟಿಕೊಂಡು ವ್ಯವಹರಿಸುವದೂ ಒಂದೇ. ರಾಗವು ಕೆಟ್ಟಹೊರತು ರಕ್ತರೇತಸ್ಸುಗಳ ಅಭಿಮಾನವು ಕೆಡದು. ಈ ಅಭಿಮಾನವು ಕೆಟ್ಟಹೊರತು, ಕರಳಸಂಬಂಧವು ಹರಿದು ವರ್ಣಗೋತ್ರಕುಲಜಾತ್ಯಾದಿಗಳ ಭ್ರಮೆಯು ಬಿಡದು. ಇಂತಪ್ಪ ಭ್ರಾಂತ ಸ್ಥಿತಿಯಲ್ಲಿ ನಿಜಲಿಂಗಸೂತ್ರವೆತ್ತ? ಇವರ ಕರಣವೃತ್ತಿಯು ಎತ್ತ? ಮೊದಲು ನಿಜಲಿಂಗಸೂತ್ರಸಂಬಂಧಿಗಳಾ

ವರಲ್ಲಿ ಕರಣವೃತ್ತಿಯು ಹರಿಯುವ ಹಾಗೆ ಸಾಧಿಸಿಕೊಳ್ಳುವದೇ ಲಿಂಗಾಧ್ಯಯನ್ನ ದ ಮೊದಲನೆಯ ಮೆಟ್ಟಾಗಿರುವದು. ಅಧ್ಯಯನವು ಆಳವಡುತ್ತ ಸಹಜ ಆಧಿ ಕಾರವು ಬಂದಬಂದಹಾಗೆ,ತನ್ನಂತೆ ತಾನಾಗಿಯೇ ಸ್ವಾಧ್ಯಾಯಿಗಳಾಗಲು ತ್ರಿಕ ರ್ಣಪೂರ್ವಕವಾಗಿ ಸ್ವಾಧ್ಯಾಯಿಗಳಾದವರ ಬೆನ್ನು ಹತ್ತುವದರಲ್ಲಿ ಬೆಳಸುತ್ತ ಹೋಗುವದು ಎರಡನೆಯ ಮೆಟ್ಟು. ಹೀಗೆಯೇ ಇತ್ಯಾದಿ ಕರಳಸಂಬಂಧವಲ್ಲ ದವರಲ್ಲಿ ಕರಣಸಬಂಧವನ್ನು ಜೆಳಿಸಲು, ದಯವೂ, ಆತ್ಮಾನಾತ್ಮವಿವೇಕವೂ ಮೂಲಧನವಾಗಿರುವವು. ಎಂದು ಪ್ರತ್ಯಕ್ಷವಾಗಿ ನಿಜಲಿಂಗಸೂತ್ರಸಂಬಂಧವಾ ದವರಲ್ಲಿ ಕರಣಸಂಬಂಧದ ಅಧ್ಯಯನವು ಅರಂಭವಾಗುವದೋ, ಅಂದೇ ಆ ಲಿಂಗಸೂತ್ರವು ಪರೋಕ್ಷವಾಗಿ ಸಂಬಂಧಿಸಲಾರಂಭವಾಯಿತೆಂದು ಹೇಳಬಹುದು. ಏಕಂದರೆ ಅದು ಕರಣಸಂಬಂಧದಿಂದಲೇ ಧರಿಸುವದಾಗಿರುವದು. ಪರಿಪೂರ್ಣ ವಾಗಿ ರಾಗವು ಕೆಟ್ಟು ವಿಶ್ವಕುಟುಂಬಿಯಾದುದೇ, ಪ್ರತ್ಯಕ್ಷವಾಗಿ ನಿಜಲಿಂಗಸೂತ್ರ ಸಂಬಂಧವಾದುದರ ಕುರುಹು. ಪ್ರತ್ಯಕ್ಷ ಲಿಂಗಸೂತ್ರಸಂಬಂಧವಾದವಂಲ್ಲಿ ಬ್ರಹ್ಮವೇ ಕಣ್ಣಿಗೆ ಕಟ್ಟಿ ಸ್ಪೃಶ್ಯಾಸ್ಪೃಶ್ಯ ವಿಚಾರವೂ, ಮಡಿಮೈಲಿಗೆಯ ಭಾವವೂ ವರ್ಣಗೋತ್ರಕುಲಜಾತ್ಯಾದಿಗಳ ಭ್ರಾಂತಿಯೂ ತಮ್ಮಿಂದ ತಾವೇ ಹೇಳಹೆಸರಿಲ್ಲ ವಾಗಿ ಎಲ್ಲವೂ ಲಿಂಗಮಯವಾಗುವದು. ಇಂತಹವರನ್ನು ತಮ್ಮನ್ನೂ ಸಹ ಮರೆತು ಪರಿಪೂರ್ಣವಾಗಿ ನಂಬಿ, ಅವರ ನಡೆಯಲ್ಲಿ ಎಷ್ಟೂ ಸಂಶಯಸಂಕಲ್ಪ ಗಳನ್ನು ತಕ್ಕೊಳ್ಳದೆ ಆಚರಿಸುವದರಲ್ಲಿಯೇ ಪರೋಕ್ಷವಾಗಿ ನಿಜಲಿಂಗಸೂತ್ರ ಸಂಬಂಧವಿರುವದು. ಸರ್ವಾಂಗಸುಂದರವಾದ ಲಿಂಗರಹಸ್ಯವು ಇವೆಲ್ಲ ಸಂಗತಿ ಗಳನ್ನು ಒಳಕೊಂಡಿರುವದರಿಂದ, ಆ ಅನುವರ್ತನದಲ್ಲಿ ವರ್ಣಗೋತ್ರಕುಲಜಾ ತ್ಯಾದಿಗಳು ಉಳಿಯುವು.

## ಪ್ರಭುದೇವರು ಸೊನ್ನಲಪುರದ ಸಿದ್ಧರಾಮಯ್ಯಂಗೆ ಇಷ್ಟಲಿಂಗರಹಸ್ಯವ ಬೋಧಿಸಿದ್ದು.

ಇಷ್ಟಲಿಂಗ ಪ್ರಾಣಲಿಂಗವೆಂಬ ಭೇದವನಾರು ಬಲ್ಲರಯ್ಯ ! ಅಂತರಂಗವೆಂ ಬ ಶಬ್ದಕ್ಕೆ ಬಹಿರಂಗ ಮುಂದೆಗೊಂಡಿತ್ತು. ಮನವನೆಡೆಗೊಂಡ ಲಿಂಗದರುಹು ವಿಚಾರವ್ಯಾಕುಳಕ್ಕೆ ಒಳಗಾಗಬಾರದೆಂದು ಮನಭಾವಜ್ಞಾನನೋಟವ ತಂದು ಕರಸ್ಥಳದಲ್ಲಿ ನಿಕ್ಷೇಪಿಸಿ ಅಂತರಂಗಬಹಿರಂಗವೆಂದರಿಯದೆ ಅನಿಮಿಷನಾಗಿರ್ಪನು ಶರಣನು. ಪ್ರಾಣಲಿಂಗದ ಪ್ರಸನ್ನಮುಖವ ನೋಡಿ ಪರಿಣಾಮಿಸಲೋಸುಗ ತೇಜವೆಂಬ ದರ್ಪಣವ ಹಿಡಿದಿರ್ಪನು ನೋಡಯ್ಯಾ! ಗುಹೇಶ್ವರಲಿಂಗದಲ್ಲಿ ನಿಜವ ನೈದಿಹನೆಂದರೆ ಕುರುಹುವಿಡಿದು ಕುರುಹುಗೆಡಬೇಕು ಕಾಣಾ ಸಿದ್ಧರಾಮಯ್ಯ !

## ಲಿಂಗಸಾಮ್ರಾಜ್ಯೋದಯವು.

# ೩ನೆಯ ಭಾಗವು

## ಲೋಕದಲ್ಲಿ ವೀರಶೈವತತ್ವಗಳು ಹೇಗೆ ಬೆಳೆಯುಹತ್ತಿವೆ.

ಲೋಕದಲ್ಲಿ ವಿಚಾರಕ್ರಾಂತಿಯು ಆಗಾಗ್ಗೆ ಆಗುತ್ತಿದ್ದರೂ, ಆಚಾರಕ್ರಾಂತಿಯು ಬಲು ಸಾವಕಾಶವಾಗಿ ಆಗುತ್ತಿರುವದು. ಅನುಭವಕ್ಕೆ ನಿಲುಕದಿದ್ದ ಎಷ್ಟೋ ಸಂಗತಿಗಳು ಮಾನವನ ತಿಳಿಗೆ ಹೊಳೆದಾಗ್ಯೂ, ಆ ಮೇರೆಗೆ ತನ್ನ ನಡೆಯನ್ನು ಬದಲುಮಾಡಿ ಕೂಡಲೆ ಆಚರಿಸುವದು ಅವನಿಂದ ಆಗದ ಸಂಗತಿಯಾಗಿರುವದು. ಕಾರಣ ಪ್ರತಿಯೊಬ್ಬರು ತಮ್ಮ ತಮ್ಮ ಸ್ವಭಾವಧರ್ಮದಲ್ಲಿ, ತಮ್ಮ ತಮ್ಮ ಯೋಗ್ಯತಾನುಸಾರವಾಗಿ ಬದಲು ಮಾಡುತ್ತ ನಡೆದಿರುವರು. ಇದರಿಂದ ಪ್ರತಿಯೊಬ್ಬರ ಹೆಜ್ಜೆಗಳು ಒಂದೇ ರೇಖೆಯಲ್ಲಿ ಇರದಿದ್ದರೂ, ಸೃಷ್ಟಿಯು ತನ್ನ ಸ್ವಾಭಾವಿಕ ಧರ್ಮದಲ್ಲಿ ಎಲ್ಲರನು ನಿಜಮೆಟ್ಟಿಗೆ ಒಯ್ದು ನಿಲ್ಲಿಸಲು, ಆಗಾಗ್ಗೆ ಸಮಗೊಳಿಸುತ್ತ ಮುಂದಕ್ಕೆ ಒಯ್ಯುವ ಕಾರ್ಯದಲ್ಲಿ. ಆದಿಕಾಲದಿಂದ ಒಂದೇ ಸಮನೇ ಧುರಂಧರವಾಗಿರುವದು. ಆದುದರಿಂದ ಮಾನವನ ಆತ್ಮೋನ್ನತಿಯ ಕ್ರಮದಲ್ಲಿ ಅವನ ಸ್ವಭಾವಧರ್ಮಕ್ಕನ ಸರಿಸಿ ಒಂದು, ಸೃಷ್ಟಿಯ ಸ್ವಾಭಾವಿಕ ಧರ್ಮಕ್ಕನುಸರಿಸಿ ಮತ್ತೊಂದು ಹೀಗೆ ಎರಡು ತತ್ತ್ವಗಳು ಇರುತ್ತಿರುವವು. ಮಾನವನ ಸ್ವಭಾವ ಧರ್ಮದಲಿ ಸಾಗಿರುವದು ಉತ್ಕ್ರಾಂತಿಯ ತತ್ತ್ವವು ಸೃಷ್ಟಿಯ ಸ್ವಾಭಾವಿಕಧರ್ಮದಲ್ಲಿ ಸಾಗಿರುವದು ಉದ್ಧಾರಕ ತತ್ತ್ವವು. ಉತ್ಕ್ರಾಂತಿಯ ತತ್ತ್ವವು ಭಿನ್ನ ಭಿನ್ನ ದಿಸೆಗೆ ಎಳಿಸಿ ದ್ವೈತವನ್ನೂ, ಉದ್ಧಾರಕ ತತ್ತ್ವವು ಏಕದಿಸೆಗೆ ಎಳಿಸಿ ಅದ್ವೈತವನ್ನೂ ಸಾಧಿಸುತ್ತಿರುವವು. ಮಾನವನು ತನ್ನ ಉತ್ಕ್ರಾಂತಿಯ ತತ್ತ್ವದಲ್ಲಿ ಸ್ವಾವಲಂಬನದಿಂದ ಮುಂದಡಿಯಿಕ್ಕುವನಾದುದರಿಂದ ವಿಕಾರವರ್ಧನಕ್ಕೆ ಕಾರಣವಾಗಿ ಅಧರ್ಮವು ಹೆಚ್ಚಿ, ಅವನತಿಯುಂಟಾಗುವದು. ಏಕಂದರೆ ಅವನು ತನ್ನ ತತ್ತ್ವವಿಚಾರದಲ್ಲಿ ಸ್ವಾಭಾವಿಕವಾಗಿ ಅಭಿಮಾನವುಳ್ಳವನಾದುದರಿಂದ, ಅದರ ಕ್ರಿಯಾಫಲವನ್ನು ಉಂಡಹೊರತು. ನಿಜಾನುಭವಿಗಳ ನಿಜಮಾರ್ಗದಲ್ಲಿ ಅಡಿಯಿಡನು; ಮತ್ತು ನಿಜಾನುಭವಿಯು ಅಂತಃಕರಣಪೂರ್ವಕವಾದ ಸಿದ್ಧತೆಯುಂಟಾದ ಹೊರತು, ತನ್ನ ಅನುಭವಾನುವರ್ತನದ ಗುಟ್ಟನ್ನು ಹೇಳನು. ಹೀಗಾಗಿ ಸ್ವಾವಲಂಬಿಗಳು ತಮ್ಮ ತತ್ತ್ವಾನುವರ್ತನದ ಫಲವನ್ನು ಉಣ್ಣಲು ಸ್ವೇಚ್ಛಾಚಾರಿಗಳಾಗಲು, ಅವರನ್ನು ಹದಗೊಳಿಸಿ ಹಾದಿಗೆ ತರುವ ಕುರಿತು ಅವರ ಸಾಮಾನ್ಯವಾದ ವಿಕಾರಕ್ಕನುಸರಿಸಿ ಸೃಷ್ಟಿಯ ಕಾರ್ಯದಲ್ಲಿ ಕ್ಷುಬ್ಧತೆಯುಂಟಾಗುವದು. ಈ ಸ್ಥಿತಿಯು ಲೋಕದ ಯಾವ ಭಾಗದಲ್ಲಿ ಯಾವ ಕಾಲಕ್ಕೆ ಉಂಟಾಗುವದೋ, ಅಲ್ಲಿ ಆವಾಗ್ಗೆ ಸೃಷ್ಟಿಯ ಕ್ಷುಬ್ಧಕಾರ್ಯಗಳು ಉಂಟಾಗಿ

ಹದಗೊಳಿಸಿ, ನಿಜಾನುಭವಿಗಳನ್ನು ಮುಂದೆ ಮಾಡಿ, ಅವರ ಮುಖದಿಂದ ಸಮತ್ವವನ್ನು ಕಾಯ್ದುಕೊಳ್ಳುತ್ತಿರುವದರಿಂದ, ಅದಕ್ಕೆ ಅವತಾರಕಾಲವೆಂದೆನ್ನುತ್ತಿರುವರು. ಈಗ ಸೃಷ್ಟಿಯ ಕ್ಷುಬ್ಧಕಾರ್ಯಗಳು ಲೋಕದ ತುಂಬಾ ಎದ್ದಿರುವದರಿಂದ, ನವಯುಗದ ನಿಜಧರ್ಮರಾಜ್ಯದ ಪರಿಪೂರ್ಣವಸ್ತುವಿನ ಪ್ರಕಟತೆಯ ಕಾಲವೆಂದು ಸ್ಪಷ್ಟವಾಗಿ ಒಡೆದುಕಾಣುತ್ತಿರುವದು. ಸನ್ ೧೯೧೪ನೆಯ ಇಸವಿಯಿಂದ, ಅದರೊಳಗೆ ನಮ್ಮ ಹಿಂದುಸ್ತಾನದಲ್ಲಿ ಸನ್ ೧೮೯೬ನೆಯ ಇಸವಿಯಿಂದ ಸೃಷ್ಟಿಯಕಾರ್ಯದಲ್ಲಿ ಕ್ಷುಬ್ಧತೆಯುಂಟಾಗಿ ಅಲ್ಲೋಲಕಲ್ಲೋಲವಾಗಹತ್ತಿರುವದು. ಇದನ್ನು ಕೆಳಗೆ ಕೊಟ್ಟ ಸಂಗತಿಗಳಿಂದ ಮನವರಿಕೆ ಮಾಡಿಕೊಳ್ಳಬಹುದು. ಹಿಂದಿನ ಶರಣರಾದರೂ ತಾವು ಮೈಮರೆಯಾಗುವಕಾಲಕ್ಕೆ, ಮುಂದೆ ಇಂತಿಷ್ಟು ಅವಧಿಯಲ್ಲಿ ಈ ಲೋಕವು ಭೂಕೈಲಾಸವಾಗುವದು. ಆಗ ಲೋಕದಲ್ಲಿ ಇಂತಿಂತಹ ಕುರುಹುಗಳು ಆದಾವೆಂದು ಭವಿಷ್ಯವನ್ನೂ ಬರೆದಿಟ್ಟಿರುವರು.

೧ ಸುಮಾರು ಎರಡು ಮೂರು ಪಟ್ಟಗಳಿಂದ ಪ್ಲೇಗ, ಕಾಲರಾ, ಇನ್‌ಫ್ಲೂಯಂಜಾ ಗುಳ್ಳೀ ಬೇನೆ, ಮಾರಿಕಾ, ಗುದ್ದವ್ವನ ಬೇನೆ ಮುಂತಾದ ಭಯಂಕರವಾದ ರೋಗಗಳು ತಲೆದೋರಿ, ವರ್ಷಾ ವರ್ಷಾ ಲಕ್ಷಗಟ್ಲೆ ಜನರನ್ನು ಒಯ್ಯುತ್ತಿರುವವು. ಸನ್ ೧೮೯೬ರಿಂದ, ಮಹಾಯುದ್ಧವು ಸುರು ಆಗುವ ವರೆಗೆ ನಮ್ಮ ಹಿಂದುಸ್ತಾನದಲ್ಲಿ ಉಂಟಾದ ಗುಳ್ಳೀ ಬೇನೆಯ ಉಗ್ರಸ್ವರೂಪವನ್ನೂ, ಮಹಾಯುದ್ಧವು ನಡೆದಾಗ್ಗೆ ಸನ್ ೧೯೧೮–೧೯ನೆಯ ಸಾಲಿನಲ್ಲಿ (೧೩೩೦೦೦೦೦) ಒಂದ ಕೋಟಿ ಮುವತ್ತು ಮೂರು ಲಕ್ಷ ಜನರನ್ನು ಆಹುತಿಯಾಗಿ ತೆಗೆದುಕೊಂಡ ಗುದ್ದವ್ವನ ಬೇನೆಯ ಪ್ರಬಲತೆಯನ್ನೂ ಯಾರೂ ಮರೆಯಲಾರರು. ಈ ಹಾವಳಿಯಲ್ಲಿ ಒಟ್ಟುಗೂಡಿ ಸುಮಾರು ನಾಲ್ಕೈದು ಕೋಟಿ ಜನರು ಬಲಿಬಿದ್ದಿರಬಹುದು. ಮೊನ್ನೆ ಮೊನ್ನೆ ಹೈದ್ರಾಬಾದಿನಲ್ಲಿ ದಿನವೊಂದಕ್ಕೆ ನೂರು ನೂರು ಜನರಂತೆ, ಸಂಯುಕ್ತಪ್ರಾಂತದಲ್ಲಿ ಒಂದು ವಾರದೊಳಗೆ ೪೬೩೦ ರಂತೆ ಜನರು ಆಹುತಿಯಾದರು. ಆದರೂ ಇವುಗಳ ಉಪಟಳವು ಹಿಂಗಿತೆನ್ನುವಂತಿಲ್ಲ! ಗೊಬ್ಬರದೊಳಗಿನ ಬೆಂಕಿಯಂತೆ ಸಣ್ಣಾಗಿದ್ದುಕೊಂಡು, ಒಂದೊಂದು ಕಡೆ ಒಮ್ಮೆಲೆ ಭಗ್ಗನೆಂದು ತಮ್ಮ ಪ್ರತಾಪವನ್ನು ತೋರುತ್ತಿರುವವು.

೨ ಒಬ್ಬ ರಾಜಕುಮಾರನ ಕೊಲೆಯ ನಿಮಿತ್ತವಾಗಿ ಇಡೀ ಲೋಕವನ್ನು ವ್ಯಾಪಿಸಿಕೊಂಡು ಯುರೋಪದಲ್ಲಿ ಸನ್ ೧೯೧೪ ನೆಯ ಇಸವಿಯಿಂದ ಒಂದೇ ಸವನೇ ಐದಾರುವರ್ಷ, ತುಮುಲವಾಗಿ ಜರಗಿದ ಮಹಾಯುದ್ಧದಲ್ಲಿ ಆದ ನಷ್ಟವನ್ನು ಹೇಳಲಾಸಲ್ಲ! ಇದಕ್ಕಾಗಿ ಒಂದು ದೊಡ್ಡ ಪುಸ್ತಕವೇ ಛಾಪವಾಗಿರುವದು. ವಾಚಕರು ಅತ್ತ ಗಮನಿಸಬಹುದು. ಆದರೂ ಆ ಯುದ್ಧವು

ಇನ್ನೂ ತಣ್ಣಗಾಗದೆ, ಅಲ್ಲಲ್ಲಿ ಸಣ್ಣಾಗಿದ್ದುಕೊಂಡು, ಸಧ್ಯ ಚೀನ ಜಪಾನರ ನಡುವೆ ನಡೆದಿರುವ ಕದನದಲ್ಲಿ ಸೇರಿಕೊಂಡು, ಪೌರ್ವಾತ್ಯರಿಗೂ ಪಾಶ್ಚಿಮಾತ್ಯರಿಗೂ ನಡುವೆ ಮತ್ತೊಂದು ಮಹಾ ಕದನವು ಏಳುವ ಸಂಭವವಿದೆಯೆಂದು ಎಷ್ಟೋ ಭವಿಷ್ಯವಾದಿಗಳ ಹಾಗೂ ಮುತ್ಸದ್ದಿಗಳ ಮತವುಂಟು.

೩ ಲೋಕದಲ್ಲಿ ಯಂತ್ರಗಳಿಂದಾದ ಕ್ರಾಂತಿಯ ಮೂಲಕ, ಜನತೆಯೊಳಗಿನ ಬಹು ದೊಡ್ಡ ಭಾಗಕ್ಕೆ ಉದ್ಯೋಗವಿಲ್ಲದೆ ಅನ್ನ ಅರಿವೆಗಳ ಕೊರತೆಯುಂಟಾಗಿ ಸರಕಾರಕ್ಕೂ ಪ್ರಜೆಗಳಿಗೂ, ಸಾವುಕಾರರಿಗೂ ಬಡವರಿಗೂ ಸಂಪು ಸತ್ಯಾಗ್ರಹ ಅಸಹಕಾರ ಮುಂತಾದವಿಕಾರವಿನಾಶಕ ಶಾಂತಿಮಯ ಸಂಗ್ರಾಮಗಳುನಡೆದಿರುವತನಕ ಕಟ್ಟೇ ಇಲ್ಲ! ರಸಿಯಾದಲ್ಲಿ ಬೋಲ್ಸೆವಿಕ್ ಸರಕಾರವಾಗಿ ಅದು ಎಲ್ಲೆಲ್ಲಿಯ ಬಡತಂಡದವರ ಕಣ್ಣನ್ನೆಲ್ಲ ತನ್ನಕಡೆಗೆ ತಿರುಗಿಸಿಕೊಂಡಿರುವದು. ಸಧ್ಯಾಲಕ್ಷಾಂತರಗಟ್ಟಲೆ ಜನರು ಸಂಪುಮಾಡಿ ಮುಂಬಯಿಯಲ್ಲಿ ಸುಮಾರು ನೂರಾರು ಗಿರಣಿಗಳು ಬಂದುಬಿದ್ದಿರುವವು. ಕಲಕತ್ತೆಯಲ್ಲಿಯೂ ಇದೇ ಹಾಡು ಇಡೀ ಬಾರಡೋಲಿಯ ತಾಲೂಕಿನ ಜನರೆಲ್ಲ ಸರಕಾರದ ಕೂಡ, ಭೂಮಿಯ ಕಂದಾಯದ ವಿಷಯವಾಗಿ ಶಾಂತಿಮಯ ಕದನವನ್ನು ಹೂಡಿ ಜಯಹೊಂದಿರುವರು. ಜಪಾನದಲ್ಲಿ ಹಡಗಪಡೆಯ ಮೇಲಿನ ೫೦೦೦ ಜನರು, ಆಥೇನ್ಸದಲ್ಲಿ ೮೦೦೦ ಜನರು, ಇಂಗ್ಲಂಡದೊಳಗೆ ನೆಲ್ಸನ್ ಊರಲ್ಲಿ ಒಬ್ಬ ನೇಯಕಾರನನ್ನು ಅಯೋಗ್ಯನೆಂದು ಕಿತ್ತುಹಾಕಿದ್ದಕ್ಕಾಗಿ ೧೬೦೮೦ ನೇಯಕಾರ ಜನರು, ಓಲ್ಡ್ಯಾಮ ಊರಲ್ಲಿ ೨೦೦೦೦ ಕೂಲಿಕಾರ ಜನರು ಸಂಪು ಮಾಡಿರುವರು. ಈ ತರದ ಸಂಪುಗಳಿಂದ ಕಾನಪುರ ಕಲಕತ್ತಾ, ಜಮ್‌ಶೇದಪುರಗಳೊಳಗಿನ ಗಿರಣಿಗಳು ಬಂದಾದವು.

೪ ಮಹಾಯುದ್ಧವು ನಡೆದಾಗ್ಗೆ ಆರಂಭವಾದ ಅತಿವೃಷ್ಟಿಯಿಂದ ಆಗಾಗ್ಗೆ ಅಲ್ಲಲ್ಲಿ ಉಂಟಾಗುತ್ತಿರುವ ಜಲಪ್ರಳಯಗಳು ಪ್ರಸಿದ್ಧವಾಗಿರುವವು. ಆರಂಭಕ್ಕೆ ನಮ್ಮ ಹಿಂದುಸ್ಥಾನದಲ್ಲುಂಟಾದ ಕೇಡನ್ನೂ, ಹಗೆ ಹೊಕ್ಕು ನೀರು ಹತ್ತಿ ಕಾಳು ಕೆಟ್ಟದ್ದನ್ನೂ, ಮನೆಗಳು ಜಂಪಳಿಕ್ಕಿ ಅಡಿಗೆಮಾಡಲಿಕ್ಕೆ ಸಹ ಅನುವು ದೊರೆಯದಾಗಿ, ಜನರು ಗುಡಿಗುಂಡಾರಗಳನ್ನು ಆಶ್ರಯಿಸಿದುದನ್ನೂ ಮರೆತಿರಲಿಕ್ಕಿಲ್ಲ! ಕಾವೇರಿಯ ಮಹಾಪೂರದಿಂದಲೂ, ಮಲಬಾರದಂಡಿಯ ಮಹಾಪೂರಗಳಿಂದಲೂ ಜನರಿಗಾದ ಕೇಡನ್ನೂ ಮರೆತಿರಲಿಕ್ಕಿಲ್ಲ!! ಹೈದ್ರಾಬಾದದ ಕೆರೆಯೊಡೆದು ಅರ್ಧ ಊರು ಹೋದುದನಕ ಹಾಡು ಕಟ್ಟಿ ಹಾಡುತ್ತಿರುವರು. ಮೊನ್ನೆ ಗುಜರಾಥದಲ್ಲಾದ ಪ್ರಳಯವು ಎಂದೂ ಮರೆಯದಂತಹದ್ದಾಗಿರುವದು. ಅದರಂತೆ ಕಾಠೆವಾಡ ಸಿಂಧಪ್ರಾಂತದ ಪ್ರಳಯಗಳೂ ಪ್ರಸಿದ್ಧವಾಗಿರುವವು. ಅಮೇರಿಕದ ನ್ಯೂ ಇಂಗ್ಲಂಡ ಪರಗಣೆಯ

ಲ್ಲಾದುದನು ಬಣ್ಣಿಸಲಸಾಧ್ಯವು. ಕಾಶ್ಮೀರದೊಳಗೆ ಝೀಲಮ್ ಹೊಳೆಗೆ ಮಹಾಪೂರು ಬಂದು ದಂಡೆಯಮೇಲಿದ್ದ ಶ್ರೀನಗರ ಪಟ್ಟಣಕ್ಕೆ ಆದ ಕೇಡೂ, ಸೈಬೀರಿಯಾದಲ್ಲಿ ಅಮೂರ ಹೊಳೆಗೆ ಮಹಾಪೂರ ಬಂದು ಆದ ಕೇಡೂ, ಚೀನದಲ್ಲಿ ಸಾಂಘಾಯಿಯಪೂರಿನಿಂದ ಸಾಂಘಾಯಿ ಬಂದರಕ್ಕಾದ ಕೇಡೂ ಮರೆಯುವಂತಹವಿಲ್ಲ. ಹೀಗೆಯೇ ತನ್ನ ಆಟವನ್ನು ನಡೆಸಿರುವದು.

೫ ಭಯಂಕರವಾದ ಬಿರುಗಾಳಿಯಿಂದ ಸಮುದ್ರವು ಉಕ್ಕೇರಿ ಅದರಿಂದ ಇಂಗ್ಲಂಡದೊಳಗಿನ ಟೇಮ್ಸನದಿಗೆ ಎರಡಾವರ್ತಿ ಮಹಾಪೂರ ಬಂದು, ಮಧ್ಯರಾತ್ರಿಯಲ್ಲಿ ಲಂಡನ ಪಟ್ಟಣವನ್ನೊಳನುಗ್ಗಿ, ಜನರು ದಿಕ್ಕೆಟ್ಟು ಓಡಾಡಿದ್ದನ್ನೂ, ಪಾರ್ಲಮೆಂಟನೊಳಗೆ ನೀರು ಹೊಕ್ಕದ್ದನ್ನೂ, ಗುಡುಗು ಮಿಂಚು. ಮಳೆ, ಬರ್ಫ, ಗಾಳಿ ಇವುಗಳಿಂದ ಇಂಗ್ಲಂಡಕ್ಕಾದ ಕೇಡನ್ನೂ ಬಣ್ಣಿಸಲಸಾಧ್ಯವು. ಮದ್ರಾಸ ಇಲಾಖೆಯ ಸಮುದ್ರದ ದಂಡೆ ಗುಂಟ ಬೀಸಿ, ಹೋಗುತ್ತಿರುವ ಅಗಿನಗಾಡಿಯ ಡಬ್ಬಿಗಳು ರೂಲ ಬಿಟ್ಟು ಕೆಳಗೆ ಬಿದ್ದದ್ದನ್ನೂ, ಮನೆಮಾರುಗಳ ಛಪ್ಪರುಗಳು ಹಾರಿ ಉಂಟಾದ ಕೇಡನ್ನೂ, ನೆಲ್ಲೂರು ಹಾಳಾದುದನೂ ಹೇಳಲಸಾಧ್ಯವು. ಸಧ್ಯಾ ರಂಗೂನದಲ್ಲಿ ಈ ಬಿರುಗಾಳಿಯಿಂದಾದ ಕೇಡು ಕಣ್ಣಾರೆ ಕಂಡ ಹೊರತು, ಗೊತ್ತಾಗಲಾರದು. ಸಮುದ್ರದಲ್ಲಿ " ಜಯಂತಿ, ತುಕಾರಾಮ " ಎಂಬೆರಡು ಹಡಗಗಳು ಮುಳುಗಿ ಅದರೊಳಗಿನ ೩೦೦ ಜನರೂ, ರಶಿಯನ್ನ ವಿದ್ಯಾರ್ಥಿಗಳು ಕೂತು ಹೋಗುತ್ತಿದ್ದ ಹಡಗವು ಮುಳುಗಿ ೪೦೦ ವಿದ್ಯಾರ್ಥಿಗಳೂ ಸಮುದ್ರಕ್ಕೆ ಅರ್ಪಣವಾದರು. ದಿಲ್ಲಿ, ಹಂಗೇರಿ, ಜರುಸಲೇಮ್ ಮೈಸೂರ ಮುಂತಾದ ಕಡೆಯಲ್ಲಿ ಈ ಬಿರುಗಾಳಿಯಿಂದ ಎಷ್ಟೆಷ್ಟೋ ಇಮಾರತುಗಳ ಥಾಟುಗಳು ಹಾರಿ ಹೋಗಿ ಬಹಳ ಕೇಡಾಗಿರುವವು. ಮೈಸೂರೊಳಗಿನ ಎರಡು ನಾಟಕದ ಮನೆಗಳು ನೆಲಸಮವಾಗಿರುವವು. ಹಂಗೇರಿಯಾದಲ್ಲಿ ತಾರಿನ ಕಂಬಗಳು ಕಿತ್ತು ಬಿದ್ದಿರುವವು. ಮರಗಳು ನಿಡಚಾಪ ಹಾಕಿದ್ದನಕ ಎಣಿಕೆಯೇ ಇಲ್ಲ. ಲಂಡನದೊಳಗೆ ವೆಸ್ಟಮಿನಿಸ್ಟರ ಅಬೇದ ಸೆಂಟ್ರಲ್ ಹಾಲದೊಳಗಿನ ಛತ್ತು ಬಿದ್ದು ಎಷ್ಟೋ ಮಕ್ಕಳು ಸತ್ತಿರುವವು. ಅಮೇರಿಕದ ಯುನಾಯಿಟೆಡ್ ಸ್ಟೇಟ್ಸ ದೇಶದಲ್ಲಿ ವಿಶೇಷವಾಗಿ ಸ್ಯಾನ್-ಜುವನ್ ಮತ್ತು ರಿಕೋ ಪ್ರದೇಶದಲ್ಲಿ ಬೀಸಿ ಸಾವಿರಗಟ್ಲೆ ಜನರು ಧೂಳಿಯಲ್ಲಿ ಹುಗಿಸಿಕೊಂಡು ಸತ್ತರು. ಎಷ್ಟೋ ಕೋಟಿಗಟ್ಲೆ ಕೇಡಾಗಿರುವದು. ಹೀಗೆಯೇ ಗಾಳಿಯು ತನ್ನ ಆಟವನ್ನು ನಡಿಸಿರುವದು.

೬ ಬೆಂಕಿಯ ಹಾವಳಿಯಿಂದ ಬೋಸ್ಟನದಲ್ಲಿ ಆರುಕೋಟಿ ರೂಪಾಯಿಗಳ ಕೇಡಾಯಿತು. ಇಂಗ್ಲಂಡದಲ್ಲಿ ೨೦೦೦ ಅರಳಿಯ ಅಂಡಿಗೆಗಳು ಸುಟ್ಟು ಎಷ್ಟೋ

ಲಕ್ಷಾಂತರಗಟ್ಟಲೆ ರೂಪಾಯಿಗಳು ಹಾಳಾದವು. ಮುಂಬಯಿಯಲ್ಲಿ ಒಮ್ಮೆ ಸುಮಾರು ಎಂಟುಲಕ್ಷ ಮತ್ತೊಮ್ಮೆ ೨೪೦೦ ಅಂಡಿಗೆಗಳು ಸುಟ್ಟು ಸುಮಾರು ಆರುಲಕ್ಷ ರೂಪಾಯಿಗಳ ಕೇಡಾಯಿತು. ಮದ್ರಾಸದಲ್ಲಿ ೨೦೦೦ ಮನೆಗಳು ಸುಟ್ಟು ಹಾಳಾದವು. ನೊನ್ನೆ ಎಲ್ಲೂರಲ್ಲನಕ ೩೦೦೦ ಮನೆಗಳು ಸುಟ್ಟು, ಸುಮಾರ ೨೦೦೦೦ ಜನರು ಬೈಲಲ್ಲಿ ನಿಂತಿರುವರು. ಶಿಕಾರಪುರದಲ್ಲಿ ನಾಲ್ಕುನೂರು ಮನೆಗಳು ಸುಟ್ಟು ಬೂದಿಯೂದವು. ಬುಖಾರೇಸ್ತದಲ್ಲಿ ಕಲ್ಲೆಣ್ಣೆಯ ೮ ಭಾವಿಗಳಿಗೆ ಬೆಂಕಿಯು ಹತ್ತಿ, ಸುಮಾರು ೧೯ ಲಕ್ಷರೂಪಾಯಿಗಳ ಕೇಡಾಗಿರುವದು. ಇಂಗ್ಲಂಡದಿಂದ ಆಸ್ಟ್ರೇಲಿಯಾಕ್ಕೂ ಇಂಡಿಯಾಕ್ಕೂ ಹೊರಟ ಮೇಲ ಹಡಗಗಳು ಸುಟ್ಟು ಸಮುದ್ರದ ತಳಗಂಡವು. ಟ್ರಾನ್ಸವೆಲ್ಲದ ಹತ್ತರ ಮಂತರ ಕಣಿಗೆ ಬೆಂಕಿ ಹತ್ತಿ ನೂರಿನ್ನೂರು ಜನರು ಪ್ರಾಣಕ್ಕೆ ಎರವಾದರು. ಉತ್ತರಹಿಂದುಸ್ತಾನದ ಸಂಯುಕ್ತ ಪ್ರಾಂತದಲ್ಲಿ ಮುಜಫರ ನಗರದೊಳಗಿನ ೨೭ ಹಳ್ಳಿಗಳು ಏಕಕಾಲಕ್ಕೆ ಸುಟ್ಟು ಬೂದಿಯಾದವು. ಈ ರೀತಿ ಬೆಂಕಿಯು ತನ್ನ ಕಾರ್ಯವನ್ನು ನಡಿಸಿರುವದು.

೭ ಯುರೋಪದ ಸ್ಪೇನದಲ್ಲಿ ಅತಿ ಭಯಂಕರವಾದ ಚಳಿಯಿಂದ ಜನರು ಹೊರಗೆ ಅಡ್ಡಾಡದಂತಾಗಿ ತೋಳ ಹಂದಿ ಮುಂತಾದ ಕಾಡ ಮೃಗಗಳು ಸಿಕ್ಕರೆ ಮನುಷ್ಯರನ್ನೂ ಸಹ ಹಂದು ತಿನ್ನುವ ಹಸಿವೆಯಿಂದ ಹಗಲುರಾತ್ರಿಯೆನ್ನದೆ ಒಂದೇ ಸವನೆ ಊರೊಳಗೆ ಬೀದಿಯ ಬಾಜಾರದಲ್ಲಿ ಅಡ್ಡಾಡಹತ್ತಿದ್ದು ವರ್ಣಿಸುವದಾಗಿರುವದು. ಆದೇಮೆರೆಗೆ ಇಂಗ್ಲಂಡದಲ್ಲಾದುದನು ಮೇಲೆ ಹೇಳಿರುವದು. ಈ ರೀತಿ ಚಳಿಯು ತನ್ನ ಕಾರ್ಯ ನಡಿಸಿರುವದು.

೮ ಭೂಕಂಪದಿಂದ ಸ್ಮರ್ನಾದಲ್ಲಿ ಎರಡು ಹಳ್ಳಿಗಳು ಹಾಳಾದವು. ಗ್ರೀಸದಲ್ಲಿ ಮನೆಗಳು ಬಿದ್ದು ೧೬೦೦೦ ಜನರು ಬೈಲಲ್ಲಿ ನಿಂತಿರುವರು. ಜಪಾನದ ಬಟೆವಿಯಾದ ಹತ್ತರದ ಗುಡ್ಡದಲ್ಲಿ ೨೪ ತಾಸುಗಳಲ್ಲಿ ೭೦೦೦ ಸಾರೆ ಜ್ವಾಲಾಮುಖಿಯ ಸ್ಫೋಟುಗಳಾಗಿ ಉಂಟಾದ ಕೇಡು ನೋಡುವ ಹಾಗಿರುವದು. ಅಮೇರಿಕ ಪೇರೂದೇಶದೊಳಗಿನ ಜೇನ ಮತ್ತು ಪಿಂಪಿನಿಯೋಸ ಎಂಬೆರಡು ಪಟ್ಟಣಗಳು ಭೂಕಂಪದಿಂದ ಸಂಪೂರ್ಣವಾಗಿ ನೆಲಸಮವಾದವು. ಜಪಾನದಲ್ಲಿ ಟೋಕಿಯೊ ಪಟ್ಟಣದ ಹತ್ತರ ಮಧ್ಯರಾತ್ರಿಯಲ್ಲಾದ ಭೂಕಂಪವು ಜನರನ್ನು ತತ್ತರಿಸ್ಯಾಡಿ ದಿಕ್ಕೆಡಿಸಿತು ಡಚ್ ಈಸ್ಟ ಇಂಡೀಜದೊಳಗೆ ಪ್ಯಾಲೋನೆದಲ್ಲಿ ಭೂಕಂಪ ಜ್ವಾಲಾಮುಖಿಗಳಿಂದ ಭಯಂಕರ ನಾಶವಾಗಿರುವದು. ಈ ರೀತಿ ಅವು ತಮ್ಮ ಕಾರ್ಯಗಳನ್ನು ನಡಿಸಿರುವವು.

ಅತ್ತ ಸೃಷ್ಟಿಯ ನಾನಾಬಗೆಯ ಪ್ರಬುದ್ಧಕಾರ್ಯಗಳು ಜನರನ್ನು ಹಣ್ಣುಮಾಡುತ್ತಿರಲು, ಇತ್ತ ಆತ್ಮೋನ್ನತಿಯಲ್ಲಿ ಮುಂದರಿದು, ಲೋಕಕಲ್ಯಾಣಕಾರ್ಯದಲ್ಲಿ ತನುಮನಧನವ ಸೂರಿಗೊಂಡು, ಹಂಗುಹರಿದು, ಸತ್ಯಾಗ್ರಹಿಗಳಾಗಿ, ನಡೆನುಡಿಗಳನ್ನು ಏಕಮಾಡಿ, ಧುರಂಧರರಾದ ಲೋಕಹಿತ ಮುಂದಾಳುಗಳು, ಜನರ ದೃಷ್ಟಿಯನ್ನು ಅನುಭವಪೂರ್ವಕವಾಗಿ ವಿಕಸಿತಗೊಳಿಸುತ್ತ, ನಿಜಧರ್ಮಾನ್ನುವರ್ತನದ ಭೂಮಿಕೆಯ ಸಿದ್ಧತೆಯನ್ನು ಆ ಪ್ರಭುವಿನ ಪ್ರಬಲವಾದ ಶಕ್ತಿಯ, ಅವ್ಯಕ್ತವಾದ ಸಹಾಯದಿಂದ ಮಾಡಹತ್ತಿರುವರು ನಿಜಧರ್ಮಾನುವರ್ತನವು ವೀರಶೈವಾಚಾರಣೆಯಿಂದ ಸುಲಭಸಾಧ್ಯವಾಗುವದು. ಆದರೆ ಲೋಕಹಿತಕಾರ್ಯದಲ್ಲಿ ಧುರಂಧರರಾದ ಮುಂದಾಳುಗಳು ಇಷ್ಟಲಿಂಗಧಾರಕರಲ್ಲದವರಂತೆ ತೋರುವದೇನೋ ನಿಜ! ನಿಜದೃಷ್ಟಿಯಿಂದ ನೋಡಿದರೆ, ಅವರೇ ನಿಜವೀರರಾಗಿ ತೋರುವರು. ನಮ್ಮವರು ಬಾಹ್ಯದಲ್ಲಿ ಧರಿಸಿರುವದೇನೋ ನಿಜ! ಕಟ್ಟಿದುದರ ಅರುಹು ಎಷ್ಟೂ ಇಲ್ಲದೆ, ದುಷ್ಟ ಗುರುವರ್ಗದ ದರ್ಶನಸ್ಪರ್ಶನಾದಿಕಾರ್ಯಗಳ ಬಳಿಸ್ಯಾಟದಿಂದ ಪಾಖಂಡಿಗಳಿಗಿಂತ ಜಡರಾಗಿ, ನಮ್ಮ ಆಟವೆಲ್ಲ ದಾಸ, ಡೊಂಬ, ಜಾತಿಕಾರ, ಪೈಲವಾನ ಮುಂತಾದವರ ಆಟವಾಗಿರುವದು. ಪ್ರತ್ಯಕ್ಷ ತನ್ನ ನಡೆಯಿಂದ ಲೋಕಕ್ಕೆ ಕಲ್ಯಾಣವನ್ನು ಸಹಜವಾಗಿ ಒಡೆದು ತೋರಿಸುವದಾದ ನಮ್ಮ ಧರ್ಮಾನುವರ್ತನವು ಎಲ್ಲಿಯೋ ಉಳಿದು, ನಾವು ರಸಾತಲಗಂಡುದರಿಂದ ನಮಗೆ ನಮ್ಮ ನಮ್ಮ ಕುಟುಂಬದ ಪೂರ್ತಿ ಕಲ್ಯಾಣದ ಹೊರತು, ಹೆಚ್ಚಿನದೇನ ತೋರದಾಗಿದೆ. ಅಂದಬಳಿಕ ಲೋಕಹಿತಮುಂದಾಳುಗಳು ದೊರೆಯುವದೆಲ್ಲಿ? ಆದರೆ ಕೋಣರಾದ ಅಯ್ಯಗಳನ್ನು ಮುಂದೆಮಾಡಿಕೊಂಡು ಬಣಕಟ್ಟಿ ಮೆರೆದಾಡುತ್ತಿರುವ ದೊಡ್ಡ ದೊಡ್ಡ ಪಾವಟಗ ದೊಡ್ಡಪ್ಪಗಳಿಗೇನು ಕೊರತೆಯಿಲ್ಲ. ಸುಶಿಕ್ಷಿತರಾದ ಭಕ್ತ ಬಾಂಧವರಿರಾ, ಎಲ್ಲರಿಗಿಂತ ಮುಂದಡಿಯನಿಟ್ಟು ಸದಾಚಾರದಲ್ಲಿ ಮಿನುಗುವ ನಮ್ಮ ಜ್ಞಾನ ಖಡ್ಗವು ಲಡ್ಡುಹಾಯ್ದು ಬಡಿಗೆಯಕಿಂತಲೂ ಕಡೆಯಾದುದನು ಕಂಡು, ಅದಕ್ಕೆ ಕಾರಣವಾದ ಗುರುವರ್ಗವೆಂಬ ಗೊಬ್ಬರಗುಂಪಿಯನ್ನು ಬಂಡೀ ತುಂಬಿ ಸಮಾಜವೆಂಬ ಊರ ಹೊರಗೆ ಹಾಕದಿದ್ದರೆ, ಅದರ ಮೇಲ್ಭಾಗದಲ್ಲಿ ಚಿಪ್ಪಾಡಿಯಾಗಿ ಬಿದ್ದ ನಮಗೂ ಗೊಬ್ಬರವಾಗಿ ಹೊರಗೆ ಹಾಕಿಸಿಕೊಂಬುವದು ತಪ್ಪುವ ಸಂಭವವೇ ಇಲ್ಲ! ಈ ಗೊಬ್ಬರಗುಂಪಿಯಿಂದೆದ್ದು ಲೋಕದಲ್ಲಿ ಟೊಂಕಕಟ್ಟಿಕೊಂಡು ಕಾರ್ಯಧುರಂಧರರಾದ ಲೋಕಹಿತಮುಂದಾಳುಗಳೆಂಬ ಗಟ್ಟಿ ಕಟ್ಟಿಗೆಗಳನ್ನು ಕೂಡಿಕೊಂಡರೆ, ಅವುಗಳಿಂದ ಚಿಪ್ಪಾಡಿಗೂ, ಚಿಪ್ಪಾಡಿಯಿಂದ ಅವುಗಳಿಗೂ ಉರಿಯಲಿಕ್ಕೆ ಬಲವುಂಟಾಗಿ, ಉಂದುಂದು ಕಿಚ್ಚಿನರಾಸಿಯು ಬಲಿತು, ಉರಿಯುತ್ತಿರುವ ವಿಕಾರವೆಂಬಕಾಡು ಬೇಗನೇ ಸುಟ್ಟು, ನಿರ್ವಿಕಾರವೆಂಬ ಬೂದಿಯುಂಟಾಗುವದು

೧ ಪ್ರತಿಯೊಬ್ಬ ಲಿಂಗಾಂಗಿಯು ಸದಾಚಾರಸಂಪನ್ನನಾಗಿ ಸ್ವಂತಕಾಯಕದಿಂದಲೇ ಗುರುಲಿಂಗಜಂಗಮದ ದಾಸೋಹವನ್ನು ಆಚರಿಸತಕ್ಕದ್ದು. ಈ ತತ್ತ್ವವು ಸಣ್ಣದೂ, ಅಷ್ಟೊಂದು ಮಹತ್ವವುಳ್ಳದ್ದಾದುದಲ್ಲವೆಂದೂ ತೋರಿದಾಗ್ಯೂ, ಲೋಕದ ನಿಜಕಲ್ಯಾಣವೆಲ್ಲ ಇದರಲ್ಲಿಯೇ ಅಡಕವಾಗಿರುವದು. ಆದುದರಿಂದ ಇದು ಯಾವತ್ತೂ ಲೌಕಿಕಧರ್ಮದ ಸಾರವನ್ನೊಳಕೊಂಡ ಸೂತ್ರವಾಗಿರುವದು. ಈ ನಮ್ಮ ಉದಾತ್ತತತ್ತ್ವದ ವಿಷಯವಾಗಿ ಲೋಕವು ಎಲ್ಲಿಗೆ ಬಂದಿರುವದೆಂಬವನ್ನು ನೋಡಿರಿ.

ಲೌಕಿಕರು ಈ ಸೂತ್ರದ ನೆಲೆಯನ್ನು ಬಲು ದ್ರಾವಿಡಪ್ರಾಣಾಯಾಮದಿಂದ ಕಂಡುಕೊಂಡರು. ಯಂತ್ರಗಳ ಸಾಧನದಿಂದ ಲೋಕದಲ್ಲಿ ವ್ಯಾಪಕದೃಷ್ಟಿಯಿಂದ ಎಷ್ಟು ಕೆಟ್ಟ ಪರಿಣಾಮವಾಗುತ್ತಿರುವದೆಂಬದನ್ನು ಮನಗಂಡು, ಯುರೋಪ ಅಮೇರಿಕಾ ರಾಷ್ಟ್ರಗಳೂ ಕೂಡ, ಮಹಾತ್ಮಾಗಾಂಧಿಯವರ ಖಾದಿಯ ಮಹತ್ವವನ್ನು ತಿಳಿದು ಒಪ್ಪಿಕೊಳ್ಳಹತ್ತಿರುವವು. ಗ್ರೇಗ್‌ನೆಂಬ ಅಮೇರಿಕದ ತತ್ತ್ವವೇತ್ತಿಯು ಕಾಯಕದಿಂದಾಗುವ ಲಾಭವನ್ನೂ, ಯಂತ್ರಗಳಿಂದಾಗುವ ಹಾನಿಯನ್ನೂ ಲೋಕದ ಮುಂದಿಟ್ಟು, ಎಲ್ಲಾ ಕಾಯಕಗಳಿಗೂ ಕೈನೂಲಿನ ಕೈಮುಗ್ಗದ ಬಟ್ಟೆಗಳಿಂದಲೇ ಜೀವಾಳವುಂಟಾಗುವದೆಂದೂ, ಯಾವಕಾಲಕ್ಕೂ ಯಾರಿಗೂ ಎಲ್ಲಿಯೂ ಯಾವರೀತಿಯಿಂದಲೂ ಉದ್ಯೋಗವಿಲ್ಲದೆ ತಿರುಗುವ ಪ್ರಸಂಗವು ಬೀಳಲಾರದೆಂದೂ, ಅದರಿಂದ ಯಾರಿಗೂ ಅನ್ನ ಅರಿವೆಗಳ ಕೊರತೆಯು ಎಲ್ಲಿಯೂ ಯಾವಕಾಲಕ್ಕೂ ಉಂಟಾಗದೆಂದೂ ಪ್ರಸಿದ್ಧಪಡಿಸಿರುವನು. ಲಾರ್ಡ ಡಾರ್ಲಿಂಗನೆಂಬ ಇಂಗ್ಲಂಡದ ದೂರದರ್ಶಿಯು, ಲೋಕದೊಳಗಿನ ಎಲ್ಲಯಂತ್ರಗಳ ಇಂಜನಿಯರರಿಗೆ ಲೇಖಮುಖದಿಂದ ಸೂಚಿಸಿರುವ ಭಾವವೇನಂದರೆ- ಲೋಕದೊಳಗೆ ನಿರುದ್ಯೋಗತನ. ಭೋಗಾಸಕ್ತತೆ. ಅನ್ಯಾಯ, ಬಡತನ ಇವುಗಳ ಏಳ್ಗೆಯು ಯಾವಾಗ್ಗೆ ಯಾವ ಭಾಗದಲ್ಲಿ ಉಂಟಾಗುವದೋ, ಆಗ್ಗೆ ಅಲ್ಲಿ ರಾಜಕ್ರಾಂತಿಯು ನಿಶ್ಚಯವಾಗಿ ಆಗುವದೆಂದು ತಿಳಿಯತಕ್ಕದ್ದು. ಈಗ ಯಂತ್ರಗಳಮೂಲಕ ಎಲ್ಲೆಲ್ಲೆಲ್ಲ ಈ ನಾಲ್ಕೂಸಂಗತಿಗಳ ಏಳ್ಗೆಯೇ ತೋರುತ್ತಿರುವದರಿಂದ ಬೇಗನೇ ಯಂತ್ರಗಳ ಕ್ರಾಂತಿಯ ಮೂಲಕವಾಗಿಯೇ ಇಡೀ ಲೋಕದಲ್ಲಿ ರಾಜಕ್ರಾಂತಿಯು ಉಂಟಾಗುವದು. ಈಗಲೇ ನಿಮ್ಮ ಕಲ್ಯಾಣದ ಮಾರ್ಗವನ್ನು ಕಂಡುಕೊಂಡು ಅನುಸರಿಸುವವರಾಗಿರಿ.

೨ ಕಲ್ಯಾಣದ ನಡೆಯಲ್ಲಿ ಲೋಕವನ್ನೂ, ಲೋಕವನ್ನಾಳುವ ಸರಕಾರಗಳನ್ನೂ ಯಾವಾಗಲೂ ಹೆಜ್ಜೆಯನ್ನು ಸ್ಥಿರಪಡಿಸುವ ವಿವೇಕಜನ್ಯವಾದ ವಿದ್ಯೆಯೇ ವಿದ್ಯೆಯಲ್ಲದೆ, ಉಳಿದ ಲೌಕಿಕ ವಿಕಾರಜನ್ಯವಾದ ವಿದ್ಯೆಗಳೆಲ್ಲ ಕಾಕಪೋಕು ವಿದ್ಯೆಗಳಾಗಿರುವವು. ನಿಜಧರ್ಮಾನುವರ್ತನವೇ ಶಿವಜೀವರೈಕ್ಯವಿದ್ಯೆಯಲ್ಲಿ

ನಮ್ಮ ಸಕಲಕರಣೇಂದ್ರಿಯಾದಿಗಳನ್ನು ಇರಿಸುವದಾಗಿರುವದು. ಈ ವಿಚಾರ ಗಳಿಗೆ ಲೋಕವು ಹೇಗೆ ನಿಲುಕಿರುವದೆಂಬದನ್ನು ನೋಡಿರಿ.

ಒಳ್ಳೇ ಸುಧಾರಣೆಯ ಶಿಖರಕ್ಕೇರಿದ ಯುರೋಪವು, ಇಲ್ಲಿಯವರೆಗೆ ತಾನು ಗಳಿಸಿದ ಕಲಾಕೌಶಲ್ಯಗಳ ಜಾಣ್ಮೆಯು ತನ್ನೊಳಗೆ ಯಾದವೀಕಲಹವನ್ನುಂಟು ಮಾಡಿ, ತನ್ನ ಸರ್ವಸ್ವವಿನಾಶಕ್ಕೆ ಕಾರಣವಾಯಿತೆಂಬುದನ್ನು ಮೊನ್ನೆ ಆದ ಮಹಾಯುದ್ಧದಿಂದ ಕಂಡುಕೊಂಡು, ಈ ರಾಕ್ಷಸೀ ಮಹತ್ವಾಕಾಂಕ್ಷೆಗೆಕಾರಣ ವಾದ ಈಗಿನ ಈ ಶಿಕ್ಷಣಪದ್ಧತಿಯನ್ನು ಬದಲು ಮಾಡಿ ಸತ್ಯವಾದ ಶಿಕ್ಷಣಪದ್ಧತಿ ಯನ್ನು ಕಂಡುಹಿಡಿಯುವ ಪ್ರಯತ್ನದಲ್ಲಿ ತೊಡಗಿರುವದು.

ಲಿಂಗಾನುಭವದ ನಿಜದೃಷ್ಟಿಯಿಲ್ಲದೆ ವೇಧಾಧಿಕಾರವು ಬರಲಾರದೆಂಬದರ ತಥ್ಯಾಂಶವಾದರೂ ವೇದವಿಚಾರವನ್ನು ವಿಕಾರಕ್ಕೆಳಿಸಬಾರದೆಂದಿರುವದು. ನಿಜ ಮಾರ್ಗದಲ್ಲಿ ಅಡಿಯಿಡಿಸಿ ನಡಿಯಹಚ್ಚಿ, ಅಲ್ಲಲ್ಲಿಗೆ ಉಂಟಾಗುವ ಸಂಶಯಗಳ ನ್ನು ಪರಿಹರಿಸುತ್ತ ಬೇಕಾದ ವಿದ್ಯೆಯನ್ನು ಕೊಡಲಿಕ್ಕೆ ಬರುವದು. ಇದೇ ನಿಜ ವಾದ ಶಿಕ್ಷಣಪದ್ಧತಿಯು ಎಂಬದನ್ನು, ಇಟಲಿಯಲ್ಲಿ ಮಿ. ಮೆರಾಯಾ ಮಾಂಟಿ ಸಾರಿ ಎಂಬವಳು ಕಂಡುಕೊಂಡು ಅದನ್ನು ಪ್ರಚಾರದಲ್ಲಿ ತರಹತ್ತಿರುವಳು.

ಬಸವಾದಿಪ್ರಮಥರು ತಾವು ಆಟ್ಟಿಂಡ ನಿಜಕಲ್ಯಾಣದ ನಿಜ ಶಿಕ್ಷಣ ಪದ್ಧ ತಿಯನ್ನು ಲೋಕವಾದರಿಯಾಗಲೆಂದು ನಮ್ಮ ಸಮಾಜಕ್ಕೆ ಆಚರಿಸಹಚ್ಚಿ, ತಾವೂ ಹಿಂದಿಂದ ನಡೆಯುತ್ತ ಕಲಿಸಿ ತೋರಿಸಿದಾಗ್ಯೂ, ಜಾತಿಯ ದುರಭಿಮಾ ನದ ಪಾಖಂಡಿಗಳ ನೇತೃತ್ವದಲ್ಲಿ ನಮ್ಮ ಸಮಾಜವು ಈ ಮನೆಗಿಳದು, ಲೌಕಿ ಕರಿಗಿಂತಲು ಜಡವಾಗಿರುವದು. ಆದರೂ ನಾವು ಲೌಕಿಕರಂತೆ ಹುಡುಕಿ ಕಂಡುಕೊಳ್ಳಬೇಕಾದುದೇನು ಇಲ್ಲ; ಅಲ್ಲದೆ ಎಲ್ಲಕಾಯಕದವರನ್ನೂ ಒಳಕೊಂಡು ನಮ್ಮ ಸಮಾಜದ ಸಚನೆಯಾಗಿರುವದು. ಆದ್ಯರು ಆಚರಿಸಿ ತೋರಿದ ಶರಣ ಮಾರ್ಗದಲ್ಲಿ ಎಲ್ಲರನ್ನೂ ನಡೆ ಹಚ್ಚಿ, ಲೋಕಮಾದರಿಯಾಗುವಂತೆ, ಹೊಡೆದೊ ಯ್ಯುವದೇ ಮೇಲಾದ ಶಿಕ್ಷಣದ ಸಾಲೆಯಾಗಿರುವದು- ಸುಶಿಕ್ಷಿತರಾದ ಭಕ್ತ ಬಾಂಧವರಿರಾ, ನಾವು ಈ ಸಾಲೆಯ ಗುರುಗಳು ( ಅಯ್ಯನವರು ) ಆಗೋಣ ಹೂ ಏಳಿರಿ! ಏನೊಂದು ಅನುಮಾನಿಸದೆ, ಎಷ್ಟು ಕಾಲಕಳೆಯುವ ಸಮಯವಿ ದಲ್ಲವು ಟೊಂಕ ಕಟ್ಟೋಣ ಸಿದ್ಧರಾಗಿರಿ.

೩ ಪಂಚಮಹಾಪಾತಕಗಳು ಲೋಕದಲ್ಲಿ ನಾಮಶೇಷವಾದ ಹೊರತು, ನಿಜಧರ್ಮಾನುವರ್ತನದ ನಡೆಯನ್ನು ಎಲ್ಲಿಯೂ ಕೇಳಬಾರದು. ಯಾವ ರಾಜ್ಯ ದಲ್ಲಿ ಈ ಪಾತಕಕೃತಿಗಳಿಗೆ ಅನುವು ಇರುವದೋ. ಅದು ಎಂದೂ ದೇವರಾಜ್ಯ ವಾಗಲರಿಯದು. ಧರ್ಮದ ಜವಾಬದಾರಿಯು ಇಲ್ಲದೆ ಸಾರ್ವಜನಕ ಶಾಂತತೆ

ಉಂಟಾಗಲಾರದು. ಭೀತಿಯುಕ್ತಿಗಳಿಂದ ಕಾಯ್ದುಕೊಂಬುವದು ಯಾರಿಗೂ ಸುಖದಾಯಕವಲ್ಲ! ಸರಕಾರಕ್ಕೂ ಪ್ರಜೆಗಳಿಗೂ ನಡುವೆ ಎಷ್ಟು ಸಂಬಂಧ ವಿಶ್ವಾಸಗಳು ಉಳಿಯವೆ ಕೇವಲ ತಂತ್ರೋಪಾಯಗಳಿಂದಲೇ ಆ ರಾಜ್ಯದ ವ್ಯವಸ್ಥೆಯು ನಡೆದಿರುವದು. ಇಂತಹ ರಾಜ್ಯಗಳು ಲೋಕದಲ್ಲಿ ಎಂದೂ ಕಾಲೂರಿ ಸ್ಥಿರವಾಗಲಾರವು. ಧರ್ಮವ ಬಿಟ್ಟು ಲೋಕದಲ್ಲಿ ಏನು ನಡೆಯಲಾರದು. ಧರ್ಮದ ಜವಾಬದಾರಿಯು ಇಲ್ಲದೆ ರಾಜ್ಯಪರಿಪಾಲನೆಮಾಡುವದು ರಾಜಧರ್ಮವೇ ಅಲ್ಲ! ಈ ಪಂಚಮಹಾಪಾತಕಗಳ ಗಾಳಿಯೂ ಸಹ ಸುಳಿಯದಂತೆ ಕಾಯ್ದುಕೊಂಬುವದೇ ಧರ್ಮರಾಜ್ಯವು. ಧರ್ಮದಜವಾಬದಾರಿಯನ್ನು ಹೊರದ ರಾಜ್ಯದಲ್ಲಿ ಸುಳ್ಳು ಸಂಗತಿಯ ರಂಜನೆಗಾಗಿಯೇ ಪವಿತ್ರವಾದ ಕಾಯದೆಯ ನಿಯಮಗಳೆಲ್ಲ ಪರಿವರ್ತಿಸುತ್ತಿರುವವು. ಅಂತಬಳಿಕ ಪಂಚಮಹಾಪಾತಕಗಳಿಗೆ ಆ ರಾಜ್ಯದಲ್ಲಿ ತಳವೂರಲಿಕ್ಕೆ ತಾನಾಗಿಯೇ ಅನುವು ಸಿಕ್ಕಂತಾಯಿತು. ಕೋರ್ಟುಗಳು ಹೆಚ್ಚಾಗಿರುವದೇ ಸುಳ್ಳು ತಳವೂರಿದುದರ ಕುರುಹಾಗಿರುವದು. ಕೋರ್ಟುಗಳಲ್ಲಿ ಆಣೆತಿನ್ನುವದೆಲ್ಲ ಸುಳ್ಳುಮಾತಾಡಲಿಕ್ಕೆ! ತುರಂಗದ ಮನೆಗಳು ಬೆಳೆದಿರುವದೇ ಕಳವಿಗೆ ಅನುವು ಕೊಟ್ಟುದರ ಕುರುಹಾಗಿರುವದು. ಪೋಲೀಸಖಾತೆಯು ಬೆಳೆದಿರುವದೇ ಕಳವು ಬಡಿದಾಟ ಖೂನಿ ಮುಂತಾದ ಹಿಂಸಾಕಾರ್ಯಗಳಿಗೆ ಮನೆ ಮಾಡಿಕೊಟ್ಟುದರ ಕುರುಹಾಗಿರುವದು. ದವಾಖಾನೆಗಳು ಬೆಳೆದಿರುವದೇ ಸಕಲ ರೋಗಗಳ ಉತ್ಪತ್ತಿಗೆ ಕಾರಣವಾದ ಹಾದರಕ್ಕೆ ಅನುವು ಕೊಟ್ಟುದರ ಕುರುಹಾಗಿರುವದು. ಕಟುಕರ ಅಂಗಡಿಗಳೂ ಗಡಂಗಗಳೂ ತುಂಬಿರುವದೇ ಅಭಕ್ಷ್ಯ ಭಕ್ಷಣ ಅಪೇಯಪಾನ ಮುಂತಾದವುಗಳಿಗೆ ಮನೆಹಾಕಿಕೊಟ್ಟುದರ ಕುರುಹಾಗಿರುವದು. ರಾಜ್ಯದಲ್ಲಿ ಕೋರ್ಟುಗಳೂ, ಪೋಲೀಸಖಾತೆಯೂ, ತುರಂಗಗಳೂ, ಗಡಗಂಗಳೂ, ಕಟುಕರ ಅಂಗಡಿಗಳೂ ಇಲ್ಲದಂತೆ ಮಾಡುವದೇ ಸ್ವರಾಜ್ಯವನ್ನು ಗೆದ್ದುಕೊಳ್ಳುವ ಸಂಗ್ರಾಮವಾಗಿರುವದು. ಲೋಕದಲ್ಲಿ ಹೊತ್ತಿದ್ದು ನಿಂತ ವಿಕಾರಕ್ಕೆ ಎಲ್ಲೆಲ್ಲಿಯ ರಾಜರುಗಳು ಹಣ್ಣಾಗಿ ಈಗ ಒಂದೊಂದೇ ಧರ್ಮಸೂತ್ರಗಳನ್ನು ತಮ್ಮಕೈಯೊಳಗೆ ತೆಗೆದುಕೊಳ್ಳಹತ್ತಿರುವರು. ಇದೇ ವೀರಶೈವ ಸರಕಾರವಾಗಹತ್ತಿದುದರ ಕುರುಹು. ಈ ಮಾತಿಗೆ ತುರ್ಕಸ್ತಾನ ಅಮೇರಿಕಾ ಇತ್ಯಾದಿ ರಾಷ್ಟ್ರಗಳಲ್ಲಿ ಸಿಂದಿ ಸೆರೆ ಕುಡಿಯಬಾರದೆಂದು ಕಾಯದೆಗಳನ್ನು ಮಾಡಿ ಅಮಲಿನಲ್ಲಿ ತಂದಿರುವದೇ ಸಾಕ್ಷಿ! ತುರ್ಕಸ್ತಾನ ಅಫಗಾಣಿಸ್ತಾನ ಸರಕಾರಗಳು ಗೋಹತ್ಯವನ್ನು ಬಂದುಮಾಡಿದ್ದೇ ಸಾಕ್ಷಿ!

ಈಗಾದರು ವೀರಶೈವರಾದ ನಾವು ನಾಚಿ ಪಾಪರಹಿತವಾದ ಶರಣಮಾರ್ಗದಲ್ಲಿ ಮುಂದಡಿಯನಿಡಬೇಕಲ್ಲವೇ! ಅಭಕ್ಷ್ಯಭಕ್ಷಣ, ಅಪೇಯಪಾನ ಮಾಡುವ ಎಷ್ಟೋ ಗುಪ್ತ ಕಳ್ಳರು ನಮ್ಮಲ್ಲಿ ಮರೆಮಾಜಿರುವರು. ಈ ವಿಷಯದಲ್ಲಿ ಬಲು ಎಚ್ಚರಪಡಬೇಕಲ್ಲವೇ! ಈಗಿದ್ದ ಧರ್ಮಸರಕಾರದ ಅಳರಸರುಗಳನ್ನೆಲ್ಲ ಮುರಿದು,

ಭಕ್ತೋತ್ತಮರಲ್ಲಿ ಸಹಜ ನಿರ್ವಿಕಾರ ಸಂಪನ್ನರನ್ನು ಆಯ್ದು ಯೋಜಿಸಿಕೊಂಡ ಹೊರತು, ನಮ್ಮ ಸಮಾಜವು ಪಂಚಮಹಾಪಾತಕಗಳಿಂದ ದೂರಾಗಿ ನಿಜಲಿಂಗ ಸೃಷ್ಟಿಗೆ ಎಂದೂ ಬರಲಾರದು, ಕಾರಣ ಧರ್ಮಸರಕಾರವನ್ನು ಸರಿಮಾಡಿಕೊಳ್ಳುವದೇ ನಮ್ಮ ಸಮಾಜ ಸುಧಾರಣೆಯ ಮೊದಲನೆಯ ಕಾರ್ಯವಾಗಿರುವದು.

೪ ಲಿಂಗನಂತರಿಲ್ಲರು ಸರಿಸಮಾನರು. ಪ್ರತಿಯೊಬ್ಬರು ಪ್ರತಿಯೊಬ್ಬರನ್ನು ಶಿವಸ್ವರೂಪದಲ್ಲಿಯೇ ಕಂಡು ಸೇವಿಸತಕ್ಕದ್ದು. ಕೇವಲ ಒಡಹುಟ್ಟಿದ ಬಂಧುಭಗಿನಿಯರಂತೆ ಅಂತಃಕರಣದಿಂದ ನಡಕೊಳ್ಳತಕ್ಕದ್ದು. ಭಕ್ತರಾದಬಳಿಕ ನಾಳಿಗಾಗಿ ಚಿಂತಿಸಕೂಡದು. ಆಹೊತ್ತಿನ ಕಾಯಕದಿಂದ ಬಂದ ಹಾಗನ್ನು (ಧನವನ್ನು) ಆ ಹೊತ್ತೇ ಗುರುಲಿಂಗಜಂಗಮದ ದಾಸೋಹಕ್ಕೆ ಮಾಡತಕ್ಕದ್ದು. ತನುಮನಧನಗಳೆಲ್ಲ ಗುರುಲಿಂಗಜಂಗಮಕ್ಕೆ ನೀಡಿ ನಡೆಯುವದರಿಂದ, ಪ್ರತಿ ದಿವಸದ ದಾಸೋಹದಿಂದ ಒಕ್ಕುಮಿಕ್ಕುಳಿದುದೆಲ್ಲವೂ ಜಂಗಮನದು. ಲೋಕವು ಅತ್ತ ಬಡಿದು, ಇತ್ತ ಬಡಿದು ಈ ಉದಾತ್ತ ತತ್ವಾನುವರ್ತನದ ಸಮೀಪಕ್ಕೆ ಬರಹತ್ತಿರುವದನ್ನು ನೋಡಿರಿ.

ಬಡವರ ಕಾಯಕಕಷ್ಟದಿಂದಲೇ ಶ್ರೀಮಂತರ ಸಿರಿವಂತಿಕೆಯು. ಅವರು ಕಾರಖಾನೆಗಳಿಗೆ ಭಾಂಡವಲ ಹಾಕಿದಮಾತ್ರದಿಂದ ಬಂದಲಾಭವನ್ನೆಲ್ಲ ತಾವೇ ತಕ್ಕೊಳ್ಳುವದು ಎಷ್ಟೂನ್ಯಾಯವಾದುದಲ್ಲ! ಮೇಲಾಗಿ ಹಾಕಿದ ಭಾಂಡವಲವೆಲ್ಲವೂ ನ್ಯಾಯದಿಂದ ಕೂಡಹಾಕಿದುದಲ್ಲ! ನಮ್ಮ ಬರುವ ಲಾಭದಂಶವನ್ನೆಲ್ಲ ಅಂತರಿಸಿ ಬೆಳಿಸಿಕೊಂಡದ್ದಾಗಿರುವದು. ವಿಚಾರಿಸಿ ನೋಡಲು ಅವರು ಅದಕ್ಕೆ ಬಾಧ್ಯಸ್ಥರೇ ಅಲ್ಲ! ಸರ್ವಭಾಂಡವಲವೆಲ್ಲ ಸರ್ವಸಾಮಾನ್ಯವಾದುದು. ಕಾರಣ ಶ್ರೀಮಂತರೂ ಕೂಡ ನಮ್ಮಹಾಗೆ ತಮ್ಮಯೋಗ್ಯತಾನುಸಾರ ಪಗಾರತಗೆದುಕೊಳ್ಳತಕ್ಕದ್ದು. ಇತ್ಯಾದಿ ಸೋಸಿಯಾಲಿಝುಮ್, ಬೋಲ್ಸೆವಿಝುಮ್ ತತ್ತ್ವಗೇು ಅಲ್ಲಲ್ಲಿ ಉದಯವಾಗಿ ಪ್ರಚಾರದಲ್ಲಿ ಬರಹತ್ತಿರುವವು. ಈ ಮಾತಿಗೆ ಸಂಪು, ಸತ್ಯಾಗ್ರಹ, ಅಸಹಕಾರ ಇತ್ಯಾದಿ ಪ್ರಯೋಗಗಳು ಅಲ್ಲಲ್ಲಿ ಮೇಲಿಂದಮೇಲೆ ಆಗಹತ್ತಿರುವದೇ ಸಾಕ್ಷಿ; ರಶಿಯಾದ ಸರಕಾರವೇ ಸಾಕ್ಷಿ; ಇಂಗ್ಲಂಡದ ಪಾರ್ಲಮೆಂಟಿನ ಲೇಬರ ಪಕ್ಷದ ಒಬ್ಬ ಮೆಂಬರನು ಕೂಲಿಕಾರರಿಗೆ-"ನೀವೆಲ್ಲರೂ ಶ್ರೀಮಂತರನ್ನು ಸುಲಕೊಂಡಹೊರತು ಹಾದಿಗೆ ಬರಲಾರರಿ"ಎಂದು ಸೂಚಿಸಿದ್ದೇ ಸಾಕ್ಷಿ;

೫ ಲೋಕದಲ್ಲಿ ಮಾನವಸೃಷ್ಟಿಯ ನಿರ್ಮಾಣವು ಲಿಂಗವಾಗಿ ಲಿಂಗದಲ್ಲಿ ಬೆರೆಯುವದಕ್ಕಾಗಿ, ಒಬ್ಬನು ಇನ್ನೊಬ್ಬನನ್ನು ಆಳುವದಾಗಲಿ, ಇಲ್ಲವೆ ಅವನ ಅಧಿಕಾರಕ್ಕೆ ಒಳಪಡುವದಾಗಲಿ ಕೇವಲ ತಾರತಮ್ಯಗಳನ್ನು ತೋರಿಸಲಿಕ್ಕಲ್ಲ; ಒಬ್ಬರನ್ನೊಬ್ಬರು ಲಿಂಗವನ್ನಾಗಿಸುವದಕ್ಕಾಗಿಯೇ; ಈ ತಾರತಮ್ಯವು ಸರಿಸ

ಮಾನರೆಂಬ ತತ್ತ್ವಕ್ಕೆ ಬಾಧೆಯನ್ನುಂಟುಮಾಡಿ,ಅಧಿಕಾರಿಯಲ್ಲಿ ನಾನು ಹೆಚ್ಚಿನವ ನೆಂಬ ಅಹಂಕಾರದ ಬೆಳವಣಿಗೆಗೆ ಕಾರಣವಾದುದರಿಂದ, ಸೇವ್ಯನಾರು, ಸೇವಕ ನಾರು, ಎನ್ನುವದರ ಗುರುತು ಸಹ ಉಳಿಯದಂತೆ ಕೇವಲ ಸೇವಾಕಾರ್ಯದಲ್ಲಿ ಮಾತ್ರ ಪರಸ್ಪರರು ಸೇವ್ಯ ಸೇವಕರಾಗಿ ಆಚರಿಸ ಹಡಕೊಂಡು ನಡೆಯತಕ್ಕದ್ದಾ ಗಿರುವದು. ಲೋಕವು ತನ್ನ ಕಲ್ಯಾಣಕ್ಕಾಗಿ ತನ್ನ ತಿಳುವಳಿಕೆಯು ವಿಕಾಸ ಹೊಂದುತ್ತ ಹೋದಮೇರೆಗೆ, ಉತ್ಕ್ರಾಂತಿಯ ಮಾರ್ಗವಾಗಿ ಈ ತತ್ತ್ವಾನುವ ರ್ತನದ ಬೆನ್ನುಹತ್ತಿ ಎಲ್ಲಿಗೆಬಂದಿರುವದೆಂಬದನ್ನು ನೋಡಿರಿ.

ನಮ್ಮ ರಕ್ತದ ಕಾಲುವೆಯನ್ನು ಹರಿಸಿ ಗೆದ್ದುಕೊಂಡ ರಾಜ್ಯವು ಅರಸನದಂತೆ; ಈ ಅರಸರೂ ನಮ್ಮ ದುಡಮೆಯಿಂದ ಮುಂದಾದ ಸಿರಿವಂತರೂ ಹಿರಿಯರಂತೆ, ನಾವು ಕಿರಿಯರಂತೆ ಅವರು ಯಾವಾಗಲು ಸೇವ್ಯರಂತೆ; ನಾವು ಸೇವಕರಂತೆ; ಅವರು ಭೋಗಿಗಳಂತೆ; ನಾವು ಜೋಗಿಗಳಂತೆ; ಹೆಚ್ಚಿನ ರಾಜ್ಯಗಳ ಗಳಿಕೆಗೆ ನಾವು ತಲೆಗೊಡಬೇಕಂತೆ; ತಾವು ಉಳಿದು ಊಟಮಾಡಬೇಕಂತೆ; ಈ ಹೆಚ್ಚಿನ ಹಾಳ ಉಸಾಬರಿಯು ಏತಕ್ಕೆ ಬೇಕು? ಒಂದು ದೇಶದವರು ಮತ್ತೊಂದು ದೇಶದ ವರನ್ನು ಗೆದ್ದು, ಅವರನ್ನು ತಮ್ಮ ಸುಖೋಪಭೋಗದ ದಾಸ್ಯತ್ವಕ್ಕಾಗಿ ಹಿಂಡಿ ಹಿಪ್ಪೀ ಮಾಡುವದು ಎಷ್ಟೂ ನ್ಯಾಯವಾದುದಾಗಲಾರದು. ಇದು ಮಾನವನ ಧರ್ಮವು ಅಲ್ಲವೇ ಅಲ್ಲ ; ಒಂದುವೇಳೆ ಯಾವದೊಂದು ಜನಾಂಗವು ಹೀನಾವ ಸ್ಥೆಯಲ್ಲಿರುತ್ತಿದ್ದರೆ, ಬಲ್ಲಿದರಾದವರು ಕೇವಲ ಧರ್ಮಬುದ್ಧಿಯಿಂದಲೇ ಅದಕೆ ಯೋಗ್ಯವಾದ ನಡೆನುಡಿಯನ್ನು ಕಲಿಸಿ ಮಾರ್ಗಕ್ಕೆ ಹಚ್ಚುವ ಪೂರ್ತೆ ಅವರ ರಾಜ್ಯದಲ್ಲಿ ಕೈಹಾಕಿ, ತ್ರಿಕರಣಪೂರ್ವಕವಾಗಿ ಸಹಾಯಮಾಡಿ, ಯೋಗ್ಯರಾಗು ವವರೆಗೆ ತಕ್ಕೊಳ್ಳಬಹುದು; ಅಥವಾ ತಮ್ಮ ಸುಧಾರಣೆಯನ್ನು ತಾವೇ ಮಾಡಿ ಕೊಳ್ಳುವೆವೆಂದರೆ ಎಷ್ಟೂ ಕೈಹಾಕದಿರುವದು ಒಳ್ಳೇದು. ನನ್ನದು ನಾನು ಎಂದು ಗೌರವಿಸಿಕೊಳ್ಳುವಂತಹ ಹೆಚ್ಚಿನ ಸಂಗತಿಗಳನೆಲ್ಲ ಹೊಡೆದೋಡಿಸಿ, ನಮ್ಮ ನಮ್ಮ ರಾಜ್ಯಗಳಲ್ಲಿ ಒಳವ್ಯವಸ್ಥೆಯನ್ನು ನಾವೇ ನೋಡಿಕೊಂಡು, ಎಲ್ಲರೂ ಸರಿಸಮಾನ ರಾಗಿ ಶಾಂತಿಯೋಗದಿಂದ ಧರ್ಮಮಾರ್ಗವಿಡಿದು ನಡೆದುಕೊಂಡುಹೋದರೆ ಸರಿತು ಇತ್ಯಾದಿಭಾವದವರಾಗಿರುವರು. ಮತ್ತು ಈ ಇಷ್ಟವನ್ನು ಲೋಕದಲ್ಲಿ ಸಾಮಾನ್ಯವಾಗಿ ನೆರವೇರಿಸುವ ಕುರಿತು ಪ್ರಯತ್ನಗಳಾದರೂ ನಡೆದಿರುವವು.

ಈ ಮಾತಿಗೆ ಮಹಾಯುದ್ಧವು ಮುಗಿಯುವಕಾಲಕ್ಕೆ ಸಂಯುಕ್ತರಾಷ್ಟ್ರದ ವರ ಪಕ್ಷದವರಾಗಿ ಬಂದ ಅಮೇರಿಕಾದ ಸಂಯುಕ್ತ ಸಂಸ್ಥಾನಗಳ ಪ್ರೆಸಿಡೆಂಟ ನಾಗಿದ್ದ ಉಡ್ರೋ ಉಯಿಲ್‌ಸನ್ನನು ಹದಿನಾಲ್ಕು ಕರಾರುಗಳಿಂದ ಕೈಸರನನ್ನು ಒಡಂಬಡಿಸಿ, ಮದ್ದು ಗುಂಡು ಮುಂತಾದ ಯುದ್ಧಸಾಮಗ್ರಿಯನ್ನೆಲ್ಲ ಸ್ವಾಧೀನ ಪಡಿಸಿಕೊಂಡುದೇ ಸಾಕ್ಷಿ; ತರುವಾಯ ಒಪ್ಪಂದದ ಕರಾರು ನ್ಯಾಯವಾದುವು

ಆಗಲಿಲ್ಲೆಂದು ಅಮೇರಿಕದವರು ಉಯಿಲ್‌ಸನ್ನನ ಮೇಲೆ ಸಿಟ್ಟಾಗಿ ಪ್ರಿಸಿಡೆಂಟಿಕೆಯ ಸ್ಥಳಕ್ಕೆ ಪುನಃ ಅವನನ್ನು ಆಯುಡಿದ್ದುದೇ ಸಾಕ್ಷಿ; ಒಂದುರಾಷ್ಟ್ರದವರು ಇನ್ನೊಂದು ರಾಷ್ಟ್ರದವರ ಮೇಲೆ ಮಹತ್ವಾಕಾಂಕ್ಷೆಯಿಂದ ಏರಿಹೋಗದಂತೆಯೂ, ತಮ್ಮ ತಮ್ಮ ರಾಷ್ಟ್ರಗಳನ್ನಷ್ಟೇ ಕಾಯ್ದುಕೊಳ್ಳುವಷ್ಟರ್ತೆ ದಂಡನ್ನಿಟ್ಟುಕೊಳ್ಳುವಂತೆಯೂ ಮಾಡಲೋಸುಗ ಜಿನೋವಾದಲ್ಲಿ ಡಿಸ್‌ಆರ್ಮಾಮೆಂಟ ಕಾನ್‌ಫರನ್ಸವನ್ನು ನೆರೆಯಿಸಿದುದೇ ಸಾಕ್ಷಿ; ಯುದ್ಧಗಳನ್ನೇ ಮಾಡಬಾರದು (ಔಟ ಲಾರಿ ಆಫ್ ವಾರ) ಎಂಬ ಬಗ್ಗೆ ಅಮೇರಿಕದವರು ಎಲ್ಲ ರಾಷ್ಟ್ರಗಳ ಕೂಡ ವಿಚಾರನಡಿಸಿರುವದೇ ಸಾಕ್ಷಿ; ಸೆಲ್ಫಡಿಟರ್ಮಿನೇಶನ್ನದ (ಸ್ವಯಂ ನಿರ್ಣಯ ತತ್ತ್ವದ) ಬಗ್ಗೆ ಲೋಕದಲ್ಲಿ ಚಳವಳಿ ಯೆದ್ದಿರುವದೇ ಸಾಕ್ಷಿ;

## ಸಮಿಷ್ಟಿ ಹಿಂದುಸ್ಥಾನವು ಲಿಂಗಧಾರಣಮೆಟ್ಟಿಗೆ ಬಂದುದಕೆ ಸಿದ್ಧತೆಯು

ವಿಕಾರದ ಪರಿಸ್ಥಿತಿಯಲ್ಲಿ, ಸೂತಕವಿರಹಿತವೂ ಕಲ್ಯಾಣಮಯವೂ ಆದ ನಿಜಲಿಂಗಾಚರಣೆಯನ್ನು ಪ್ರಯೋಗಿಸಲಾರಂಭಿಸಲು, ಲೋಕವು ಬಿಜ್ಜಳನನ್ನು ಮುಂದೆಮಾಡಿಕೊಂಡು ಮೇಲೆ ಬಿದ್ದುದರಿಂದ, ಕೇವಲ ಅಂತಃಕರಣದ ವ್ಯಾಪಾರದಿಂದ ಸಾಗುವದಾದ ಈ ಆಚರಣೆಯು ನಡೆಯದೆಂಬುದನ್ನು ತಿಳಿದು, ಬಸವಾದಿ ಪ್ರಮಥರು ವೈಮುರೆಯಾದರಷ್ಟೇ; ಅದರಿಂದ ಹೊಳೆಯುವದೇನಂದರೆ–ಲಿಂಗಾಂಗಿಯ ಧರ್ಮವನ್ನು ನಿರ್ವಿಕಾರದ ಯೋಗದಲ್ಲಿ ಪರಿಪಾಲಿಸುವ ಧರ್ಮ ಸರಕಾರವು ಆದ ಹೊರತು, ಇದರ ಕಲ್ಯಾಣಮಯವಾದ ಪ್ರಯೋಗಗಳನ್ನು ಆಚರಿಸಿ, ಧರ್ಮದನ್ನು ಕಾಯ್ದುಕೊಳ್ಳಲು ಶಕ್ಯವಿಲ್ಲವು. ಪರಮಾತ್ಮನು ಮಾನವ ಸೃಷ್ಟಿಯನ್ನು ನಿರ್ಮಿಸಿದುದರ ಮಹತ್ವವನರಿಯದೆ, ಸುಕೃತದಿಂದ ಹೊಂದಿದ ಅಧಿಕಾರ ಸಿರಿ ಸಂಪತ್ತುಗಳ ಮೂಲಕ ತಾರತಮ್ಯಗಳನ್ನು ಮಾಡಿ, ಮೇಲಿನ ದರ್ಜೆಯವರು ಕೆಳಗಿನವರನ್ನು ವಂಶಪರಂಪರವಾಗಿ ಅಲ್ಲಲ್ಲಿಯೇ ಬಿಗಿದು, ಎಷ್ಟೂ ತಲೆಯೆತ್ತಿ ಉಲುಕ್ಯಾಡದಂತೆ ಆಳುವದು, ಈಶನಿಚ್ಛೆಯ ವಿರುದ್ಧವಾದದ್ದು. ಅನಾದಿ ಸಂಸಿದ್ಧವಾಗಿ ಪರಮಾತ್ಮನಲ್ಲಿದ್ದ ನಿಜಧರ್ಮಸಾಮ್ರಾಜ್ಯದಲ್ಲಿ ಇಂತಹ ಅನ್ಯಾಯದ ರಾಜ್ಯಗಳು ಬಹಳ ದಿವಸ ತಡೆಯಲಾರವು. ಎಲ್ಲಿಯವರೆಗೆ ಎಲ್ಲೆಲ್ಲಿಯ ಸರಕಾರಗಳೆಲ್ಲ ಸೃಷ್ಟಿಯ ಸಹಜ ಧರ್ಮಸಮರಸಯೋಗದಲ್ಲಿ ಲಿಂಗಕಾಯಳರಾಗಿ ನಿಜಧರ್ಮವನ್ನು ಪರಿಪಾಲಿಸುವ ಧರ್ಮಸರಕಾರಗಳು ಆಗಲಾರವೋ, ಅಲ್ಲಿಯವರೆಗೆ ತೋರಿದ ರಾಜ್ಯಗಳೆಲ್ಲ ಹಾಳಾಗುವವೇ! ಇದಕ್ಕೆ ಸೃಷ್ಟಿಯ ಇತಿಹಾಸವೇ ಸಾಕ್ಷಿ! ನಿಜಧರ್ಮವನ್ನು ಪರಿಪಾಲಿಸುವರಾಜ್ಯವೇ ಸ್ವರಾಜ್ಯವು, ದೇವರಾಜ್ಯವು, ಗುರುರಾಜ್ಯ

ವು, ಅರ್ಥಾತ್ ನಿರ್ವಿಕಾರಸಾಮ್ರಾಜ್ಯವು, ನಿಜಕಲ್ಯಾಣ ಅಥವಾ ಭೂಕೈಲಾಸವು. ಸ್ವರಾಜ್ಯದಲ್ಲಿ ಎಲ್ಲಿಯೂ ಯಾರಿಗೂ ಯಾವಕಾಲಕ್ಕೂ ಯಾವರೀತಿಯಿಂದಲೂ ಅನ್ನ ಅರಿವೆಗಳ ಕೊರತೆಯು ಉಂಟಾಗಲಾರದು. ಪಂಚಮಹಾಪಾತಕಗಳು ಹಣಿಕಿ ಸಹಾ ಹಾಕಲಾರವು ಯಾವಕಾಯಕಕ್ಕೂ ಎಲ್ಲಿಯೂ ಯಾವಕಾಲಕ್ಕೂ ಯಾವರೀತಿಯಿಂದಲೂ ಯಾರಿಂದಲೂ ಬಾಧೆಯು ಬರಲಾರದು. ಸಾರ್ಥವು ನಾಮಶೇಷವಾಗಿ ಲೋಕೆಲ್ಲ ಕೇವಲ ಪರಾರ್ಥಮಯವಾಗುವದು. ಎಲ್ಲರೂ ಒಂದೇ ತಾಯಿತಂದೆಯ ಮಕ್ಕಳಂತೆ ಹಣ್ಣುಮುದ್ದಿಯಾಗಿ ಕೂಡಿದ್ದು ಪರಸ್ಪರರ ಹಿತಸಾಧಕರಾಗಿರುವರು. ಅಭಕ್ಷ್ಯಭಕ್ಷಣ ಅಪೇಯಪಾನಾದಿಗಳ ನೆನವು ಸಹಾ ಉಳಿಯದೆ, ಸೋಡಾ ಚಹಾ ಕಾಫೀ ಹೊಗೆಸೊಪ್ಪು ಮುಂತಾದ ದುಶ್ಚಟಿಗಳೂ ಸಹಾ ಹೇಳ ಹೆಸರಿಲ್ಲವಾಗಿರುವವು. ಎಲ್ಲರೂ ಕಲ್ಯಾಣದ ನಡೆಯಲ್ಲಿ ಧುರಂಧರರೂ ಪ್ರತ್ಯಕ್ಷ ಇಲ್ಲವೆ ಪರೋಕ್ಷರೀತಿಗಳಿಂದ ನಿಜಲಿಂಗದನುಸಂಧಾನದಲ್ಲಿ ಪರವಶರೂ ಆಗಿ, ನಿಜಲಿಂಗಸಾಮರಸ್ಯವನ್ನು ಹೊಂದುವದಕ್ಕಾಗಿಯೇ ನಿಷ್ಠೆಯಿಂದ ಆಚರಿಸುತ್ತಿರುವರು. ಅಂದ ಬಳಿಕ ಅನಾಚಾರಕ್ಕೆ ಆಸ್ಪದವೆಲ್ಲಿ?

ಇಂತಹ ಕಲ್ಯಾಣಮಯ ಸ್ಥಿತಿಯನ್ನು ಉಂಟುಮಾಡಿಕೊಡುವದಕ್ಕಾಗಿ, ವಿಕಾರಮಯ ಸೂತ್ರಾಧಿಕಾರಿಗಳ ಹೃದಯವನ್ನು ನಿಜಧರ್ಮಸರಕಾರದ ಹೃದಯವನ್ನಾಗಮಾಡುವದೇ, ಕಲಿಯುಗದ ರಾಮ (ನಿರ್ವಿಕಾರ) ರಾವಣ (ವಿಕಾರ) ರ ಕದನವಾಗಿರುವದು. ಈ ಕದನಕ್ಕೆ ಸಾಧನ ಸಾಹಿತ್ಯಗಳೆಂದರೆ ಸಂಪು, ಸತ್ಯಾಗ್ರಹ, ಅಸಹಕಾರ, ಬಹಿಷ್ಕಾರ, ಕಾಯದೆಭಂಗ, ಪಿಕೆಟಿಂಗ, ಪರತಾಳ ಇವೇ ಮುಂತಾದವು. ವಿಕಾರಿಗಳು ಅನಂತಕಾಲ ಸಾಧುಣಿಕೆಯಿಂದ ಹರಣಮಾಡಿಕೊಂಡಿದ್ದ, ನಿಜಕಲ್ಯಾಣಕಾರ್ಯಕ್ಕೆ ಕಾರಣವಾದ ಮಾನವನ ಸಹಜವಾದ ಸ್ವತಂತ್ರಶಕ್ತಿಗಳೇ ಗೆದ್ದು ಹೊಂದತಕ್ಕ ಭೂಮಿಸೀಮೆಗಳಾಗಿರುವವು.

ಎಲ್ಲಿಯೂ ಯಾರಿಗೂ ಅನ್ನ ಅರಿವೆಗಳ ಕೊರತೆಯು ಉಂಟಾಗದಂತೆ ಮಾಡಿಕೊಳ್ಳುವ ಸ್ವತಂತ್ರ ಶಕ್ತಿಯನ್ನು ಹೊಂದುವದು, ಮೊದಲು ಗೆದ್ದುಕೊಳ್ಳಬೇಕಾದ ಒಳ್ಳೇ ಆಯಕಟ್ಟಿನ ಸೀಮೆಯಾಗಿರುವದು. ಇದೊಂದನ್ನು ಸ್ವಾಧೀನಪಡಿಸಿಕೊಂಡರೆ, ವೈರಿಗಳ ಪಲ್ಲಣವೇ ಹಾರಿ ಉಳಿದ ಸೀಮೆಗಳು ತಮ್ಮಿಂದ ತಾವೇ ನಿರಾಯಾಸವಾಗಿ ಒಂದರಹಿಂದೊಂದು ಕ್ರಮವಾಗಿ ಹಸ್ತಗತವಾಗುವವು. ಲೋಕದಲ್ಲಿ ಉಪಜೀವನದ ಕಲಹವು ಎಲ್ಲಿಯವರೆಗೋ, ಅಲ್ಲಿಯವರೆಗೆ ಕಲ್ಯಾಣದ ಸುದ್ದಿಯನ್ನು ಕೇಳಬಾರದು. ಈಗಿನ ಯಂತ್ರಶಕ್ತಿಯ ಹಾವಳಿಯಿಂದ ಕ್ರಾಂತಿಯಾಗಿ ಹಾಳಾದ ನಮ್ಮ ಪೂರ್ವದಕಾಯಕಗಳಿಂದಲೇ ನಮ್ಮ ಕಲ್ಯಾಣವಿರುವದು. ಏಕಂದರೆ ಮನುಷ್ಯಮಾತ್ರರಿಗೆಲ್ಲ ಬೇಕಾಗುವ ಅನ್ನಅರಿವೆಗಳನ್ನು ಪೂರಯಿಸುವ ಮುಖ್ಯಕಾಯಕಗಳಾದ ಒಕ್ಕಲತನ ನೇಯಕಾಂಕೆಗಳೂ, ಇವುಗ

ಳಿಗೆ ಸಂಬಂಧಪಟ್ಟ ಕಮ್ಮಾರ, ಕುಂಬಾರ, ಗಾಣಿಗಾರ, ಬಣಗಾರ, ಪಿಂಜಾರ, ಬಡಿಗಾರ ಮುಂತಾದವರ ಎಲ್ಲ ಕಾಯಕಗಳೂ ಲೋಕದ ಜನತೆಯನ್ನೆಲ್ಲ ಒಳಕೊಳ್ಳುವವು. ಆದುದರಿಂದ ಯಾವದೊಂದು ಜನತೆಯಲ್ಲಿ ಯಂತ್ರಗಳ ಆಟವು ಎಷ್ಟೂ ನಡೆಯಗೊಡದಂತೆ ಮಾಡುವದೇ ಸ್ವರಾಜ್ಯದ ಮೊದಲನೆಯ ಮೆಟ್ಟನು ಹೊಂದುವದಾಗಿರುವದು. ಎಂದು ಲೋಕದಲ್ಲಿ ಎಲ್ಲೆಲ್ಲೆಲ್ಲ ಯಂತ್ರಗಳು ಹಾಳಾಗಿ, ಮಾನವಕೋಟಿಯು ಕೇವಲ ಕಾಯಕಗಳಿಂದಲೇ ಉಪಜೀವಿಸುವದಾಗುವದೋ, ಅಂದೇ ಲೋಕವೆಲ್ಲ ಕಲ್ಯಾಣವನ್ನು ಹೊಂದಿದ್ದಾಗಿರುವದು. ಏಕಂದರೆ ಲೋಕದೊಳಗಿನ ಯಂತ್ರಗಳು ಇಲ್ಲದಂತೆ ಮಾಡುವದು ಸರ್ವಸಾಮಾನ್ಯವಾದುದಲ್ಲ; ಜನತೆಯಲ್ಲಿ ವಿಲಾಸವಿಭ್ರಮಗಳ ಮೋಹವು ಕುಂದಿ, ಯಂತ್ರಗಳಿಂದಾದ ಬಟ್ಟೆಗಳನ್ನು ಮುಟ್ಟಲಿಕ್ಕಿಲ್ಲವೆಂಬ ನಿಷ್ಠೆಯು ಅಂಗವಿಸಿ, ನಿಜಧರ್ಮದ ಉದಾತ್ತವಾದ ತತ್ತ್ವಾನುವರ್ತನದ ಕ್ಷೇತ್ರವು ಪ್ರತ್ಯಕ್ಷ ದೃಷ್ಟಿಯಲ್ಲಿ ನೆಟ್ಟು, ಬಲ್ಲಬಲ್ಲಿದರೆಲ್ಲರೂ ಎಂದು ಪರಾರ್ಥಕ್ಕಾಗಿ ಸ್ವಾರ್ಥವನ್ನು ನೀರು ಬಿಟ್ಟು ನೀಡುವ ಅಂತರಂಗದ ಸರ್ವಸಿದ್ಧತೆಯುಳ್ಳವರಾಗುವರೋ, ಅಂದೇ ಲೋಕದೊಳಗಿನ ಯಂತ್ರಗಳೆಲ್ಲ ಮೂಲೆಗುಂಪಾಗುವವು. ಆದರೆ ವಿಕಾರದ ಸರಕಾರವು ಈ ತತ್ತ್ವಾನುವರ್ತನಕ್ಕೆ ಸುಸೂತ್ರವಾಗಿ ಅನುಕೂಲಿಸಿ ಸಾಗಗೊಟ್ಟರಷ್ಟೇ; ಜನತೆಯಲ್ಲಿ ಇದೆಲ್ಲ ಸರ್ವಸಿದ್ಧತೆಯು; ಆದಕಾಗಿಯೇ ಕದನ ಸಾಮುಗ್ರಿಗಳು ಬೇಕಾಗುವವು. ಅದರೊಳಗೆ ಈಗ ನಮ್ಮನ್ನು ಆಳುವ ಪರಕೀಯ ಸರಕಾರವು ತನ್ನ ಕರ್ತವ್ಯವನ್ನು ಮೀರಿ, ವೈಸ್ಯವೃತ್ತಿಯಲ್ಲಿ ಕೈಹಾಕಿ, ಇಡೀ ದೇಶದ ಈ ವೃತ್ತಿಯ ಸತ್ತ್ವವನ್ನೆಲ್ಲ ಸ್ವಕೀಯರು ಆಕ್ರಮಿಸಿಕೊಳ್ಳುವಂತೆ ಪ್ರತ್ಯಕ್ಷವಾಗಿಯೂ ಪರೋಕ್ಷವಾಗಿಯೂ ಸಹಾಯವನ್ನು ಮಾಡುತ್ತ ಬಂದಿರುವದು. ಅದರಿಂದ ದೇಶದೊಳಗಿನ ಉದ್ಯೋಗಗಳ ಕ್ರಾಂತಿಯಾಗಿ ಪ್ರತಿಯೊಂದು ವ್ಯಕ್ತಿಯಲ್ಲಿ ತನ್ನ ಹೊಟ್ಟೆಯನ್ನು ತಾನು ತುಂಬಿಕೊಳ್ಳುವ ಕುವತ್ತು ಸಹ ಉಳಿದಿರುವದಿಲ್ಲ. ಎಂದು ನಮ್ಮ ಕ್ಷತ್ರಿಯರಾಜರು ತಮ್ಮರಾಜಗುರುಗಳ ಮಾತು ಮೀರಿ ಮನಬಂದಂತೆ ವರ್ತಿಸುವವರಾದರೋ, ಅಂದೇ ನಮ್ಮ ಬ್ರಾಹ್ಮಣ್ಯವು ನಮ್ಮ ಕೈಬಿಟ್ಟಿತು; ಎಂದು ಕ್ಷತ್ರಿಯರು ಒಬ್ಬರಿಗೊಬ್ಬರು ಬಡಿದಾಡಿ ಪರಕಿಯ ರಾಜರಿಗೆ ಒಳಸೇರಲು ಅನುವುಕೊಡಹತ್ತಿದರೋ, ಅಂದೇ ನಮ್ಮ ಕ್ಷಾತ್ರತೇಜವು ಕಳೆಗುಂದಿತು. ಎಂದು ಯಾಂತ್ರಿಕ ಶಕ್ತಿಯು ಉದ್ಯೋಗ ಕ್ರಾಂತಿಯನ್ನು ಮಾಡಲಾರಂಭಿಸಿತೋ, ಅಂದೇ ನಮ್ಮ ವೈಶ್ಯವೃತ್ತಿಯ ಸತ್ತ್ವವು ಗುಡಚಾಪಿಯನ್ನು ಕಟ್ಟಿತು. ಈಗ ನಾವು ಯಾರೂ ಬ್ರಾಹ್ಮಣರಲ್ಲ; ಕ್ಷತ್ರಿಯರಲ್ಲ; ವೈಶ್ಯರಲ್ಲ; ಎಲ್ಲರೂ ಶುದ್ರರಾಗಿರುವೆವು. ಇದನ್ನೆಲ್ಲ ಪರ್ಯಾಲೋಚಿಸಿ, ಈ ಹಿಂದೂ ಜನಾಂಗವನ್ನು, ಸಕಲವರ್ಣಗಳನ್ನೂ ತನ್ನಲ್ಲಿ ಸಹಜವಾಗಿ ಒಳಕೊಂಡು, ಅತಿವರ್ಣವೆನಿಸುವ (ವೀರಶೈವಲಿಂಗಾಂಗಿಯ ಸೃಷ್ಟಿಗೆ) ನಿಜಧರ್ಮಭೂಮಿಗೆ ಹೊಡಕೊಂಡು ಹೋದ ಹೊರತು, ಇದರ ಯಾವ

ತರಹದ ಬಿಡುಗಡೆಯು ಇಲ್ಲೆಂಬದನ್ನು ಮಹಾತ್ಮರು ಬಹಳ ದೂರದವರೆಗೆ ಪರ್ಯಾಲೋಚಿಸಿ, ಖಾದಿಯ ವ್ರತವನ್ನು ಸ್ವೀಕರಿಸಿರುವರು. ನಮ್ಮ ಹಿಂದೂ ಮುಂದಾಳುಗಳು ವಿಶ್ವಪ್ರಯತ್ನದಿಂದ ಇಡೀ ಭೂಭಾಗವನ್ನು ಗೆದ್ದು ತಮ್ಮ ಸ್ವಾಧೀನ ಪಡಿಸಿಕೊಂಡರೂ ಕೂಡ, ಮಹಾತ್ಮರು ತಮ್ಮ ದಿವ್ಯಾನುಭವದಿಂದ ಕಂಡುಕೊಂಡ ಈ ಪವಿತ್ರವಾದ ಭೂಮಿಕೆಯಲ್ಲಿ ಕಾಲಿಟ್ಟು ಆಚರಿಸಿದ ಹೊರತು, ಸ್ವರಾಜ್ಯವು ಎಂದೂ ದೊರೆಯಲಾರದು. ಏಕಂದರೆ ಸ್ವರಾಜ್ಯವನ್ನು ಆಳುವ ಪಾತ್ರತೆಯು ಉಂಟಾದ ಹೊರತು, ಯಾವರಾಜ್ಯಗಳೂ ಅವು ಸ್ವತಂತ್ರವಿರಲಿ, ಪರತಂತ್ರವಿರಲಿ ಸ್ವರಾಜ್ಯವಾಗಲಾರವು. ಮಹಾತ್ಮರು ತೋರಿದ ಮಾರ್ಗಾನು ವರ್ತನದಿಂದ ಸ್ವರಾಜ್ಯವೂ, ಸ್ವರಾಜ್ಯವನ್ನು ಪರಿಪಾಲಿಸುವ ಪಾತ್ರತೆಯೂ, ಲಭಿಸುವವಲ್ಲದೆ, ಅದರ ಕೂಡ ನಮ್ಮ ದೇಶವು ಸಹಜವಾಗಿ ನಮ್ಮ ಹಸ್ತಗತವಾದಂತಾಗುವದು. ಇದು ಉತ್ಕ್ರಾಂತಿಯ ತತ್ತ್ವಾನುವರ್ತನದ ಕಾಲವಲ್ಲ; ಅವತಾರಕಾಲಗಳೂ ಮುಗಿದು, ಪರಿಪೂರ್ಣವಾದ ಲಿಂಗವೇ ಪ್ರಕಟವಾಗಿ ಆಳುವ ಕಾಲವಿರುವದು. ಯಾರೂ ತಮ್ಮ ಜಾಣ್ಮೆಯ ಮೇಲಾಟವನ್ನು ತೋರಿಸುವದಿರುವದಿಲ್ಲ; ಗುಜರಾಥದ ಪ್ರಳಯದಲ್ಲಿ, ಟೀಪ್ಸ ನದಿಯ ಮಹಾಪೂರಗಳಲ್ಲಿ, ಸ್ಪೇನದ ಭಯಂಕರವಾದ ಚಳಿಯಲ್ಲಿ, ರಂಗೂನದ ಬಿರುಗಾಳಿಯಲ್ಲಿ, ಬಟೆವಿಯಾದ ಜ್ವಾಲಾಮುಖಿಯ ಅಂಖ್ಯಾತ ಸ್ಫೋಟಗಳಲ್ಲಿ ಲೋಕದವರ ಯಾವ ಜಾಣತನವೂ ಏನು ನಡೆಯುವದಿದೆ; ಅದರಂತೆ ಮಹಾತ್ಮರು ಸ್ವಂತ ಆಚರಣೆಯಿಂದ ಸಾಗಿರುವ ಮಾರ್ಗದಲ್ಲಿ, ನಮ್ಮ ಜಾಣತನದ ಏನೊಂದು ಪೌರುಷವನ್ನು ತೋರಿಸುವದು ಬಿಟ್ಟುಕೊಟ್ಟು, ಚೇಳುಕಡಿದ ಕಳ್ಳನಂತೆ ಸುಮ್ಮನೆ ಬೆನ್ನು ಹತ್ತುವದೊಂದೇ ಕಾರ್ಯವು. ಇದರಿಂದಲೇ ಸಕಲ ಇಷ್ಟಾರ್ಥಗಳು ಸಹಜವಾಗಿ ಒಮ್ಮೆಲೇ ಲಭಿಸುತ್ತಹೋಗುವವು. ಒಂದೊಂದಕ್ಕಾಗಿ ಪ್ರಯತ್ನಿಸುವದು, ಈ ಲೋಕದಲ್ಲಿ ಕುರುಹುಗಳ ರೂಪದಿಂದ ನಡೆದಿರುವ ಪ್ರಭುಶಕ್ತಿಯ ಕಾರ್ಯದ ಮುಂದೆ, ಕಪ್ಪೆಗಳನ್ನು ತೂಗುವ ಅಜ್ಞಾನಿಯ ಆಟದಂತೆ ಆಗುವದು. ಈ ಅವಧಿಯಲ್ಲಿ ಇದೂ ಮುಂದಾಳುಗಳ ಅನುಭವಕ್ಕೆ ಬರಹತ್ತಿ ಮೆಲ್ಲನೆ ಮುಂದಾಳುಗಳು ಮಹಾತ್ಮರ ಬೆನ್ನುಹತ್ತಲು ದೃಷ್ಟಿಯನ್ನು ತಿರುಗಿಸಿರುವರು. ಈ ಮಾತಿಗೆ ಲೋಕದಲ್ಲಿ ಹೆಚ್ಚುತ್ತಿರುವ ಮಹಾತ್ಮರ ಆದರವೇ ಸಾಕ್ಷಿ; ಮಹಾತ್ಮರ ಮಾರ್ಗದಿಂದ ಸಿಡಿಸಿಡಿದು ಹೋಗುವವರ ಹಲ್ಲಣವು ಹಾರಹತ್ತಿರುವದೇ ಸಾಕ್ಷಿ;

ಪ್ರಕಟವಾದ ಲಿಂಗವು ಈಗೊಂದುಸಾರೆ ಮಹಾತ್ಮರ ಇಚ್ಛೆಯಲ್ಲಿ ಲೋಕಹಿತ ಮುಂದಾಳುಗಳೆಲ್ಲ ಒಂದಾಗಿ ಒಟ್ಟುಗೂಡಿನಡೆಯುವಂತೆ; ತನ್ನ ಅವ್ಯಕ್ತ ಶಕ್ತಿಯ ಸಹಾಯದಿಂದ ಮಾಡಿ, ನಿಜಕಲ್ಯಾಣದ ಅನುಭವವನ್ನು ಸ್ವಲ್ಪದರ ಮಟ್ಟಿಗೆ ಆ ಅಲ್ಪಾವಧಿಯಲ್ಲಿ ಮಾಡಿಕೊಟ್ಟಿತಷ್ಟೇ; ಆದರೆ ಅದನ್ನು ಅವರ ಅನಧಿಕಾರದ ಸ್ಥಿತಿಯಲ್ಲಿ ಅವರಿಗೆ ಒಪ್ಪಿಸಲು ಬರುವಹಾಗಿಲ್ಲವಾದುದರಿಂದ ಲಿಂಗವು

ಅವರಿಗೆ ತಮ್ಮ ಅಧಿಕಾರವನ್ನು ತಾವೇ ಹೊಂದಲು, ತನ್ನ ಅವ್ಯಕ್ತವಾದ ಶಕ್ತಿಯ ಪ್ರಯೋಗವನ್ನು ಹಿಂದಕ್ಕೆ ತಕ್ಕೊಂಡಿತಷ್ಟೇ! ಕೂಡಲೆ ಎಂದಿನಂತೆ ಭಿನ್ನ ಭಿನ್ನ ಧ್ಯೇಯದವರಾಗಿ ತಮ್ಮ ತಮ್ಮ ಅನುಯಾಯಿಗಳ ತಂಡದೊಂದಿಗೆ ಮುಂದಾಳುಗಳು, ಮಹಾತ್ಮರ ಮಾರ್ಗದಿಂದ ಸಿಡಿಸಿಡಿದು ಹೋದರು. ಲಿಂಗವು ಹೀಗೆ ಸಡಿಲು ಬಿಟ್ಟುದರ ಕಾರಣವು, ಪ್ರತಿಯೊಂದು ವ್ಯಕ್ತಿಯು ತನ್ನ ಧ್ಯೇಯಾನುವರ್ತನದ ಫಲವನ್ನು ಉಂಡು ಅನುಭವಗೊಂಡ ಹೊರತು, ಅಲ್ಲಿಂದ ತನ್ನ ಕಾಲು ಕೀಳದಾಗಿರುವದು. ಧ್ಯೇಯಗಳು ನಷ್ಟವಾಗಿ ಮಹಾತ್ಮರ ಮಾರ್ಗವೇ ನಿಜವಾದುದು; ಅದರ ಹೊರತು ನಮಗೆ ಗತಿಯೇ ಇಲ್ಲೆಂಬ ಭಾವವು ಬಿಂಬಿಸಿ ಏಕಧ್ಯೇಯದಿಂದ ಪುನಃ ನಡೆಯಲಾರಂಭಿಸಿದಂದಿನಿಂದಲೇ ನಮ್ಮ ಹಿಂದುಸ್ತಾನದಲ್ಲಿ ನಿಜಕಲ್ಯಾ ಕಟ್ಟಲಾರಂಭಿಸುವದು. ಈಗ ಅದೂ ಸುರು ಆಗಿದೆ. ಇದಕ್ಕೆ ಬಾರಡೋಲಿಯ ಸತ್ಯಾಗ್ರಹದ ಕದನವೇ ಸಾಕ್ಷಿ! ಆದರೂ ಖಾದಿಯ ವಿಷಯದಲ್ಲಿ ಅಷ್ಟೊಂದು ಸಿಥಿಲತೆಯು ಉಂಟಾದಂತೆ ತೋರುವದಿಲ್ಲ; ಈ ವಿಷಯವಾಗಿ ಮುಂದಾಳುಗಳಲ್ಲಿ ಭಿನ್ನಾಭಿಪ್ರಾಯವಿರದಿದ್ದರೂ, ಈಗಿನ ಪರಿಸ್ಥಿತಿಯಲ್ಲಿ ಅಶಕ್ಯವೆಂದು ಸ್ವಲ್ಪ ಔದಾಸೀನ್ಯವೃತ್ತಿಯಲ್ಲಿ ಕೆಲವರು ಉಳಿದುಕೊಂಡಿರುವರು. ಆದರೂ ಮಹಾತ್ಮರ ವಿಶೇಷ ಪ್ರಯತ್ನದಿಂದ ತಕ್ಕಮಟ್ಟಿಗೆ ಖಾದಿಯ ಪ್ರಸಾರವು ಬೆಳೆದಿರುವದೇ ಹೊರತು, ಎಷ್ಟೂ ಕುಂದಿರುವದಿಲ್ಲ.

ಅವತಾರಗಳ ಸ್ಥಿತಿಗೂ, ಪ್ರಕಟವಾಗಿ ಲೋಕ ತುಂಬಾ ವ್ಯಾಪಿಸಿ ಸೃಷ್ಟಿಯ ಸ್ವಾಭಾವಿಕ ಧರ್ಮದಲ್ಲಿ ತೀವ್ರಗತಿಯಿಂದ ಲಿಂಗವು ಆಡುತ್ತಿರುವ ಲೀಲೆಗೂ ಭೂಮ್ಯಾಕಾಶದಷ್ಟು ಅಭ್ಯಂತರವಿರುವದು. ಆದುದರಿಂದ ಇದು ಸಾಮಾನ್ಯರಿಗೆ ಹೊಳೆಯದ ಹಾಗು ಒಪ್ಪಿಕೊಳ್ಳದ ಸಂಗತಿಯಾಗಿರುವದು. ಕಾರಣ ಲೋಕದಲ್ಲಿ ಒಂದೆರಡು ಪಟ್ಟಗಳಿಂದ ಜರಗುತ್ತ ಬಂದಿರುವ, ಕಾಣಬರುವ ಸಂಗತಿಗಳನ್ನು ಯಾಥಾತಥ್ಯವಾಗಿ ಸಂಗ್ರಹಿಸಿ ಮುಂದಿಡಬೇಕಾಗಿ ಬಂತು. ಇವುಗಳ ಯೋಗದಿಂದ ಈಗ ಲೋಕದಲ್ಲಿ, ಅದರೊಳಗೆ ನಮ್ಮ ಹಿಂದುಸ್ತಾನದಲ್ಲಿ ವ್ಯಕ್ತಾವ್ಯಕ್ತವಾಗಿ ನಡೆದಿರುವ ಕಾರ್ಯಗಳನ್ನು ನಂಬಿ ನಮ್ಮ ವೀರಶೈವ ಭಕ್ತ ಬಾಂಧವರು ಮುಂದಿನಕಾರ್ಯಕ್ಕೆ ಪ್ರವರ್ತಕರಾಗತಕ್ಕದ್ದು. ಕೆಲವೊಂದು ಅವಧಿಯವರೆಗೆ ಅಷ್ಟೊಂದು ಭರದಿಂದ ಕಾರ್ಯಗಳು ನಡೆದಿಲ್ಲವೆಂದು ಕಂಡಾಗ್ಯೂ, ಅವ್ಯಕ್ತವಾದ ಲಿಂಗಕಾರ್ಯವು ಎಷ್ಟೂ ನಿಲ್ಲದೆ, ಗೊಬ್ಬರದೊಳಗಿನ ಬೆಂಕಿಯಂತೆ ಒಳಗಿಂದೊಳಗೆ ತುಂಬಾ ಹೊತ್ತುತ್ತಿರುವದು. ತನ್ನದೊಂದು ಹದದ ಕಾಲವು ಬರಲೊಡನೆ ಒಮ್ಮೆಲೆ ಭಗ್ಗೆಂದು ಎದ್ದು ವಿಚಿತ್ರಕಾರ್ಯವನ್ನು ಒಂದು ಕ್ಷಣದಲ್ಲಿ ಮಾಡಿಬಿಡುವದೆಂಬದರಲ್ಲಿ ಎಳ್ಳಷ್ಟೂ ಸಂಶಯವಿಲ್ಲ! ಸಾಲೆಯಲ್ಲಿ ಮಾಸ್ತರನು ತಿಳಿಸಿಕೊಟ್ಟ ಪಾಠವನ್ನು ಮನೆಯಲ್ಲಿ ಮಾಡತರಲು ಬಿಟ್ಟಂತಹ ಸ್ಥಿತಿಯಿರುವ

ದು. ಮಕ್ಕಳು ಪ್ರತ್ಯಕ್ಷ ಸಾಲೆಯುಮನೆಯಲ್ಲಿರದಿದ್ದರೂ, ಗೃಹಪಾಠದ ಸಮಯದಲ್ಲಿ ನಿಜವಾಗಿ ಸಾಲೆಯಲ್ಲಿದ್ದುದರ ಪರಿಣಾಮವನ್ನು ಹೊಂದುತ್ತಿರುವದರಿಂದ, ಅವರ ಕಲಿಯುವ ಕಾರ್ಯವು ಅವರು ಎಲ್ಲಿ ಇದ್ದರೂ ಒಂದೇಸವನೆ ನಡೆದಿರುವದೆಂದು ಭಾವಿಸುವೆವಷ್ಟೇ! ಅದೇ ಮೆರಿಗೆ ಲೋಕಹಿತ ಮುಂದಾಳುಗಳಿಗೆ ಒಮ್ಮೆ ಪ್ರತ್ಯಕ್ಷ ನಡೆಯಿಂದ ಕಲಿಸಿತೋರಿಸಿದ ಪಾಠವನ್ನು ಕಲಿತುಕೊಳ್ಳಲು ಲಿಂಗವು ಬಿಟ್ಟು, ಅಂತರಂಗದಲ್ಲಿ ಅವ್ಯಕ್ತವಾಗಿ ತನ್ನ ಕಾರ್ಯವನ್ನು ನಡಿಸಿರುವದು. ಅದರಿಂದ ಕಾರ್ಯಗಳು ಅವ್ಯಕ್ತವಾಗಿ ಹೆಚ್ಚು ಪ್ರಮಾಣದಿಂದ ನಡೆದಿರುವವೆಂದು ನಿಸ್ಸಂದೇಹವಾಗಿ ಭಾವಿಸತಕ್ಕದ್ದು. ಈ ಮಾತಿಗೆ ಮೊನ್ನೆ ಫೇಬ್ರುವರಿ ೩ ನೆಯ ತಾರೀಖಿನ ದಿವಸ, ಸಾಯಮನ್ ಕಮಿಶನ್ನದ ಬಹಿಷ್ಕಾರಾರ್ಥವಾಗಿ ಇಡಿ ಹಿಂದುಸ್ಥಾನವು ಕೇವಲ ಶಾಂತಿಮಯ ಪ್ರಯೋಗದಿಂದ ಹರತಾಳವನ್ನಾಚರಿಸಿ ಯಶಸ್ವಿಯಾದುದೇ ಸಾಕ್ಷಿ! ಮತ್ತು ಅದರಲ್ಲಿ ಲಿಂಗಶಕ್ತಿಯ ಸಹಾಯವು ಸಂಪೂರ್ಣವಾಗಿತ್ತು. ಈ ಮಾತಿಗೆ ಆಹೊತ್ತು ಹಿಂದುಸ್ಥಾನದ ತುಂಬಾ ಮೋಡಗವಿದು ಮಳೆಗರೆದುದೇ ಸಾಕ್ಷಿ! ಒಂದೊಂದು ಕಡೆಗೆ ಅತಿವೃಷ್ಟಿಯಾಗಿ ಹಳ್ಳ ಹೊಳೆಗಳ ಪೂರಬಂದು ರೇಲ್ವೆಯ ಮಾರ್ಗ ಕಟ್ಟಾಗಿ, ಕೆಲಕೆಲವುಕಡೆಗೆ ಪೋಷ್ಟಿನ ಕಾರ್ಯಕ್ಕೆ ವಿಘ್ನತೆಯುಂಟಾದುದೇ ಸಾಕ್ಷಿ; ಕಿನ್ನರಿಯ ಬ್ರಹ್ಮಯ್ಯನ ಹೊಳೆಯು ಮೇರೆದಪ್ಪಿ ತುಂಬಿ ಬಂದುದರಿಂದ ಕೆಲವು ಉಳವಿಯ ಜಾತ್ರೆಯ ಬಂಡಿಗಳು ಹಿಂದಿರುಗಿದುದೇ ಸಾಕ್ಷಿ; ಬಾರಡೋಲಿಯ ತಾಲೂಕಿನ ಜನರು ಶಾಂತಿಮಯ ಸತ್ಯಾಗ್ರಹವನ್ನು ಆಚರಿಸಿ ಜಯಹೊಂದಿದ್ದೇ ಸಾಕ್ಷಿ;

ಖಾದಿಯನ್ನೇ ಬಳಿಸುವದೆಂದರೆ ಪರಕೀಯ ಸರಕಾರದ ಸ್ವಕೀಯರು ಅಪಹರಿಸಿದ ನಮ್ಮ ದೇಶದ ವೈಶ್ಯವೃತ್ತಿಯ ಸತ್ತ್ವವನ್ನು ತಿರುಗಿ ಹೊಂದುವದಾಗಿರುವದು. ಇನ್ನು ಕೆಲವರು ಪರದೇಶದ ಬಟ್ಟೆಗಳಿಗೆ ಬಹಿಷ್ಕಾರವನ್ನಾಚರಿಸುವದರಿಂದ ಈ ಮಾತು ಸಿದ್ಧಿಸುವದಿಲ್ಲೇನೆಂದು ವಾದಿಸಿ, ದೇಶಿಯ ಯಾಂತ್ರಿಕ ಬಟ್ಟೆಗಳಿಗೆ ಉತ್ತೇಜನಕೊಡುವವರಾಗಿರುವರು. ಇವರಿಗೆ ಸ್ವರಾಜ್ಯದ ಯಥಾರ್ಥವಾದ ಸ್ವರೂಪವು ಗೊತ್ತಾಗಿದ್ದರೆ ಇಂತಹ ವಿಚಾರಗಳಿಗೆ ಇವರಲ್ಲಿ ಅನುವೇ ಇರುತ್ತಿರಲಿಲ್ಲ; ಈ ಉಪಜೀವನದ ಕಲಹದಿಂದ ಬೆಂದು ಹಣ್ಣಾಗಿರುವ ಲೋಕಕ್ಕೆ ದುಡ್ಡೇ ಬಾಹ್ಯಪ್ರಾಣವಾಗಿರುವದರಿಂದ ಆರ್ಥಿಕ ದೃಷ್ಟಿಯಿಂದ ವೈಸ್ಯವೃತ್ತಿಯ ಸತ್ತ್ವವ ಹೊಂದುವದಾಗಿರುವವೆಂಬದನ್ನೇ ಮುಂದೆಮಾಡಿರುವರು. ಕೇವಲ ಸ್ವರಾಜ್ಯದೃಷ್ಟಿಯಿಂದ ಮುಂದೆಮಾಡಿದುದಲ್ಲ; ಸ್ವರಾಜ್ಯದೃಷ್ಟಿಯಿಂದ ಮುಂದೆ ಮಾಡತಕ್ಕ ಮುಖ್ಯವಾದ ಸಂಗತಿಯು ಖಾದಿಯ ಬಳಿಕೆಯಿಂದ ಅನುಭವಗೊಳ್ಳುತ್ತ ಅರಿತುಕೊಳ್ಳುವದಾಗಿರುವದು. ಆರ್ಥಿಕದೃಷ್ಟಿಯಿಂದ ಹೇಳಿದ ಸಂಗತಿಯನ್ನು ಅಷ್ಟೇ ಸ್ವಾಧೀನ ಪಡಿಸಿಕೊಂಬುವದಾದರೆ, ನಮ್ಮ ಸರ್ವ ಸತ್ವಗಳನ್ನು ಅಪಹರಿಸಿಕೊಂಡು ಕೇವಲ ದಾಸ್ಯವೃತ್ತಿಯ ಶೂದ್ರರನ್ನಾಗಮಾಡಿದ ಇಂಗ್ಲಂಡವು ಕೈನೂಲಿನ

ಕೈಮುಗ್ಗದ ಖಾದಿಯ ಬಟ್ಟೆಗಳನ್ನು ಬಳಿಸುವದು ಅಗತ್ಯವಿಲ್ಲೆಂದು ಧ್ವನಿತವಾಗುವದು. ಈ ಮಾತು ಲೋಕಕಲ್ಯಾಣದ ವ್ಯಾಪಕದೃಷ್ಟಿಯಿಂದ ಎಷ್ಟೂ ಪ್ರಾಧಾನ್ಯವಾದುದಲ್ಲ; ಇಂಗ್ಲಂಡವು ಅಷ್ಟೇ ಏಕೆ ಇಡೀ ಲೋಕವು ಈ ವ್ರತವನ್ನು ಆಚರಿಸಿದ ಹೊರತು, ಅದಕ್ಕೆ ಸ್ವರಾಜ್ಯವು ಎಂದೂ ದೊರೆಯಲಾರದು. ಉಪಜೀವನದ ಕಲಹವು ಮಿತಿಮೀರಿ ಬೆಳೆದು ನಾನಾವಿಕಾರಗಳಿಂದ ಮತ್ತವಾದ ಜಗತ್ತನ್ನು ಒಳಹೊರಗೂ ಕೂಡಿಯೇ ಸುಧಾರಿಸಬೇಕಾಗಿರುವದು. ಹೊರಗೆ ಅನ್ನ ಅರಿವೆಗಳ ಪೂರಯಿಕೆ ಮಾಡಿಕೊಡಬೇಕಾಗಿದೆ. ಆ ಸಾಧನದಲ್ಲಿಯೇ ಅಂತಃಕರಣಗಳನ್ನು ತಿದ್ದಬೇಕಾಗಿದೆ. ಇವೆರಡೂ ಕಾರ್ಯಗಳು ಒಮ್ಮೆಲೇ ಒಂದೇ ಯಾವಕ್ರಿಯೆಯಿಂದ ಸಾಧಿಸುವವೆಂದರೆ ಶುದ್ಧವಾದ ಖಾದಿಯ ಬಳಿಕೆಯಿಂದ. ಇವುಗಳಲ್ಲಿ ಒಂದನ್ನು ಸಾಧಿಸಿ ಉಳಿದುದನು ಹಿಂದಿನಿಂದ ಸಾಧಿಸೋಣವೆಂದರೆ ಅದಾಗದು. ಜೀವರಿಗೆ ಹೊಟ್ಟೆತುಂಬ ಅನ್ನಾನೀರು ದೊರೆಯಹತ್ತಿತೆಂದರೆ ಅಗಲೆ ಸೊಕ್ಕಿಗೆ ಬಂದುಬಿಡುವವು. ಈ ಸ್ಥಿತಿಯಲ್ಲಿ ಅಂತಃಕರಣಗಳನ್ನು ತಿದ್ದುವದು ಕಷ್ಟ; ಮೊದಲು ಅಂತಃಕರಣವನ್ನು ತಿದ್ದಿ ಮುಂದಿನ ಇಷ್ಟವನ್ನು ಹಿಂದಿನಿಂದ ಸಾಧಿಸೋಣವೆಂದರೆ ಅದೂ ಆಗದು. ಅನ್ನ ಅರಿವೆಯ ಸದ್ದಿಲ್ಲದೆ ಬರೆ ಜೊಳ್ಳು ಮಾತಿಗೆ ಯಾರು ನಮ್ಮ ಬೆನ್ನುಹತ್ತಲಾರರು. ಈ ಖಾದಿಯ ಬಳಿಕೆಯಲ್ಲಿ ಎರಡೂ ಧ್ಯೆಯಗಳು ಒಂದೇ ಕಾಲಕ್ಕೆ ಸುಧಾರಿಸುವವು. ಬಹಳ ಹೇಳುವದರ ಸಾರಾಂಶವು ಇಷ್ಟೇ, ಕಲ್ಯಾಣಮಯವಾದ ನಿಜಧರ್ಮಾನುವರ್ತನದ ಮೆಟ್ಟಿಗೆ ಲೋಕವನ್ನೇ ಹೊಡೆದೊಯ್ಯುವ ಯಾವದೊಂದು ಸುಲಭವೂ ಅತಿ ತೀವ್ರವಾಗಿ ಆ ಭೂಮಿಕೆಯನ್ನು ಸಿದ್ಧಪಡಿಸುವದೂ ಆದ ಯಾವದೋಂದು ಉಪಾಯವು ಇರುತ್ತಿದ್ದರೆ, ಅದು ಶುದ್ಧಖಾದಿಯ ಬಳಿಸೋಣವಾಗಿರುವದು.

ಲಿಂಗಾಂಗಿಯ ಧರ್ಮದ ಉದಾತ್ತವಾದ ತತ್ತ್ವದೃಷ್ಟಿಯಿಂದ ಶ್ರೀಮದ್ಬಸವಣ್ಣನು ಹಾಕಿಕೊಟ್ಟ ಕಾಯಕಗಳ ಕಟ್ಟುಗಳನ್ನು ಇಲ್ಲಿ ಪರ್ಯಾಲೋಚಿಸಿದರೆ ಅವು ಎಷ್ಟು ಮಹತ್ವದವೂ ಪರಿಪೂರ್ಣವಾದವೂ ಆಗಿರುವವೆಂಬುದು ತಾನೆ ವ್ಯಕ್ತವಾಗುವದು. ಲಿಂಗಧರಿಸಿದವರೆಲ್ಲರೂ ಕಾಯಕದಿಂದಲೇ ಗುರುಲಿಂಗಜಂಗಮದ ಧಾಸೋಹದಲ್ಲಿರಬೇಕೆಂದು ಹೇಳಿದುದರ ವ್ಯಾಪಕ ದೃಷ್ಟಿಯನ್ನು ನೋಡಿರಿ.

ಲಿಂಗವಾಗಿ ಲಿಂಗದಲ್ಲಿ ಬೆರೆಯುವದಕ್ಕಾಗಿಯೇ ಮಾನವ ಸೃಷ್ಟಿಯ ಅವಶ್ಯಕತೆಯಿರುವದಷ್ಟೇ! ಅಂದಮೇಲೆ ಒಂದು ಅರ್ಧನಿಮಿಷವಾದರೂ ಅಗಲದೆ, ಲಿಂಗಸಂಗದಲ್ಲಿಯೇ ಬೆರೆತು ಸಕಲವ್ಯವಹಾರದಲ್ಲಿರಬೇಕಾಯಿತು. ಜನತೆಯಲ್ಲಿ ಯಾರೂ ಎಂದೂ ಯಾವರೀತಿಯಿಂದಲೂ ಉದ್ಯೋಗ ಭ್ರಾಂತಿಯನ್ನು ಮಾಡಲಿಕ್ಕೆ ಬಂದಿರಬಾರದು, ಇಂತಹ ಪರಿಸ್ಥಿತಿಯನ್ನು ಸಹಜವಾಗಿ ಕಾಯ್ದುಕೊಳ್ಳಲಿಕ್ಕೆ ಬರುವ ಧರ್ಮದ ಕಟ್ಟುಗಳನ್ನು ಕಾಯಕಗಳ ವಿಷಯವಾಗಿ ಮಾಡಬೇಕಾ

ಯಿತು. ಪ್ರತಿದಿನದ ಪ್ರತಿಯೊಂದು ವ್ಯಕ್ತಿಯ ಕಾಯಕಗಳಿಂದ ಉಂಟಾದ ಸರ ಕುಗಳೆಲ್ಲವೂ ಆ ಹೊತ್ತೇ ಮಾರಿ ಹಾಗವು ಕೈಗೆಹತ್ತಬೇಕಾದರೆ, ಅವು ಅವ್ಯ, ಗರಜಿನ ಒಡವೆಗಳಾಗಿರಲಿಕ್ಕೆ ಬೇಕು. ಉಪಜೀವನಕ್ಕೆ ಅನವಶ್ಯವೂ ವಿಲಾಸ ವಿಭ್ರಮಗಳಿಗೆ ಕಾರಣವೂ ಆದ ಒಡವೆಗಳನ್ನು ಎಷ್ಟೂ ಹುಟ್ಟಿಸಬಾರದಾಯಿತು' ಮತ್ತು ಭಕ್ತರು ಹೊರಮುಖರಾಗಿ ಅಂತಹ ವಿಲಾಸವಿಭ್ರಮಗಳಿಗೆ ಕಾರಣವಾದ ಒಡವೆಗಳಿಗೆ ಮೋಹಿಸದಂತೆ ಕೇವಲ ಲಿಂಗದಲ್ಲಿಯೇ ಅಂತರ್ಮುಖವಾಗಿರುವದ ನ್ನು ಕಾಯ್ದುಕೊಳ್ಳಬೇಕಾಯಿತು. ಅಲ್ಲದೆ ಆ ಹೊತ್ತಿನ ಕಾಯಕಗಳಿಂದ ಹುಟ್ಟಿ ದ ಒಡವೆಗಳು ಜನತೆಯ ಗರಜಿಗೆ ಕೊರತೆಯಾಗಬಾರದಾಯಿತು. ಅದಕಾಗಿ ಎಲ್ಲರೂ ಕಾಯಕಗಳಲ್ಲಿ ತೊಡಕಿಕೊಂಡೇ ಇರಬೇಕಾಯಿತು. ಯಾವ ಕಾಯ ಕಕ್ಕೂ ಉಪಯೋಗಬೀಳದ ಹೀನಾಂಗರಹೊರತು, ಯಾರೂ ಬಿಕ್ಕೆಯನ್ನು ಬೇ ಡಬಾರದೆಂಬ ಕಟ್ಟನ್ನು ಈ ಧ್ಯೇಯವು ಸಹಜವಾಗಿ ಸಾಧಿಸಲು ಯೋಜಿಸಬೇ ಕಾಯಿತು. ನಿಜಲಿಂಗದ ನಿಜಾನುವರ್ತನದಲ್ಲಿ ತೊಡಗಿದ ಜನಾಂಗಕ್ಕೆ ಯಾವ ರೀತಿಯಿಂದಲೂ ಯಾವಕಾಲಕ್ಕೂ ಯಾವ ಒಡವೆಯಿಂದಲೂ ಕೊರತೆಯು ಉಂಟಾಗದಂತೆ ಎಲ್ಲ ಕಾಯಕದವರನ್ನು ಒಳಕೊಳ್ಳಬೇಕಾಯಿತು. ಮತ್ತು ಕಾಯಕಗಳ ದೃಷ್ಟಿಯಿಂದ ಲೋಕದಲ್ಲುಂಟಾದ ಜಾತಿಯತಾರತಮ್ಯವನ್ನು ಮುರಿ ದು ಸಂಕರವಾಗದಂತೆ ಅವರೆಲ್ಲರನ್ನೂ ಏಕಮಾಡಬೇಕಾಯಿತು. ಅಲ್ಲದೆ ಇವರಿಂದ ಹುಟ್ಟಿದ ಒಡವೆಗಳು ಖರ್ಚಾಗದೆ ಉಳಿಯದಂತೆ ಕಾಯ್ದುಕೊಳ್ಳಬೇಕಾಯಿತು. ಇದಕಾಗಿ ನಿಜಧರ್ಮದ ಅನುವರ್ತನದಲ್ಲಿರದೆ ಕಟ್ಟು ಹರಿದು ಮನಬಂದಹಾಗೆ ಹರಿದಾಡುವ ವಿಕಾರಿಗಳಾದ ಜನರಿಂದ ಹುಟ್ಟಿದ ಸರಕುಗಳು ಒಳಸೇರಿ ಯಾರ ಬಳಿಕೆಯಲ್ಲಿಯೂ ಬರದಂತೆ ಬಹಿಷ್ಕಾರ ವ್ರತವನ್ನು ಆಚರಿಸಬೇಕಾಯಿತು. ಈ ವ್ರತವೇ ಭವಿಯಿಂದ ಹುಟ್ಟಿದ ಒಡವೆಗಳನ್ನು ಬಳಸಬಾರದೆಂಬ ಕಟ್ಟಿಗೆ ಕಾರಣ ವಾಯಿತು ನಾಳಿನ ಕೆಲಸವನ್ನು ಇಂದೇ ಮಾಡಿ ಗಳಿಕೆಯ ಸಂಗ್ರಹದ ಕಡೆಗೆ ಲಕ್ಷವು ತಿರುಗಿ ಲಿಂಗಾನುಸಂಧಾನಕ್ಕೆ ಚ್ಯುತಿಯು ಉಂಟಾಗಬಾರದೆಂದು "ಇಂ ದಿನ ಕಾಯಕದಿಂದ ಬಂದ ಹಾಗನ್ನು ಇಂದೇ ಗುರುಲಿಂಗಜಂಗಮದ ದಾಸೋ ಹಕ್ಕೆ ಮಾಡಬೇಕು " ಎಂಬ ಕಟ್ಟನ್ನು ಕಾಯಕಗಳ ವಿಷಯವಾಗಿ ಹಾಕಿಕೊಡ ಬೇಕಾಯಿತು.

ಶ್ರೀಮದ್ಬಸವಣ್ಣನು ಯಾವದೊಂದು ಸಮಾಜವನ್ನು ಲಕ್ಷಿಸದೆ ತನ್ನ ಸಮಾಜವೊಂದೇ ಸುಖಾನುಸಂಧಾನದಲ್ಲಿರಬೇಕೆಂಬ ಆಕುಂಚನದೃಷ್ಟಿಯಿಂದ ಹಾಕಿದ ನಿಯಮಗಳಿವಲ್ಲವು- ಇಡೀ ಲೋಕದ ಜನತೆಯು ಯಾವ ವ್ಯವಸ್ಥೆಯಿಂ ದಿದ್ದರೆ, ಅದರ ಸಾಮಾನ್ಯವಾದ ಸುಖದ ಬಾಳ್ವೆಗೆ ಎಂದೂ ಕೇಡಿಲ್ಲದ ಕಲ್ಯಾಣ ವು ಉಂಟಾಗುವದೋ, ಆ ವ್ಯವಸ್ಥೆಯನ್ನು ತನ್ನ ಲಿಂಗಾನುಭವದ ದಿವ್ಯದೃಷ್ಟಿ ಯಿಂದ ಕಂಡುಕೊಂಡು, ಅದನ್ನೇ ತನ್ನ ಸಮಾಜಕ್ಕೆ ತೋರಿಸಿಕೊಟ್ಟದ್ದಾಗಿಯದ

ದು. ಈ ನಿಯಮವು ಆಕುಂಚನ ದೃಷ್ಟಿಯುಳ್ಳ ಅಪಕ್ವಹೃದಯರಿಗೆ, ಸಣ್ಣದಾದ ಸಮಾಜವು ಬಳಿಸಿ ಪಶುಪಕ್ಷಿಗಳಂತೆ ನಿಶ್ಚಿಂತವಾಗಿರುವದನ್ನೂ, ಈ ಸಮಾಜವನ್ನು ಹೊರತುಪಡಿಸಿ, ಲೋಕವೆಲ್ಲ ನಾನಾ ಕಷ್ಟಗಳಿಂದ ಹರಿದಾಡುತ್ತಿರುವದನ್ನೂ ಕಂಡು, ಸ್ವಾರ್ಥಸಾಧಕವಾದುದೆಂನು ಅನಿಸಬಹುದು ಆದರೆ ಸಮಾಜದ ಒಳಹೊಕ್ಕು ನೋಡಿದರೆ ಅದರ ತಥ್ಯಾಂಶವು ಕಂಡುಬರದೆ ಇರಲಾರದು. ಆದರಿಂದ ಲೋಕವು ಇದರ ಅನುಕರಣವನ್ನು ಮಾಡದಿರುವದರಿಂದಲೇ ಕೆಟ್ಟಿರುವದೇ ಹೊರತು, ಮಾಡುವದರಿಂದ ಯಾವತರದ ದೋಷವೂ ತಟ್ಟಲಾರದೆಂದು ತಟ್ಟನೆ ಹೊಳೆಯುವದು. ಇಂತಹ ಪರಿಸ್ಥಿತಿಯನ್ನು ತಂದುಕೊಂಡಹೊರತು, ಯಾರಿಗೂ ಕಲ್ಯಾಣವಿಲ್ಲವು. ಎಂದು ಇಂತಹ ಪರಿಸ್ಥಿತಿಯನ್ನು ಲೋಕವು ತಂದುಕೊಳ್ಳಲು ಕಂಕಣಬದ್ಧವಾಗುವದೋ, ಅಂದೇ ನಿಜಧರ್ಮವು ಬಳಿಕೆಯಲ್ಲಿ ಬರಲಾರಂಭಿಸುವದು. ಈ ನಿಜಾನುಭವವನ್ನೇ ಕಂಡುಕೊಂಡು ಶ್ರೀಮದ್ಬಸವಣ್ಣನ ಧರ್ಮಪತ್ನಿಯಾದ ನೀಲಲೋಚನೆಯು "ಪಟ್ಟೇವನುಟ್ಟಾರು ಪಟ್ಟೇವ ಹೊದ್ದಾರು ಪಟ್ಟವನಾಳ್ವದೊರೆಗಳು । ಸುವ್ವಿ । ಪಟ್ಟವನಾಳ್ವ ದೊರೆಗಳು ಗೋಣಿಯ ತಟ್ಟೇಲಿ ಕಾಲ ಕಳೆವರು ॥ ಸುವ್ವಿ ॥ ಎಂದು ಹಾಡಿಕೊಂಡಿರುವಳು. ಇದರಿಂದ, ಖಾದಿಯು ವಿಕಾರದ ಸ್ಥಿತಿಯಿಂದ ನಿರ್ವಿಕಾರದ ಭೂಮಿಕೆಗೆ ಒಯ್ಯುವದೂ, ಲೋಕಕಲ್ಯಾಣವನ್ನು ಸಹಜವಾಗಿ ಸಾಧಿಸಿಕೊಟ್ಟು ನಿಜಲಿಂಗಧಾರಣದ ಹದವನ್ನುಂಟುಮಾಡುವದೂ ಆಗಿರುವದೆಂಬ ಮಾತು ಸಿದ್ಧಿಸುವದು. ಆದರೂ ಲೋಕವು ಲಿಂಗಮುಖವಾಗಿ ಲಿಂಗವನ್ನು ಹಿಡಿಯದೆ ಈ ಮೆಟ್ಟಿಗೆ ಬಂದು ವ್ಯವಹರಿಸುವದಾದರೆ ನೂತದ್ದೂ ಹಂಜಿಯಾಗದೆ ಹೋಗಲಾರದು. ಬಹಿರ್ಮುಖವಾದ ಇಂದ್ರಿಯಗಳೇ ಅಂತಃಕರಣಗಳನ್ನು ಲಿಂಗವ್ಯತಿರಿಕ್ತವಾಗಿ ಇನ್ನ್ಯಾವಸಂಗತಿಗಳಲ್ಲಿಯೂ ನಿರ್ವಿಕಾರದ ಯೋಗದಲ್ಲಿ ಬಿಗಿಯಲಾರವು. ಲೋಕವನ್ನು ಕಲ್ಯಾಣಮಯ ಸಂಗತಿಯಲ್ಲಿ ತಂದು ಲಿಂಗವ ಹಿಡಿಸುವಕ್ಕಾಗಿಯೇ ಪ್ರಕಟವಾದ ಲಿಂಗಲೀಲೆಯಿರುವದರಿಂದ ಕಲ್ಯಾಣದ ವ್ಯವಸ್ಥೆಯು ನೆಲೆಗೊಂಡು ಸ್ವರಾಜ್ಯವು ಹಸ್ತಗತವಾಗುವದರೊಳಗಾಗಿ ಸ್ವರಾಜ್ಯವನ್ನು ಪರಿಪಾಲಿಸುವ ಯೋಗ್ಯತೆಯೂ ನಿಜಲಿಂಗವನ್ನು ಧರಿಸುವ ಪಾತ್ರತೆಯೂ ಬಂದೇ ತೀರಬೇಕಾಗುವದು. ಕಾರಣ ಜನತೆಯಲ್ಲಿ ಎಷ್ಟೋ ಮುಂದಾಳುಗಳು ತಮ್ಮ ಧ್ಯೇಯಾನುವರ್ತನದಲ್ಲಿ ಸೋತು ಮಹಾತ್ಮರಕಡೆಗೆ ದೃಷ್ಟಿಯನ್ನು ತಿರುಗಿಸಿದವರಾದಾಗ್ಯೂ, ಮಹಾತ್ಮರು ತೋರುವ ಲಿಂಗವನ್ನು ಧರಿಸಿ ಹಿಡಿಯುವ ಯೋಗ್ಯತೆಯು ಬರುವವರೆಗೆ ಲಿಂಗವು ಇನ್ನೂ ಹದಗೊಳಿಸುವ ಕ್ರಿಯೆಯನ್ನು ಮಾಡಬೇಕಾಗಿದೆ. ಲೋಕದಲ್ಲಿ ಜಾತಿಯ ತೊಡಕು ಬಹಳ; ಈ ಅಭಿಮಾನವು "ಬ್ರಾಹ್ಮಣೋಸ್ಯ ಮುಖಮಾಸೀತ್ ಬಾಹೋರಾಜನ್ಯಕೃತಃ ಇತ್ಯಾದಿ ಯಜ್ಞಪುರುಷನ ಕಲ್ಪಕ ಮೂರ್ತಿಯನ್ನು ಹೇಳುವದಾದ ಈ ಸೂಕ್ತವನ್ನು ನಿಷ್ಪರ್ಯಾಸವಾಗಿ ... ವರ್ಣಗಳ ಉತ್ಪತ್ತಿಯಾ

ಯಿತೆಂದು ಹೇಳಿ, ಅಂದಿನಿಂದ ಲೋಕವು ಹಾಗೆ ನಡೆಯುತ್ತ ಬಂದುದರಿಂದ ನಮ್ಮಾಹಿಂದುಸ್ತಾನದಲ್ಲಿದ್ದಷ್ಟು ಜಾತಿಗಳೂ, ಜಾತ್ಯಾಭಿಮಾನದ ತೊಡಕೂ ಇನ್ನೇಯೂ ಇಲ್ಲ; ತಿಳಿದು ನೋಡಿದರೆ ಹೊರಗೂ ಏನು ಗಂಧವು ಉಳಿದಿರುವದಿಲ್ಲ. ಒಳಗೂ ಉಳಿದಿರುವದಿಲ್ಲ; ಹೊರಗಿನಿಂದ ನೋಡಿದರೆ ಪರಕೀಯ ಸರಕಾರದ ವ್ಯವಸ್ಥೆಯಿಂದ ಎಲ್ಲ ಸತ್ವಗಳು ಹೀರಲ್ಪಟ್ಟು ಬರೆ ದಾಸ್ಯವೃತ್ತಿಯ ಶೂದ್ರತ್ವವು ಒಂದೇ ಉಳಿದುದಾಗಿರುವದು. ಒಳಗಿನಿಂದ ನೋಡಿದರೆ ಉಚ್ಚಜಾತಿಯ ನೀಚಜಾತಿಯ ಹೆಣ್ಣು ಗಂಡುಗಳ ನಡುವೆ ವ್ಯಭಿಚಾರವು ವ್ಯಕ್ತಾವ್ಯಕ್ತರೀತಿಯಿಂದ ಹೆಚ್ಚಾಗಿ ಎಲ್ಲರಕ್ತವೂ ಸಮಗೊಂಡಿರುವದು. ಇಂತಹ ಸ್ಥಿತಿಯಲ್ಲಿ ಜಾತ್ಯಾಭಿಮಾನವ ಹಿಡಿಯುವದು ಕೇವಲ ಮೂರ್ಖತನವೂ, ನಮ್ಮ ಸರ್ವಸ್ವ ಘಾತಕತನವೂ ಆಗಿರುವದು. ಬಳಿಸುವ ಕೂಳು ನೀರಲ್ಲಿಯೂಕೂಡ ಪರಿಶುದ್ಧತ್ವವು ಉಳಿದಿರುವದಿಲ್ಲ; ಆರೋಗ್ಯಶಾಸ್ತ್ರದೃಷ್ಟ್ಯಾ ಅತ್ಯಂತ ಪರಿಶುದ್ಧವಾದ ನೀರು, ನಿಜಧರ್ಮದೃಷ್ಟ್ಯಾ ಸರ್ವ ವಿಕಾರಮಯ ಸಂಗ್ರಹವಾಗಿರುವದು. ಯಾವತೀರ್ಥದಲ್ಲಿಯೂ ಶುದ್ಧತ್ವ ಉಳದಿಲ್ಲ. ಯಾವಕ್ಷೇತ್ರದಲ್ಲಿಯೂ ಉಳಿದಿಲ್ಲ. ಆ ತೀರ್ಥಕ್ಷೇತ್ರಗಳನ್ನು ಪರಿಶುದ್ಧಮಾಡುವ ಸಿದ್ಧ ಆತ್ಮರುಗಳೇ ಸತ್ವವಿಹೀನರಾಗಿ ಮಾನವ ಸೃಷ್ಟಿಯಲ್ಲಿ ತಲೆಯೆತ್ತಿ ಲೋಕಹಿತ ಮುಂದಾಳುಗಳಾಗಿ ಹೆಣಗಾಡುತ್ತಿರುವರು. ನಿಜಲಿಂಗವನ್ನು ಹಿಡಿದು ಆಚರಿಸಿದ ಹೊರತು ಗತಿಯೇ ಉಳಿದಿರುವದಿಲ್ಲ; ಹೇಳಿದರೆ ಕೇಳದ ಲಂಡ ಆತ್ಮರುಗಳು ಹಣ್ಣಾಂಡು ಬೇಗನೆ ಹದಗೊಳ್ಳಲೆಂದು ಲಿಂಗವು ಅಪರಿಚ್ಛೆಯಲ್ಲಿಯೇ ಅನುಗ್ರಹಿಸುತ್ತ ಅವ್ಯಕ್ತವಾಗಿ ಲೀಲೆಯನಾಡಲು ನಿಂತಿರುವದು. ಇದಕ್ಕೆ ಎಷ್ಟೋ ಪಾರ್ಟಿಗಳು ತಲೆದೋರಿ ತಲೆತಾಕಿ ಒಂದರಹಿಂದೊಂದು ಸ್ವರಾಜ್ಯಪಾರ್ಟಿಯಲ್ಲಿ ಲಯಹೊಂದಲಿಕ್ಕೆ ಹತ್ತಿರುವದೇ ಸಾಕ್ಷಿ; ಬ್ರಾಹ್ಮಣರು ಬ್ರಾಹ್ಮಣ್ಯವನ್ನು ಕಳಕೊಂಡಾಗ್ಯೂ, ಲೌಕಿಕ ವಿದ್ಯೆಯಲ್ಲಿ ಮುಂದರಿದು ಬಹುದಿವಸಗಳಿಂದ ರಾಜಕರಣ ಪಟುಗಳಾಗಿರುವದರಿಂದ ಅವರೇ ಈ ಕಾರ್ಯದಲ್ಲಿ ಮುಂದರಿಯಬೇಕಾಗುವದು. ಮತ್ತು ಜಾತಿಯ ತಾರತಮ್ಯದಲ್ಲಿ ಅಗ್ರಗಣ್ಯರಾಗಿರುವದರಿಂದ ಇವರು ಮುಂದಡಿಯನಿಟ್ಟು ಆಚರಿಸಹತ್ತುವದು ತಪ್ಪದೆ ಲೋಕಮಾದರಿಯಾಗುವದು. ಅಲ್ಲದೆ ಪರಿಪೂರ್ಣವಾದ ಲಿಂಗಾಂಗಿಯ ಧರ್ಮಾನುವರ್ತನದ ಪ್ರಯೋಗವು ಬ್ರಾಹ್ಮಣರಲ್ಲಿ ಜನಿಸಿದ ಶ್ರೀಮದ್ಬಸವಣ್ಣನಿಂದಲೇ ಲೋಕದ ಬಳಿಕೆಯಲ್ಲಿ ಬಂದಿರುವದು.

ಲಿಂಗವಾಗಿ ಲಿಂಗದಲ್ಲಿ ಬೆರೆಯುವದಕ್ಕಾಗಿಯೇ ಈ ಮಾನವ ಸೃಷ್ಟಿಯ ಅವಶ್ಯಕತೆಯು ಇರುವದಷ್ಟೇ; ಅಂದಬಳಿಕ ಮಾನವ ಸೃಷ್ಟಿಯಲ್ಲಿ ತಲೆಯೆತ್ತಿದ ಪ್ರತಿಯೊಂದು ವ್ಯಕ್ತಿಯು, ಯಾವತ್ತೂ ಮಾನವ ಸೃಷ್ಟಿಯ ಸರ್ವಸಾಮಾನ್ಯವಾದ ಕಲ್ಯಾಣಕ್ಕಾಗಿ ಹೆಂದಾಡುವ ಅರುಹಿನ ವ್ಯಾಪಾರದಲ್ಲಿಯೇ ವ್ಯವಹಂಸಬೇಕಾಯಿತು; ಅರುಹಿನ ವ್ಯಾಪಾರವು ಕೇವಲ ಲಿಂಗಾನುಸಂಧಾನದಿಂದುಳಿ

ಯುವದಲ್ಲದೆ, ಇನ್ನ್ಯಾತರಿಂದಲೂ ಕೇಳಬಾರದು. ನಿಜಲಿಂಗದ ನಿಲವು, ಅದು ಪ್ರಕಟವಾದ ವ್ಯಕ್ತಿಯು ನಿಜಬೋಧದ ತೆರಹಿಲ್ಲದ ಸಕೀಲಾನುಸಂಧಾನದಲ್ಲಿ ಪರವಶವಾದವರಿಗೆ ನಿಲುಕುವದಲ್ಲದೆ ಇನ್ನ್ಯಾರಿಗೂ ಕೇಳಬಾರದು. ನಿಜಲಿಂಗವು ಪ್ರಕಟವಾದ ವ್ಯಕ್ತಿಯು ಮಹಾತ್ಮರಿಂದ ಪರಿಶೋಧಿಸಲ್ಪಡುವದೇ ಹೊರತು, ಸಾಮಾನ್ಯರಿಂದಾಗದು. ಲೋಕದಲ್ಲಿ ನಿಜಕಲ್ಯಾಣಮಾರ್ಗದಲ್ಲಿ ನಡೆನುಡಿಗಳನ್ನು ಏಕಮಾಡಿ ವ್ಯವಹರಿಸುವವರೇ ಮಹಾತ್ಮರು, ಇಂತಹವರ ಸಂಘಟನೆಯು ಎಲ್ಲಿಯವರೆಗೆ ಉಂಟಾಗಲಾರದೋ. ಅಲ್ಲಿಯವರೆಗೆ ನಿಜಲಿಂಗದಲ್ಲಿ ಭಕ್ತಿಯನು ಪರೋಕ್ಷವಾಗಿಯೇ ಆಚರಿಸಬೇಕಾಗುವದು. ಯಾವ ಶಿವಚೈತನ್ಯವು ಆತ್ಮರಿಗೆ ಅರುವನ್ನುಂಟುಮಾಡಿದೆಯೋ. ಅದು ವ್ಯಕ್ತಾವ್ಯಕ್ತ ರೀತಿಯಿಂದ ತುಂಬಾ ತುಂಬಿರುವದು. ಆದುದರಿಂದ ಲೋಕದ ಮಧ್ಯದಲ್ಲಿ ಕಾರ್ಯರೂಪದಿಂದ ವ್ಯಕ್ತವಾದ ಶಿವಚೈತನ್ಯಕ್ಕೆ ವಿಶ್ವ, ಜ್ಞಾನರೂಪದಿಂದ ವ್ಯಕ್ತವಾದ ಚೈತನ್ಯಕ್ಕೆ ತೈಜಸ್, ಅನುಭವದಿಂದ ವ್ಯಕ್ತವಾದುದಕ್ಕೆ ಪ್ರಾಜ್ಞ ಎಂದು ಬ್ರಹ್ಮದ ಮೂರುರೂಪಗಳನ್ನು ಹೇಳುತ್ತಿರುವರು. ಇವುಗಳೊಳಗಿನ ಜಡತ್ವವನ್ನು ಆತ್ಮಾನಾತ್ಮವಿವೇಕ ದೃಷ್ಟಿಯಿಂದ ತೆಗೆದುನೋಡಲು, ಇವೇ ಗುರುಲಿಂಗಜಂಗಮಸ್ವರೂಪವಾಗಿ ತೋರುವವು. ಕಿಚ್ಚಿನರಾಶಿಯಲ್ಲಿದ್ದ ಗುಣಧರ್ಮವನ್ನು ಕಿಡಿಯಲ್ಲಿಯೂ ಕಾಣುವಂತೆ ಲೋಕದಲ್ಲಿ ಸಾಮಾನ್ಯವಾಗಿ ತೋರುವ ಗುರುಲಿಂಗಜಂಗಮಸ್ವರೂಪವು ವ್ಯಕ್ತಿಯಲ್ಲಿಯೂ ತೋರುವದು. ಅಂಗದೊಳಗಿನ ದೋಷಗಳು ಹಿಂಗಿದ ಹೊರತು, ಆತ್ಮರಿಗೆ ತಮ್ಮ ಗುರುಲಿಂಗಜಂಗಮಸ್ವರೂಪದ ಅನುಭವವಾಗದು. ಯಾರು ಮಹಾತ್ಮರ ಅನುವರ್ತನದಲ್ಲಿ ನಂಬುಗೆಯುಳ್ಳವರಾಗಿ ಅವರು ತೋರಿಸಿಕೊಟ್ಟ ಮಾರ್ಗದಲ್ಲಿ ಅವರ ಪವಿತ್ರವಾದ ಧ್ಯೇಯವನ್ನೇ ಎದುರಿಟ್ಟುಕೊಂಡು, ಅವರನ್ನು ಹಿಂಬಾಲಿಸುವರೋ ಅವರೇ ಪುನಿತರಾಗಿ ಸ್ವರೂಪಾನುಭವದ ಮೆಟ್ಟಿಗೆ ಹಾರುವರು. ಆದರೂ ನಿಜಲಿಂಗವು ಪ್ರಕಟವಾದ ವ್ಯಕ್ತಿಯ ನಿಜಬೋಧೆಯಿಲ್ಲದೆ ನಿಜಲಿಂಗ ಸಾಮರಸ್ಯವಾಗಿ, ನಿಜಲಿಂಗೈಕ್ಯವಾಗದು. ನಮ್ಮ ವೀರಶೈವ ಬಾಂಧವರಲ್ಲಿ ಇವ್ಯೆವ ಲಕ್ಷಣಗಳು ತೋರದಿರುವದರಿಂದ, ತೋರುವ ಲೋಕಹಿತ ಮುಂದಾಳುಗಳಗೇ ನಿಜವೀರಶೈವರೆಂದು ಅನ್ನಬೇಕಾಗಿದೆ. ಕೆಳಗೆ ಅವರ ಪಂಚಾಚಾರ್ಯರ ಪರಾಯಣತೆಯನ್ನು ವಿವರಿಸಿರುವದು ನೋಡಿರಿ.

ಕೇವಲ ಸ್ವಕೀಯರ ಹಿತಕ್ಕಾಗಿಯೋ ನಮ್ಮನ್ನು ಗೆದ್ದು, ತಮ್ಮ ಸೇವೆಗಾಗಿಯೋ ನಮ್ಮನ್ನು ಕಾಯ್ದು ಆಳುತ್ತಿರುವ ಪರಕೀಯ ಸರಕಾರದ ಹೃದಯವನ್ನು ನಿರ್ವಿಕಾರಮಯವನ್ನಾಗಿ ಮಾಡಿ, ನಮ್ಮ ಕಲ್ಯಾಣವನ್ನು ಸಾಧಿಸಿಕೊಳ್ಳುವ ಸ್ವತಂತ್ರತೆಯನ್ನು ಅವರಿಂದ ಹೊಂದಿ, ಅನುಕೂಲಪರಿಸ್ಥಿತಿಯನ್ನುಂಟುಮಾಡಿಕೊಳ್ಳುವದರಲ್ಲಿಯೇ ನಿಜವಾದ ವೀರವೃತ್ತಿಯು. ಈ ಕಲ್ಯಾಣ ಸಾಧಕ ವೀರವೃತ್ತಿಯು ವೀರ

ಕಲ್ಯಾಣಮಾರ್ಗವು. ನಿಜಕಲ್ಯಾಣವು ಶಿವಮಯವಾದುದರಿಂದ ಅದಕ್ಕೆ ಶೈವವೆಂದು ಹೇಳಬಹುದು. ಅಂದಬಳಿಕ ವೀರಕಲ್ಯಾಣಮಾರ್ಗವೇ ವೀರಶೈವಮಾರ್ಗವಾಯಿತು. ಈ ವೀರಶೈವರಿಗೆ ಶಿವಮಯವಾದ ಕಲ್ಯಾಣವೇ ಇಷ್ಟ! ಈ ಇಷ್ಟವು ಮನವೆಂಬ ಶಿವಧಾರದಿಂದ ಯಾವಾಗಲು ಕಣ್ಣಮುಂದೆ ಉಳಿದುದಾಗಿ, ಆ ಇಷ್ಟವನ್ನೇ ಸಾಧಿಸಲು ಏಕನಿಷ್ಠೆಯಿಂದ ತನುಮನಧನಗಳನ್ನು ಸೂರಿಗೊಂಡು ಹಂದಾಡುವವರಾದುದರಿಂದ ಲೋಕದಲ್ಲಿ ಇವರೇ ಗುರುಲಿಂಗಜಂಗಮದ ದಾಸೋಹಿಗಳಾಗಿರುವರು. ನಾವು ಲಿಂಗವ ಧರಿಸಿ ಇಂದಿನವರೆಗೆ ಏನು ಪುರುಷಾರ್ಥವನ್ನು ಮಾಡಿತೋರಿಸಿದೆವು? ಏನು ಇಲ್ಲ; ಅಂದಮೇಲೆ ಅವರು ನಮಗೆ ಕಲ್ಲುಗೊರಳಿನ ಹೇಡಿಶೈವರೆಂದು ಏಕೆ ಅನ್ನಬಾರದು!

ಈ ಲೋಕಹಿತ ಮುಂದಾಳುಗಳು ಆಚರಿಸುತ್ತಿರುವ ವ್ರತವು ಅತ್ಯಂತ ಬಿಗಿಯಾದುದು. ಸರಕಾರ ಮತ್ತು ಪ್ರಜಾ ಇವೆರಡಕ್ಕೂ ಅಲ್ಲದವರಾಗಿ ಕಾರ್ಯಾರಂಭವನ್ನು ಮಾಡಬೇಕಾಗುವದು. ಅದರಿಂದ ಅನಂತ ತೊಂದರೆಗಳನ್ನು ಸಹಿಬೇಕಾಗುವದು. ಬರುವ ತೊಂದರೆಗಳನ್ನೆಲ್ಲ ಶಾಂತಿಯೋಗದಿಂದ ಸಹಿಸಿಕೊಂಡು; ಎರಡೂ ಪಕ್ಷದವರನ್ನು ಮುಂದಕ್ಕೆ ಒಯ್ಯುವದಿರುವದರಿಂದ ಬಲವಾದ ಸತ್ಯಾಗ್ರಹವನ್ನು ಆಚರಿಸಬೇಕಾಗುವದು. ಏಕಂದರೆ ಸ್ವರಾಜ್ಯದಲ್ಲಿ ದೇಹದೇಹಗಳನ್ನು ನಾಶಮಾಡಿ ಏನು ಗೆಲ್ಲುವದಿರುವದಿರುವದಿಲ್ಲ! ನಿರ್ವಿಕಾರದ ಯೋಗದಲ್ಲಿ ಬಲ್ಲಿದರಾದ ಆತ್ಮರು, ತಮ್ಮ ಆತ್ಮಶಕ್ತಿಯ ಯೋಗದಿಂದ ವಿಕಾರಿಗಳಾದ ಅಧಿಕಾರಿಗಳ ತಲೆಯನ್ನು ಬಾಗಿಸಿ ನಿರ್ವಿಕಾರವನ್ನು ಮಾಡುವದಿರುವದು. ಇತ್ತ ಪ್ರಜಾಪಕ್ಷದಲ್ಲಿ ತಮ್ಮನ್ನು ನಂಬಿ ಬೆನ್ನುಹತ್ತಿದ ಆತ್ಮರಿಗೆ, ತಮ್ಮ ಪ್ರತ್ಯಕ್ಷ ಪ್ರಯೋಗದ ಶಿಕ್ಷಣದಿಂದ ಆತ್ಮಬಲವನ್ನುಂಟುಮಾಡುವದಿರುವದು. ಇಂತಹ ಸಹಾಸದ ಕೆಲಸದಲ್ಲಿ ಎದೆಗೊಡುವ ಆತ್ಮರು ಜಡರಲ್ಲ; ತೀರ್ಥ ಕ್ಷೇತ್ರಗಳಲ್ಲಿ ಸೂಕ್ಷ್ಮತನುವಿನಿಂದಿದ್ದುಕೊಂಡು, ವಿಕಾರಿಗಳಿಗೆಲ್ಲ ತಮ್ಮ ಪುಣ್ಯವ ನೀಡಿ ನೀಡಿ ಸತ್ವವಿಹೀನರಾಗಿ ಲಿಂಗವಧರಿಸಿ, ಲಿಂಗಸಮರಸಯೋಗದಿಂದ ಲಿಂಗವಾಗಿ ಲಿಂಗದಲ್ಲಿ ಬೆರೆಯಲು ಮನುಷ್ಯರೂಪದಲ್ಲಿ ತಲೆಯೆತ್ತಿದ ಮಾತ್ರದಿಂದ ನರರಂತೆ ತೋರುವರು. ಇಂತಹ ಬಲ್ಲಿದ ಆತ್ಮರು ಪ್ರತ್ಯಕ್ಷ ಕಲ್ಯಾಣ ಕಟ್ಟಲು ಕಂಕಣಬದ್ಧರಾದುದು ಎಂದೂ ಹುಸಿಯಾಗಲಾರದು.

ಕೋರ್ಟುಕಚೇರಿಗಳು ಬೆಳೆದದ್ದೂ, ತುರಂಗಗಳು ಹೆಚ್ಚಾದದ್ದೂ ಪೋಲಿಸರ ಖಾತೆಯು ಬೆಳೆದದ್ದೂ, ಸಿಂದಿಸೆರೆಮೊದಲಾದವುಗಳ ಗಡಂಗಗಳೂ, ಕಟುಕರ ಅಂಗಡಿಗಳೂ, ಹೆಚ್ಚಾದದ್ದೂ ಸರಕಾರದ ಧರ್ಮವಂತಿಕೆಯನ್ನು ವ್ಯಕ್ತಪಡಿಸುವದಿಲ್ಲ; ಸರಕಾರಿಯ ಕಾಯದೆಗಳು ಸುಳ್ಳುಕರೆಯೆಂದೂ, ಕರಿಯು ಸುಳ್ಳೆಂದೂ ಸಾಧಿಸುವದರಲ್ಲಿ ಪರಿವರ್ತಿಸಲಿಕ್ಕೆ ಹತ್ತಿ ಕಾಯದೆಯ ಪವಿತ್ರತೆಯನ್ನೂ ಕೋರ್ಟುಗಳ ನ್ಯಾಯವಂತಿಕೆಯನ್ನೂ ಹಾಳುಮಾಡಿ, ಜನರಲ್ಲಿ ಸುಳ್ಳು ಅಪ್ರಾಮಾ

ಣಿಕತೆಯನ್ನು ಬೆಳಸಿರುವವು. ನ್ಯಾಯಾಸನಗಳೇ ಅಸತ್ಯಸಂಗತಿಗಳಿಗೆ ಅನುವು ಕೊಡಹತ್ತಿದ ಬಳಿಕ ಸರಕಾರದ ನ್ಯಾಯರಕ್ಷಣೆಯ ಧರ್ಮಕ್ಕೆ ಕುಂದುತಟ್ಟದೆ ಉಳಿಯಲಾರದು. ಮಿತಿಮೀರಿಬೆಳೆದ ಗಡಂಗಗಳೂ, ಕಟುಕರ ಅಂಗಡಿಗಳೂ ಅಧರ್ಮಸೂಚಕ ಕುರುಹುಗಳಾಗಿರುವವು. ಇಂತಹ ಸ್ಥಿತಿಯಲ್ಲಿ ಆಳರಸರ ಹೃದಯವನ್ನು ಬದಲು ಮಾಡುವದೂ, ಪ್ರಜರನ್ನು ಪಂಚಮಹಾಪಾತಕಗಳಿಂದ ದೂರಾಗುವಂತೆಮಾಡುವದೂ ಕಲ್ಯಾಣಸಾಧಕರ ಎರಡನೆಯದಾದ ಮುಖ್ಯಸಾಧನಕಾರ್ಯವಾಗಿರುವದು. ಏಕಂದರೆ ಹೀಗೆ ನಡೆಯುವದದು ಅಧರ್ಮವೆಂದು ತಿಳಿದಾಗ್ಯೂ, ಮೇಲೆ ಅಂತಹದ್ದೊಂದು ಒದರ್ಕೆಯು ಇಲ್ಲದೆ ಆತ್ಮರು ದುಷ್ಟಕಾರ್ಯದಿಂದ ಹಿಂಜರಿಯರು. ಮತ್ತು ಪ್ರಜರೆಲ್ಲರೂ ಹೀಗೆ ನಡಿಯುವರು; ಅದು ಸರಿಯಾದುದ.; ನಾವು ಒತ್ತಾಯವನ್ನು ಮಾಡುವದು ತಪ್ಪಾಗುವದೆಂದು ತಮ್ಮ ಆಳಿಕೆಯನ್ನು ತಿದ್ದಿಕೊಳ್ಳಬೇಕೆಂಬ ಭಾವವು, ಪ್ರಜರಲ್ಲಿ ಆ ನಡೆಯು ವ್ಯೆಯುಂಡ ಹೊರತು, ವಿಕಾರದಿಂದ ಮತ್ತರಾದ ಆಳರಸರುಳ್ಳ ಸರಕಾರದಲ್ಲಿ ಬರಲಾರದು. ಬಂದರೂ ಅಮಲಿನಲ್ಲಿ ತರಲಾರರು. ಇವೆರಡೂ ಒಂದಕ್ಕೊಂದು ಬೀಜವೃಕ್ಷನ್ಯಾಯದಂತೆ ಸಂಬಂಧವಾಗಿರುವದರಿಂದ ಎರಡೂ ಪಕ್ಷದವರಲ್ಲಿ ನೆಲೆಗೊಂಡ ಈ ಅನಿಷ್ಟವನ್ನು ಪರಿಹರಿಸಿ, ಎರಡೂ ಪಕ್ಷಗಳು ಪರಸ್ಪರವಾಗಿ ಒಂದನ್ನೊಂದು ತಿದ್ದಿಕೊಳ್ಳುವ ಹಾಗು ತಿದ್ದುವ ಸಾಮರ್ಥ್ಯವುಳ್ಳವು ಆಗುವವರೆಗೆ ಲೋಕಹಿತಕಾರ್ಯದಲ್ಲಿ ಮುಂದರಿದ ಬಲ್ಲಿದ ಆತ್ಮರು ತಮ್ಮನ್ನು ಅನುಸರಿಸಿ ತಾವಾಗಿಯೇ ಬೆನ್ನುಹತ್ತಿದವರನ್ನಷ್ಟು ಮುಂದೆಮಾಡಿಕೊಂಡು ಸರಕಾರದ ಕೂಡ ನ್ಯಾಯವೂ ಶಾಂತಿಮಯವೂ ಆದ ಸತ್ಯಾಗ್ರಹದ ಕದನವನ್ನು ಹೂಡಬೇಕಾಗುವದು. ಈ ಕದನವು ಸುಮಾರು ಒಂದು ಪಟ್ಟದಿಂದ ಸರಕಾರದ ಕೂಡ ನಡೆದಿರುವದು. ಈ ಅವಧಿಯಲ್ಲಿ ನಮ್ಮ ಹಿಂದೂ ಜನತೆಯಲ್ಲಿ ಹೊಸ ಅಂಗವು (ಲಿಂಗಾಂಗಿಯ ಧರ್ಮಕ್ಕೆ ಯೋಗ್ಯವಾದ ಭೂಮಿಕೆಯು) ಎಷ್ಟೋ ಪಾಲಿನಿಂದ ಉಂಟಾಗಿರುವದು! ಆದರಿಂದ ಜನತೆಯಲ್ಲಿ ಎಷ್ಟೋ ಬಲಬಂದಿರುವದು. ಆಳರಸರ ಹೃದಯವೂ ಆ ಮಟ್ಟಿಗೆ ನಿರ್ವಿಕಾರಮಯವಾಗಿರುವದು.

೧ ಮಧ್ಯಪ್ರಾಂತದ ರಾಷ್ಟ್ರೀಯ ಪಕ್ಷದ ಮೆಂಬರರೆಲ್ಲರೂ ಏಕಕಾಲಕ್ಕೆ ರಾಜೀನಾಮೆಯನ್ನು ಕೊಟ್ಟು ಕಾಯದೆಯ ಕೌನ್ಸಿಲ್ಲದಿಂದೆದ್ದು ಹೋಗಿ, ಕೌನ್ಸಿಲ್ಲವು ಕೆಲವು ದಿವಸ ಬಂದು ಬೀಳುವಂತೆ ಮಾಡಿದುದೇ ಸಾಕ್ಷಿ;

೨ ಬಂಗಾಲದ ಕೌನ್ಸಿಲದಲ್ಲಿ ಮಿನಿಷ್ಟರರಿಗೆ ಒಂದೊಂದುರೂಪಾಯಿ ಪಗಾರ ಕೊಡಬೇಕೆಂದು ಪಾಸುಮಾಡಿದ್ದೇ ಸಾಕ್ಷಿ!

೩ ಮದ್ರಾಸದ ಕೌನ್ಸಿಲದಲ್ಲಿ ಇಷ್ಟು ಅವಧಿಯಲ್ಲಿ ತಮ್ಮ ಭಾಗದೊಳಗಿನ ಗಡಂಗಗಳನ್ನೆಲ್ಲ ತೆಗೆದುಹಾಕಬೇಕೆಂಬ ಠರಾವು ಆದುದೇ ಸಾಕ್ಷಿ!

೪ ದಿಲ್ಲಿಯ ಅಸೆಂಬ್ಲಿಯಲ್ಲಿ ಸಾಯಮನ್ ಕಮಿಶನ್ನದ ಬಹಿಷ್ಕಾರದ ಠರಾವು,

ಕಮಿಶನ್ನದಲ್ಲಿ ವಿಶ್ವಾಸವಿಲ್ಲೆಂಬ ಠರಾವು, ಕಮಿಶನ್ನದ ಖರ್ಚುವೆಚ್ಚಕ್ಕಾಗಿ ಹಣಕೊಡುವದಿಲ್ಲೆಂಬ ಠರಾವು, ಲಷ್ಕರಖಾತೆಯ ಖರ್ಚಿಗಾಗಿ ಒಂದು ರೂಪಾಯಿ ಬಜೆಟ್ಟಿನ ಠರಾವು, ಮುಂತಾದವುಗಳು ಪಾಸಾದುದೇ ಸಾಕ್ಷಿ! ದೇಶಭಕ್ತ ಲಾಲಾ ಲಜಪತರಾಯ ಎಮ್.ಎಲ್. ಎ. ಇವರು ಅಸೆಂಬ್ಲಿಯಲ್ಲಿ ಬಹಿರಂಗವಾಗಿ ಈಗಿನ ಆಳರಸರ ಅಯೋಗ್ಯತೆಯ ಬಗ್ಗೆ ಸ್ಪಷ್ಟರೀತಿಯಿಂದ ಗುಡುಗುಹಾಕಿದ್ದೇ ಸಾಕ್ಷಿ!

೫ ಮುಂಬಯಿಯ ಕಾಯದೆಯ ಕೌನ್ಸಿಲಿನಲ್ಲಿ ಎಂಟು ಜನ ರಾಷ್ಟ್ರೀಯ ಪಕ್ಷದ ಮೆಂಬರರು ಸರಕಾರದ ಅನ್ಯಾಯವನ್ನು ಧಡಧಡಿತವಾಗಿ ಸಾರಿ ರಾಜೀನಾಮೆಯನ್ನು ಕೊಟ್ಟದ್ದೇ ಸಾಕ್ಷಿ!

೬ ಸಾಯಮನ್ ಕಮಿಶನ್ನಕ್ಕೆ ಅನಾದರದರ್ಶಕವಾದ ಹರತಾಳವನ್ನು ಆಚರಿಸಿ ಇಡೀ ಹಿಂದುಸ್ತಾನವು ಯಶಸ್ವಿಯಾದುದನಕ ಸರಿಯೇ ಸರಿಯು.

೭ ಬಾರಡೋಲಿಯಲ್ಲಿ ಹೂಡಿರುವ ಶಾಂತಿಮಯ ಕದನವನ್ನೂ ಮೇಲಿಂದ ಮೇಲೆ ಉದಹರಿಸುವದು.

೮ ಮುಂಬಯಿಯಲ್ಲಿಯೂ ಕಲಕತ್ತೆಯಲ್ಲಿಯೂ ಕೂಡಿ ಲಕ್ಷಾಂತರಗಟ್ಟಲೆ ಕೂಲಿಕಾರರು ಸಂಪುಮಾಡಿ, ಪ್ರತಿಯೊಂದು ಪಟ್ಟಣದಲ್ಲಿ ಸುಮಾರು ನೂರಾರು ಗಿರಣಿಗಳಂತೆ ಗಿರಣಿಗಳು ಬಂದಾದುದನಕ ಸರಿಯೇ ಸರಿ-ಸೋಗಲಾಳತನದ ಅಹಂಕಾರದ ಭಾವವನ್ನು ಕುಗ್ಗಿಸುವದಾದ ಕೈನೂಲಿನ ಕೈಮಗ್ಗಗಳ ಕೊಡೆ ಅರಿವೆಗಳನ್ನೇ ಧರಿಸುವದರಲ್ಲಿಯೇ ನಮ್ಮ ಕಲ್ಯಾಣವಿರುವದೆಂಬುದು ಜನರ ಅನುಭವಕ್ಕೆ ಬರಹತ್ತಿ ಭರದಿಂದ ಖಾದಿಯ ಪ್ರಸಾರವು ಉಂಟಾಗಹತ್ತಿರುವದು. ಈ ಮಾತಿಗೆ ಮುಂಬಯಿಯ ವಿದ್ಯಾರ್ಥಿಗಳು ಖಾದಿಯ ಪ್ರಸಾರಕಾರ್ಯವನ್ನು ಕೈಕೊಳ್ಳಬೇಕೆನ್ನುತ್ತಿರುವದೇ ಸಾಕ್ಷಿ! ಈಗೆರಡು ಮೂರುವರ್ಷಗಳಿಂದ ವೀರಶೈವ ತರುಣ ಸಂಘದವರು ವರುಷಾವರುಷ ನೆರೆಯಿಸುತ್ತಿರುವ ತಮ್ಮ ಸಭೆಯಲ್ಲಿ ಖಾದಿಯನ್ನು ಧರಿಸಬೇಕೆಂದು ಠರಾವನ್ನು ಪಾಸುಮಾಡುತ್ತ ಬಂದಿರುವದೇ ಸಾಕ್ಷಿ! ಮೊನ್ನೆ ಬೆಂಗಳೂರಲ್ಲಾದ ವೀರಶೈವಮಹಾಸಭೆಯಲ್ಲಿಯೂ ಈ ಠರಾವು ಪಾಸಾದುದೇ ಸಾಕ್ಷಿ! ಕೆಲವು ವೀರಶೈವ ವಿದ್ಯಾರ್ಥಿಗಳು ಖಾದಿಯ ಭಕ್ತರಾಗಿ ಅದರ ಕಡೆಗೆ ಜನರ ಮನವನ್ನು ತಿರುಗಿಸಲು ಸಂಚಾರ ಮಾಡಲಾರಂಭಿಸುದೇ ಸಾಕ್ಷಿ! ಕಾಯದೆಯ ನೇಮಗಳನ್ನು ದುರುಪಯೋಗಿಸಿ ಜನ ಸಮೂಹದಲ್ಲಿ ಸುಳ್ಳು ಮರಿವೋಸತನಗಳನ್ನು ಮಿತಿಮೀರಿ ಬೆಳಿಸಲು ಕಾರಣವಾದ ನ್ಯಾಯಾಸನಗಳೇ ಧರ್ಮಸರಕಾರದ ನಿಂದಕವಾಗಿ ದ್ರೋಹಾತ್ಮಕವಾಗಿರುವವು. ಕಾರಣ ಇಂತಹ ನ್ಯಾಯಾಸನಗಳಿಗೆ ಬಹಿಷ್ಕಾರವನ್ನು ಹಾಕಿ, ಗ್ರಾಮಪಂಚಾಯತಿಯಿಂದ

ನಮ್ಮ ಕೊಡಕೊಂಬುವ ವ್ಯಾಜ್ಯಗಳನ್ನು ತೀರಿಸಿಕೊಳ್ಳತಕ್ಕದ್ದು. ವಕೀಲರು ಕೊರ್ಟುಗಳನ್ನು ಬಿಡತಕ್ಕದ್ದು ಎಂಬೀ ವ್ರತವು ನಮ್ಮಲ್ಲಿಯ ಗಣಾಚಾರಕ್ಕೆ ಸರಿಯಾದುದು ಇದು ಒಮ್ಮೆ ಭರದಿಂದ ಸಾಗಿದಂತೆಮಾಡಿ, ಈಗ ಒಳಗಿಂದೊಳಗೇ ತನ್ನ ಪಾತ್ರತೆಯನ್ನು ತಂದುಕೊಳ್ಳಲು ಅವ್ಯಕ್ತವಾಗಿ ಒಂದೇ ಸವನೆ ನಡೆದಿರುವದು.

ಆಳರಸರ ಅನಿಷ್ಟವಾದ ದುರಾಗ್ರಹವನ್ನು ಬಿಡಿಸುವ ಕುರಿತು, ನಿಜತತ್ವಾನುವರ್ತನದಲ್ಲಿ ನಿಷ್ಠಾಪರರಾಗಿ ಶಾಂತಿಮಯವಾದ ಸತ್ಯಾಗ್ರಹದ ಕದನವನು ಆಳರಸರ ಕೂಡ ಹೂಡಿ ಆಚರಿಸಬೇಕಾಗುವದು. ಈ ಸತ್ಯಾಗ್ರಹವು ನಮ್ಮ ಲಿಂಗನಿಷ್ಠೆಯ ಲಿಂಗಾಚಾರಕ್ಕೆ ಸರಿಯಾದುದು. ಇದು ಅಂದು ಸುರುವಾದುದು ಬೆಳೆಯುತ್ತ ಬೆಳೆಯುತ್ತ ಬಾರಡೋಲಿಯಲ್ಲಿ ತನ್ನ ಧ್ವಜವನ್ನು ಊರಿ ಯಶಸ್ವಿಯಾಯಿತು. ನಾಗಪುರದಲ್ಲಾದುದು ಹಳೆಮಾತಾಯಿತು. ತನ್ನ ಕಾರ್ಯವು ಯಶಸ್ಸನ್ನು ಹೊಂದಲಿ ಹೊಂದದಿರಲಿ ಇದರ ಪ್ರಯೋಗಗಳು ಮೇಲಿಂದ ಮೇಲೆ ನಡೆದಿರುವವು.

ತಾನು ಬದುಕುವವರಿಂದ ತನ್ನ ಜೀವಮಾನದಲ್ಲಿ ಹತ್ತುಸಾವಿರಕ್ಕಿಂತ ಹೆಚ್ಚು ಜನರ ಒಂದು ಊಟಕ್ಕೆ ಸಾಕಷ್ಟು ಹಾಲನ್ನು ಕೊಡುವದೂ, ಕಣಿಕೆ ಹೊಟ್ಟು ತಪ್ಪಲು ತರಿ ಮುಂತಾದ ಮಾನವನ ಅನ್ನವಲ್ಲದ ಪದಾರ್ಥಗಳನ್ನು ಅನ್ನವಾಗಿಸಿಕೊಡುವ ಘಟೀಯಂತ್ರವುಳ್ಳದ್ದೂ ಆದ ಆಕಳವನ್ನೂ ಅದರಂತೆ ಕುರಿ ಆಡುಗಳನ್ನೂ ಕೊಂದು ತೀರ ತುಸು ಜನರ ಒಂದು ದಿವಸದ ಆಹಾರಕ್ಕಾಗಿ ಉಪಯೋಗಿಸುವದು ಈಶ್ವರನ ಸ್ವಾಭಾವಿಕವಾಗಿ ನಡೆದಿರುವ ಸೃಷ್ಟಿಯ ಕಾರ್ಯಕ್ಕೆ ವಿರುದ್ಧವಾದುದಲ್ಲದೆ, ಅವುಗಳ ಇರುವಿಕೆಯಿಂದ ಬೆಳೆಯುವದಾದ ಅನ್ನಸಾಮಗ್ರಿಯನ್ನು ಕಟ್ಟುಮಾಡಿದ ದೋಷವು ಬರುವದು. ಈ ಬಗ್ಗೆ ಜನತೆಗೆ ಸದ್ಬೋಧವನ್ನು ಮಾಡಿ ಹಿಂಸಾಕಾರ್ಯವನ್ನು ನಿಲ್ಲಿಸುವದಕ್ಕಾಗಿ ಕೈಕೊಂಡವ್ರತವು ನಮ್ಮ ಸದಾಚಾರಕ್ಕೆ ಸಮವಾದುದು. ಇದೂ ತಕ್ಕಮಟ್ಟಿಗೆ ಸಧಾರಣೆಯ ಕ್ರಮವನ್ನು ಹಿಡಿದಿರುವದು. ನಮ್ಮ ತುರ್ಕಸ್ಥಾನದ ಗಾಜೀ ಮುಸ್ತಫಾ ಕಮಾಲ ಪಾಶ್ಚಾ ಇವರೂ, ಅಫಗಾಣಿಸ್ಥಾನದ ಅಮೀರರಾದ ಅಮಾನ ಉಲ್ಲಾಖಾನ ಇವರೂ ತಮ್ಮ ರಾಜ್ಯದಲ್ಲಿ ಗೋಹತ್ಯಾ ಮಾಡಬಾರದೆಂದು ಕಾಯದೆಯನ್ನು ಮಾಡಿ ಅಮಲಿನಲ್ಲಿ ತಂದುದು ಈ ವ್ರತಕ್ಕೆ ಒಳ್ಳೇ ಪುಷ್ಟೀಕರಣವಾಗಿರುವದು. ಆ ಮೇರೆಗೆ ನಮ್ಮಕೊಲ್ಹಾಪುರ ಮೈಸೂರಸಂಸ್ಥಾನಿಕರು ತಮ್ಮ ಭಾಗಗಳಲ್ಲಿ ಗೋಹತ್ಯಾ ಮಾಡಬಾರದೆಂದು ಕಾಯದೆಯನ್ನು ಪಾಸುಮಾಡಿಕೊಂಡಿರುವರು.

ಎಚ್ಚರದಪ್ಪಿ ಅನ್ಯೋನ್ಯ ಕೆಲಸಗಳನ್ನು ಮಾಡಹಚ್ಚಿ ಮನೆಮಾರುಗಳನ್ನು ಮುರಿದು ಬಿಡುವ ಸಿಂದಿ ಸೆರೆ ಮುಂತಾದ ಮಾದಕ ಪದಾರ್ಥಗಳ ಗಡಂಗಗಳ

ನ್ನೇ ಇಲ್ಲದಂತೆ ಮಾಡುವ ಪಿಕೇಟಿಂಗವು ನಮ್ಮ ಶಿವಾಚಾರಕ್ಕೆ ಸರಿಯಾದುದು. ಇದು ಒಮ್ಮೆ ಇಡೀ ದೇಶದ ತುಂಬ ಒಳ್ಳೇ ಭರದಿಂದ ಸಾಗಿ ಸರಕಾರದ ಹಲ್ಲಣ ವನ್ನು ಹಾರಿಸಿ ಬಿಟ್ಟಿತು. ಇದಕ್ಕೆ ಪುಣೆಯಲ್ಲಿ ನಡೆದ ಪಿಕೆಟಿಂಗವೇ ಸಾಕ್ಷಿ!

ಈಗಿನ ಪರಿಸ್ಥಿತಿಯಲ್ಲಿ ಜಾತಿಯ ತಾರತಮ್ಯವನ್ನು ಎದ್ದೆಣಿಸಿ ಸ್ಪೃಶ್ಯಾಸ್ಪೃಶ್ಯ ಭೇದವನ್ನು ಮಾಡುವದು ಯಾವ ರೀತಿಯಿಂದಲೂ ಸರಿಯಾದುದಲ್ಲ! ನಮ್ಮ ಹಾಗು ಅಸ್ಪೃಶ್ಯರ ಸ್ಥಿತಿಯಲ್ಲಿ ಅಂತರ್ಬಾಹ್ಯದೃಷ್ಟಿಯಿಂದ ಏನು ಹೆಚ್ಚುಕಡಿಮೆ ಉಳಿದಿರುವದಿಲ್ಲ. ಕಾರಣ ಎದ್ದೆಣಿಸುವದರಲ್ಲಿ ಏನು ಅರ್ಥವಿಲ್ಲ! ಇಷ್ಟೇ ಅಲ್ಲ; ದೇಶಕಲ್ಯಾಣದ ದೃಷ್ಟಿಯಿಂದಲೂ ದೊಡ್ಡ ತಪ್ಪಾಗುವದು. ಇದ್ದಸ್ಥಿತಿಯನ್ನು ಇದ್ದಕ್ಕಿದ್ದಂತೆ ಬಾಹ್ಯದಲ್ಲಿಯೂ ಆಚರಿಸುವದಾದ ಅಸ್ಪೃಶ್ಯತಾನಿವಾರಣವು ನಮ್ಮ ಭೃತ್ಯಾಚಾರಕ್ಕೆ ಸರಿಯಾದುದು. ಏಕಂದರೆ ಇದರಿಂದ. ದೇವರಾಜ್ಯದಲ್ಲಿ ಎಲ್ಲರೂ ಸರಿಸಮಾನರೆಂಬ ತತ್ತ್ವವನ್ನು ನಮ್ಮ ಶ್ರೀಮದ್ಬಸವಣ್ಣನು ಪ್ರಚಾರದಲ್ಲಿ ಆಚರಿಸಿ ತೋರಿದುದು ಸಹಜವಾಗಿ ಪ್ರಯೋಗದಲ್ಲಿ ಬರುವದು. ಇದು ಎಷ್ಟೋ ಪಾಲಿನ ಅಮಲಿನಲ್ಲಿ ಬಂದಿರುವದು! ಈ ವಿಷಯದಲ್ಲಿ ಸರಕಾರದ ಸಹಾನುಭೂತಿಯು ಇರುವದಲ್ಲದೆ, ಪ್ರತಿಯೊಂದು ಮುನಿಸಿಪಲ್ ಲೋಕಲ್‌ಬೋರ್ಡ ಮುಂತಾದ ಸಂಸ್ಥೆಗಳಿಗೆ ಅಸ್ಪೃಶ್ಯಮೆಂಬರರನ್ನು ತಾವೇ ಆಯ್ದು ಉತ್ತೇಜನಕೊಡುತ್ತಿರುವರು. ಕೊಲ್ಹಾಪುರದ ಗತಿಸಿಹೋದ ಶ್ರೀಮಂತ ಶಾಹುಮಹಾರಾಜರು ಈ ವಿಷಯವನ್ನೇ ಮುಖ್ಯಾಂಗವನ್ನಾಗಿಸಿಕೊಂಡು ಅಸ್ಪೃಶ್ಯವರ್ಗದ ಉದ್ಧಾರಕರೆಂದು ಖ್ಯಾತಿಯನ್ನು ಪಡೆದು ಕಡೆಗೆ ಇದರಲ್ಲಿಯೇ ತಮ್ಮದೇಹವಿಟ್ಟು, ತಮ್ಮ ಜೀವನಚರಿತ್ರೆಯು ಲೋಕಾನುಕರಣೀಯವಾಗುವಂತೆ ಮಾಡಿದರು.

ಲೋಕಹಿತ ಮುಂದಾಳುಗಳು ಈ ರೀತಿ ಪಂಚಾಚಾರಗಳಿಗೆ ಹೋಲುವ ಮಹಾವ್ರತಗಳನ್ನು ಅಂಗೀಕರಿಸಿ ವೀರವ್ರತವನ್ನು ಆಚರಿಸುತ್ತಿರಲು, ಇವೆಲ್ಲವುಗಳನ್ನು ತನ್ನ ಷಟ್‌ಸ್ಥಲದ ಮಾರ್ಗದ ಭಕ್ತಿಯೋಗದಲ್ಲಿ ಸಹಜವಾಗಿ ಒಳಕೊಂಡಿರುವ ನಮ್ಮ ಬಸವಣ್ಣನ ಉದಾತ್ತತತ್ತ್ವಗಳನ್ನು ಆಚರಿಸಲು, ಆವನ ಅನುಯಾಯಿಗಳಾಗಿ ಸುಮಾರು ಎಂಟು ಶತಮಾನಗಳಿಂದ ಪ್ರಯತ್ನಿಸುತ್ತಿರುವ ನಮ್ಮ ವೀರಶೈವ ಲಿಂಗವಂತ ಬಂಧುಗಳು ನಾಚಬೇಕಾಗಿದೆ. ಅಯ್ಯಾ ವಿವೇಕಶಾಲಿಯಾದ ಸುಶಿಕ್ಷಿತ ಭಕ್ತಬಾಂಧವರಿರಾ, ಇವೆಲ್ಲವುಗಳು ನಮ್ಮ ತತ್ತ್ವಾನುವರ್ತನದಲ್ಲಿ ಬಂದಿರುವವೋ, ಇಲ್ಲವೋ, ಎಂಬದನ್ನು ನಿಮ್ಮ ವಿವೇಕದೃಷ್ಟಿಯಿಂದ ಕಂಡು ಮನಗಾಣಿರಿ. ಲೋಕವು ತನಗೆ ತಿಳಿಯಲಿ ತಿಳಿಯದಿರಲಿ, ತಾನಾಗಿಯೇ ನಮ್ಮ ಬಸವಣ್ಣನ ತತ್ತ್ವಾನುವರ್ತನದ ಸಮೀಪಕ್ಕೆ ಬರಹತ್ತಿರಲು, ನಾವು ನಮ್ಮ ಶರಣಮಾರ್ಗದಲ್ಲಿ ಮುಂದಾಗಿ ಪ್ರತ್ಯಕ್ಷ ಪ್ರಯೋಗದಿಂದ ನಂದಿಯ ಧ್ವಜವನ್ನು ಊರಿತೋರಿದರೆ, ಎಷ್ಟು ಅನುಕರಣೀಯವಾಗಿ ಜಗತ್ತು ಎಷ್ಟು ಅಂತಃಕರ

ಪೂರ್ವಕವಾಗಿ ನಮ್ಮ ಕೊರಳಲ್ಲಿ ಜಗದ್ಗುರುವಿನ ಮಾಲೆಯನ್ನು ಹಾಕಲು ಸಿದ್ಧವಾಗುವದೆಂಬದನ್ನು ನೀವೇ ನಿಮ್ಮ ವಿವೇಕದೃಷ್ಟಿಗೆ ತಂದುಕೊಳ್ಳಿರಿ, ನಮ್ಮಲ್ಲಿ ಕೆಲವರು ಶ್ರೀಮದ್ಬಸವ ಚೆನ್ನಬಸವಾಲ್ಲಮರ ನಿಂದೆಯನ್ನು ಮಾಡಿದ್ದು ಅಲ್ಲದ ಸಂಗತಿಯಾಗಿದ್ದರೂ, ಅದರಿಂದ, ಬಲ್ಲಿದರಿಂದ ಅವರ ನಿಜತತ್ತ್ವಗಳು ಬೈಲಿಗೆ ಬಿದ್ದು ನಮ್ಮಗಳಿಗೆಲ್ಲ ಈಗ ತಿಳಿದಿರುವವು. ತಿಳಿದೂ ತಿಳಿದು, ಕಂಡೂ ಕಂಡು ಈಗ್ಗೆ ಸುಮ್ಮನೆ ಕೂಡ್ರುವದು ಎಷ್ಟೂ ನಮ್ಮ ಧರ್ಮವಲ್ಲವು; ಹೂ ಏಳಿರಿ, ಸಮಾಜಸುಧಾರಣೆಯ ಮುಂದಿನ ಭಾಗದಲ್ಲಿ ಹೇಳಿರುವ ಕಾರ್ಯಗಳಿಗೆ ಸಿದ್ಧರಾಗಿ ಕಂಕಣ ಕಟ್ಟಿರಿ; ಈ ಹದದ ಕಾಲವು ನಮಗೆ ಎಂದೂ ದೊರೆಯಲಿಕ್ಕಿಲ್ಲ; ಕಾಲವಿಲಂಬವಾದಲ್ಲಿ ಕೈಮೀರೀತು ಎಚ್ಚರಿಕೆ ! ಎಚ್ಚರಿಕೆ !! ಬಲು ಎಚ್ಚರಿಕೆ !!!

## ೪ನೆಯ ಭಾಗ

## ಈಗ ಹೇಗೆ ನಡೆಯತಕ್ಕದ್ದು

ನಿಜಲಿಂಗ ಸೂತ್ರವನ್ನು ಯೋಜಿಸದೆ ಲಿಂಗವಂತ ಸಮಾಜವಲ್ಲ ; ಮತ್ತು ಸಮಾಜದಲ್ಲಿ ನಿಜೈಕ್ಯವು ಉಂಟಾಗಿ ಕಲ್ಯಾಣವು ಶಾಶ್ವತವಾಗಿ ನಿಲ್ಲಲಾರದು. ನಿರ್ವಿಕಾರದ ನಿಜಲಿಂಗವು ಸದಾಚಾರಸದ್ಭಕ್ತಿಗಳು ಅಳವಡದೆ, ಅನುಭವವೇದ್ಯವಾಗಲಾರದು. ಭಾವಕ್ಕೆ ನಿಲುಕಿದ ನಿಜತತ್ತ್ವವನ್ನು ಕರಮನಕ್ಕೆ ತಂದು ಆಚರಿಸಿದ ಹೊರತು, ಆ ಆಚಾರವು ಸಾರ್ಥಕವಾಗಿ ಕ್ರಿಯಾಚಾರವೆನಿಸದು. ಅಂತಃಕರಣವೆಲ್ಲ ನಿಜದಲ್ಲಿ ಕರಗಿದ ಹೊರತು,ಅದು ಭಕ್ತಿಯೋಗವಾಗಲಾರದು. ಇಂತಹ ಭಕ್ತಿಕ್ರಿಯಾಚಾರಗಳು ಅಳವಡದೆ, ನಿಜಲಿಂಗದ ನಿಲವು ನಿಲುಕಲಾರದು. ನಿಜದ ನಿಲವು ನಿಲುಕದೆ ನಿಜಸೂತ್ರಸಂಬಂಧ ಉಂಟಾಗಲಾರದು. ನಿಜಸೂತ್ರಸಂಬಂಧವಿಲ್ಲದೆ ಸೂತ್ರ ಸಂಬಧಿಸಿ ಯಾವದೊಂದು ಕಾರ್ಯವನ್ನು ಮಾಡುವ ಅಧಿಕಾರವು ಸಹಜವಾಗಿ ಇರಲಾರದು. ಇಂತಹ ನಿಜಸೂತ್ರಸಂಬಂಧವಾಗಿ ಸಹಜ ಅಧಿಕಾರವಿದ್ದ ಗುರುವರ್ಗವು ಆದ ಹೊರತು, ಸಮಾಜವು ನಿಜಸೂತ್ರಕ್ಕೆಯೋಜಿಸಲ್ಪಡಲಾರದು. ನಿಜಸೂತ್ರಕ್ಕೆ ಸಂಬಂಧವಿರದ ಸಮಾಜದ ನಡೆಯೆಲ್ಲ ವಿಕಾರವರ್ಧನಕ್ಕೆ ಕಾರಣವು. ಸಮಾಜದ ಅವನತಿಗೆ ಗುರುವರ್ಗವೇ ಕಾರಣವಾದುದರಿಂದ ಈ ಗುರುವರ್ಗವನ್ನು ಪದಚ್ಯುತ ಮಾಡಿದಹೊರತು, ಸಮಾಜದ ಉನ್ನತಿಯು ಎಂದೂ ಆಗಲಾರದು. ಲಿಂಗಾಂಗಿಯ ಉದಾತ್ತವಾದ ಧರ್ಮತತ್ತ್ವಗಳು ನಡೆಯಿಂದ ವ್ಯಕ್ತವಾಗಬೇಕಲ್ಲದೆ ನಡೆಯೊಂದು ರೀತಿಯಾಗಿದ್ದು, ನುಡಿಯಲ್ಲಿ ಎಷ್ಟುಜಾಣ್ಮೆಯು

ನ್ನು ಬೆರಿಸಿ, ವಿವರಿಸಿದಾಗ್ಯೂ, ಅವುಗಳ ವ್ಯಾಪಕತ್ವಗಳ ಕಲ್ಪನೆಯು ಸಹ ನಿಲುಕ ಲಾರದು. ಸಮಾಜದೊಳಗಿನ ಪ್ರತಿಯೊಂದು ವ್ಯಕ್ತಿಯು ಪ್ರತ್ಯಕ್ಷ ಇಲ್ಲ ಪರೋಕ್ಷರೀ ತಿಯಿಂದ ಸೂತ್ರಕ್ಕೆ ಒಳಪಟ್ಟುದುದಾಗಿ, ಅಂತರಂಗದಲ್ಲಿ ಆ ಸುತ್ರಾನುಸಂಧಾನವು ಎಷ್ಟೂ ಹರಿಯದಂತೆ ಸಕಲವ್ಯವಹಾರಗಳನ್ನು ಮಾಡುವದಾದರೆ, ಅದು ಸಹಜ ನಿಷ್ಕೈಕ್ಯತೆಯ ಪ್ರಯೋಗವು! ಇಂತಹ ಶಾಂತಿಪುಯಸ್ಥಿತಿಯೇ ಸ್ವರಾಜ್ಯ! ಇದೇ ಲಿಂ ಗಕ್ಷೇತ್ರವು! ಇದೇ ಲೋಕಕ್ಕೆ ಬೇಕಾದುದು. ಶ್ರೀಮದ್ಬಸವಾದಿಪ್ರಮಥರು ಹಾಕಿಕೊ ಟ್ಟ ಶರಣಮಾರ್ಗದಲ್ಲಿ ನಮ್ಮಡಿಯುಇರುತ್ತಿದ್ದರೆ, ಇಷ್ಟೊತ್ತಿಗೆ ನಾವೆಲ್ಲರೂ ಭೂಗ ಣಂಗಳಾಗಿ, ಈ ಧರೆಯೇ ಕೈಲಾಸವಾಗಿರುತ್ತಿತ್ತು ಆದರೆ ಮಾಡುವದೇನು ನಾವೆ ಶ್ಟೊ ಲಿಂಗಕ್ಷೆತ್ರವೆಶ್ಟೊ ಆಗಿಬಿಟ್ಟಿರುವೆವು. ಈಗೊಂದು ಪಟ್ಟದಿಂದ ಶ್ರೀಮಜ್ಜಗದ್ಗು ಸಿದ್ಧಪ್ರಭುವರನು ಪ್ರಕಟವಾಗಿ ಲೀಲೆಯನಾಡನಿಂತಾಗ್ಯೂ, ಆತನ ಲೀಲೆಯ ಕು ರುಹುಗಳಲ್ಲಿಯೂ ಸಹಾ ನಂಬುಗೆ ಇಲ್ಲದವರಾಗಿರುವೆವು. ಲೋಕವು ಲಿಂಗಧಾರ ಣಮೆಚ್ಚಿಗೆ ಬರಹತ್ತಿ ತೀರ ಸಮೀಪಿಸಿರುವದು. ಆದರೂ ನಮ್ಮ ಸಮಾಜಚಾಲಕ ರಿಗೆ ಇನ್ನೂ ಎಷ್ಟೂ ಕಳಕಳಯೂ ಇಲ್ಲ! ಅರುವೂ ಇಲ್ಲ! ತಮ್ಮ ವೈಭವದೊಳಗೇ ಮು ಳುಗಿರುವರು. ಇವರೇ ನಮ್ಮನ್ನು ಉದ್ಧರಿಸುವವರೆಂದು ಮತ್ತು ಇವರನ್ನೇ ನಂಬಿ ಕೊಂಡು ನಡೆಯಹತ್ತಿದರೆ, ಇವರ ಕೂಡ ನಾವೂ ಹೊಲಗೇರಿಯ ಹೊಗ ಬೇಕಾ ದ ಪ್ರಸಂಗವು ಒದಗಿ, ಊರ ಅಂಗಳ ಹುಡುಗುವ ಕಸಬರಿಗೆ ತಪ್ಪದೆ ನಮ್ಮ ಕೈಯ ಲ್ಲಿ ಬರುವವು. ಸುಳ್ಳಾದರೆ ಬಸವಣ್ಣನಾಣೆ! ಎಲೈ ನಮ್ಮ ಸಮಾಜವನ್ನು ಉದ್ಧರಿಸ ಲು ಯೋಗ್ಯರಾದ ಶಿವಾಂಶಿಕರಿರಾ, ನೀವು ಬೂದಿ ಮುಚ್ಚಿದ ಕೆಂಡದಂತೆ, ಏನೊಂ ದು ಗೌರವವಿಲ್ಲದವರಾಗಿ, ತೀರ ಕೀಳದೆಸೆಯಲ್ಲಿರುವದನ್ನು ಪ್ರಭುರಾಯನು ಬಲ್ಲ ನು; ನಮಗೆ ಮುಂದಿಯ ನೆರವು ಎಷ್ಟೂ ಇಲ್ಲೆಂದು, ಈದುರಭಿಮಾನದ, ದುರಾಚಾ ರದ, ದುರಾಗ್ರಹದ, ಒಣದೊಡ್ಡಿಸ್ತನದ, ಮದಾಂಧರೂ, ದುರ್ವಿಷಯಾಸಕ್ತರೂ, ಧೂರ್ತರೂ, ಮಹಾಕಂಟಕರೂ, ಆದ ಜನರ ಘಟನಾ ಸರಕಾರಕ್ಕೆ ಹೆದರಿ, ಸುಮ್ಮ ನೆ ಉಳಿದು ಕೊಳ್ಳುವ ಪ್ರಸಂಗವಿದಲ್ಲವು. ಲೌಕಿಕ ವಿದ್ಯೆಯಾದರೂ ಚಿಂತೆಯಿಲ್ಲ! ನಿಮ್ಮ ಯೋಗ್ಯತೆಯನ್ನು ಕಂಡು ಹಿಡಿದು, ನಿಮ್ಮನ್ನು ಹಿಂಬಾಲಿಸುವ ಸುಶಿಕ್ಷಿತವರ್ಗ ವು ಸಮಾಜದಲ್ಲಿ ತಕ್ಕಷ್ಟು ಆಗಿರುವದು. ನೀವು ಮುಂದರಿದು ಕಾರ್ಯ ಮಾಡಲು ಕಂಕಣ ಬದ್ಧರಾದರೆ, ಆವರ ಸಹಾಯವು ನಿಮಗೆ ತಪ್ಪದೆ ಉಂಟಾಗಿ, ಸಮಾಜ ದ ಹೊಲಸನ್ನು ಕಿತ್ತುಹಾಕಲಿಕ್ಕೆ ಬಲಬರುವದು ಗುರುಶಿಷ್ಯತ್ವವು ಹಾಳಾಗಿ ಹೋ ಗಿ, ಸೂತ್ರಸಂಬಂಧವಿಲ್ಲದೆ ಆಚಾರವೆಲ್ಲ ಬರೇ ಲೌಕಿಕ ಡಂಬಾಚಾರವಾಗಿರುವ ದು. ಬಹಳ ತಳಸೋಸಿ ಸಮಾಜದ ಘಟನೆಯಾದುದರಿಂದ ಸಮಾಜದಲ್ಲಿ ಎಷ್ಟು ಪಂಗಡಗಳೂ, ಬಣಗಳೂ. ಒಡಕುಗಳೂ ಆದರೂ, ಪ್ರತಿಯೊಂದು ತುಣಕಿನಲ್ಲ ಅದರ ಘಟನೆಯು ಇದ್ದೇ ಇರುವದು. ಇದರಿಂದ ನಿಮಗೆ ಮುಂದಾಳುಗಳು ಪ್ರಯ ತ್ನಿಸಿದರೆ, ತಾನೇ ಸುಧಾರಣೆಯು ಆಗುವದೆಂದು ತೋರುತ್ತಿರುವದು; ಇದು ಕೇವ

ಲ ಭ್ರಮೆಯು! ಎಲ್ಲಿಯ ವರೆಗೆ ಈ ವಿಕಾರಿವರ್ಗಕ್ಕೆ ನಮ್ಮಿಂದ ಆದರವೋ, ಅಲ್ಲಿಯ ವರೆಗೆ ನಮ್ಮ ಕಾರ್ಯಗಳೆಲ್ಲ ಒಳಗೆ ಹೆಗ್ಗಣ ಹೊಗಿಸಿ, ಮೇಲೆ ಗುದ್ದು ಬಡಿದಂತಾಗುವವು. ಇದರಿಂದ ನಮ್ಮ ಮಂದಿರವೆಲ್ಲ ಪೊಳ್ಳಾಗಿ, ಬಹು ದಿವಸ ತಾಳಲಾರದು. ಪೂಜೆಗೆ ಎಷ್ಟೂ ಯೋಗ್ಯರಲ್ಲದ ಅನಧಿಕಾರಿಗಳು ಗುರುವರ್ಗದಲ್ಲಿ ತುಂಬಾ ತುಂಬಿ ತುಳುಕುತ್ತಿವರು. ಸಮಾಜದ ಹಿರಿಯರೆಲ್ಲರೂ ಬಹಳ ಮಾಡಿ ಆಕಳಮೋರೆಯನ್ನು ಕಟ್ಟಿಕೊಂಡ ಹುಲಿಗಳೇ ಆಗಿರುವರು. ಮೊದಲು ಈಗಿನ ಗುರುವರ್ಗಕ್ಕೆ ಬಹಿಷ್ಕಾರವಿಟ್ಟ ಹೊರತು, ಲಿಂಗಸಾಮರಸ್ಯದ (ಪಡೆಕೊಳ್ಳುವ) ನೆವದಿಂದ ಆಗುತ್ತಿರುವ ವಿಕಾರಸಾಮರಸ್ಯ ಯೋಗದ ಬೆಳವಣಿಗೆಯು ಕುಂದಲಾರದು. ಧರ್ಮತತ್ತ್ವ ಬೋಧೆಯ ಕರ್ತವ್ಯವನ್ನಾದರೂ ಮಾಡದ ಇವರಿಗೆ ಕೋರಧಾನ್ಯ, ಸ್ವಯಂಪಾಕ, ಕಂತಿ ಮೊದಲಾದ ಭಿಕ್ಷೆಗಳನ್ನೂ, ದಾನಧರ್ಮ ಕಾಣಿಕಾ ವರ್ಗಣಿ ಮುಂತಾದವುಗಳನ್ನೂ ಬೇಡುವ ಅಧಿಕಾರವೆಲ್ಲಿಯದು? ಇಂತಹ ಅನಧಿಕಾರಿಗಳಿಗೆ ಕೊಡದಿರುವದರಲ್ಲಿಯೇ ಪುಣ್ಯವೂ, ಧರ್ಮವೂ, ವೀರವೃತ್ತಿಯೂ ಇರುವದಲ್ಲದೆ, ಕೊಟ್ಟಲ್ಲಿ ಪಾಪವೂ ಅಧರ್ಮವೂ ಹೇಡಿತನವೂ ನಮ್ಮನ್ನು ಬಿಡಲಾರವು. ಒಟ್ಟಿಗೆ ಈ ಧರ್ಮ ಸರಕಾರದ ಸೂತ್ರಾಧಿಕಾರಿಗಳಾದ ಗುರುವರ್ಗದವರು ತಾವಾಗಿಯೇ ಭಕ್ತ ಕೋಟಿಯನ್ನು ಕೂಡಿಕೊಂಡು ಭಕ್ತಿಯನ್ನು ಆಚರಿಸುವ ಹಾಗೆ ಮಾಡಿದ ಹೊರತು ಗತ್ಯಂತರವಿಲ್ಲ! ಇದೇ ಈಗ ಜಪಿಸುವದಾದ ಮಹಾಮಂತ್ರವು; ಆಚರಿಸುವದಾದ ಕ್ರಿಯಾಚಾರವು; ಈ ಕಸವನ್ನು ಕಿತ್ತು ಹಾಕಿದ ಹೊರತು ಸಮಾಜವು ಶಿವಪೂಜೆಗೆ ಪಾತ್ರವಾಗಲಾರದು ತಿಪ್ಪಿಯಲ್ಲಿ ಎಲ್ಲಾದರು ಶಿವಪೂಜೆಯೇ? ಈ ಕಸವನ್ನು ಕಿತ್ತು ಹಾಕಲಿಕ್ಕೆ ಕೆಳಗಿನ ಕಾರ್ಯಗಳಲ್ಲಿ ನಾವು ಧುರಂಧರರಾಗಿಯೇ ತೀರಬೇಕಾಗಿರುವದು. ಹೂ ಎಳಿರಿ, ಅನುಮಾನಿಸದೆ.

(೧) ಅಷ್ಟಾವರಣದ ಬಾಹ್ಯಾಚರಣೆಗೆ ಯೋಗ್ಯರಾದವರನ್ನೇ ಬೊಟ್ಟು ಮಾಡಿ ತೋರಿಸಿ ಅವರನ್ನು ಉಪಯೋಗಿಸಲು ಈಗಿನ ಪರಿಸ್ಥಿತಿಯಲ್ಲಿ ಆಗದ ಮಾತು. ಆ ಯೋಗ್ಯರಾದವರು ಸ್ವಾಭಾವಿಕವಾಗಿ ನಿರಭಿಮಾನಿಗಳೂ ನಿರಹಂಕಾರಿಗಳೂ ಇರುವದರಿಂದ ತಾವೇ ಮುಂದರಿದು, ತಮ್ಮ ಕರ್ತವ್ಯದ ಮಹತ್ವವನ್ನು ಅರಿದು ಭಕ್ತರಾಗಿ ಭಕ್ತವರ್ಗವನ್ನು ಕೂಡಿಕೊಂಡು ಸಮಾಜಸುಧಾರಣೆಯ ಕಾರ್ಯಕ್ಕೆ ಕಂಕಣಬದ್ಧರಾಗೇ ಆಗುವರು. ದುರಭಿಮಾನಿಗಳು ಇಲ್ಲದ ಗೌರವವನ್ನು ಕಾಯ್ದುಕೊಳ್ಳಲು ಉಳಿದುಕೊಂಡು ಎದುರಾಳಿಗಳಾಗಿ ಹೋರಾಡುವರು. ಯೋಗ್ಯರಾದವರೂ ತೀರ ತೀರ ವಿರಳ! ಎಲ್ಲಾದರೂ ಒಬ್ಬಿಬ್ಬರು ಹೊರಡಬಹುದು! ಕಾರಣ ಆ ಯೋಗ್ಯರ ವಿಷಯವಾಗಿ ಅನುಮಾನಿಸದೆ, ಈಗಿನ ಗುರುವರ್ಗಕ್ಕೆ ಬಹಿಷ್ಕಾರವನ್ನು ಹಾಕಿ ಅಸಹಕಾರವನ್ನು ಆಚರಿಸುವದು ಯುಕ್ತವಾದುದು. ಏಕಂದರೆ ಹೀಗೆ ಮಾಡುವದರಿಂದಲೇ ಮೊದಲು ಎಲ್ಲರ ಪೂಜೆಯು

ನಿಂತಂತೆ ತೋರಿದರೂ ಕಡೆಗೆ ಯೋಗ್ಯರನ್ನು ಉಪಯೋಗಿಸಿಕೊಳ್ಳಲು ಅನುಕೂಲವಾಗುವದು. ಯೋಗ್ಯರಾದವರೂ ಈ ನಿಯಮವನ್ನು ಪರಿಪಾಲಿಸಿದ ಹೊರತು, ತಮ್ಮ ಸರಿ ಪೂಜಿಗೊಳ್ಳುವ, ತಮಗೂ ಮೀರಿ ನಿಂತು ತಮ್ಮ ಪವಿತ್ರತೆಯ ಪ್ರಭಾವವನ್ನೇನು ಮಿನುಗಗೊಡದೆ, ಎಲ್ಲವನ್ನೂ ಅನಿಷ್ಟವನ್ನಾಗಿಸುವ ದುಷ್ಟಪೂಜೆಯನ್ನು ನಿಲ್ಲಿಸಲು ಸಾಧ್ಯವಿಲ್ಲ! ಕಾರಣ ಎಲ್ಲರೂ ಕೂಡಿ ಬಹಿಷ್ಕಾರವನ್ನಿಟ್ಟು ಆಚರಿಸುವದೇ ಮೇಲಾದ ಉಪಾಯವು. ಗುರುವರ್ಗದಲ್ಲಿ ಯೋಗ್ಯರಾದವರು ನಿಜವಾದ ಭಕ್ತರಿಗಿ ಭಕ್ತರನ್ನು ಕೂಡಿಕೊಂಡ ಹೊರತು, ಅಲ್ಲಿಯೇ ಉದ್ದು ತಮಗೆ ಬಹಿಷ್ಕಾರವನ್ನು ಹಾಕಿಕೊಳ್ಳಲು ಅಧಿಕಾರವು ಬರಲಾರದು. ದುಷ್ಟಪೂಜೆಯು ನಿಂತು, ಯೋಗ್ಯರು ಆಯಲ್ಪಡುವವರೆಗೆ, ತಮ್ಮ ತಮ್ಮ ಕರದಿಷ್ಟಲಿಂಗದಿಂದಲೇ ಪಾದೋದಕ ಪ್ರಸಾದಗಳನ್ನು ಹಡೆದುಕೊಂಡು, ಅಷ್ಟಾವರಣದ ಬಾಹ್ಯಾಚರಣೆಯನ್ನು ಆಚರಿಸಲು ಬರುವದು,

೨ ನಮ್ಮ ಸಮಾಜದಲ್ಲಿ ಪ್ರತಿಯೊಂದು ಕಾರ್ಯವನ್ನು ಸೂತ್ರಸಂಬಂಧಿಸಿಯೇ ಮಾಡುವದಿರುವದರಿಂದ ಅಯ್ಯನಿಲ್ಲದೆ ಏನು ಏನು ಸಾಗದಂತಾಗಿರುವದೇನೋ ನಿಜ! ಇಂತಹ ವಿಕಾರದಿಂದ ಉನ್ಮತ್ತರಾದವಂಗೆ ನಿಜಸೂತ್ರವನ್ನು ಯೋಜಿಸುವ ಅಧಿಕಾರವೂ ಉಳಿದಿರುವದಿಲ್ಲೆಂಬುದೂ ನಿಜ! ನಿಜವಾದ ಭಕ್ತಿಯೋಗದಿಂದ ಕ್ರಿಯೆಯನ್ನು ಅಳವಡಿಸಿಕೊಂಡವನಿಗೇ ಅಧಿಕಾರವಿರುವದೆಂಬುದೂ ನಿಜ! ಆದುದರಿಂದ ಧರ್ಮಾನುವರ್ತನಕ್ಕೆ ಚ್ಯುತಿಯುಂಟಾಗದಂತೆ ಭಕ್ತೋತ್ತಮರನ್ನು ಸೂತ್ರಸಂಬಂಧಿಸಲು ಯೋಜಿಸಿಕೊಂಡು ಸರ್ವಕಾರ್ಯಗಳನ್ನು ನೆರವೇರಿಸಿಕೊಳ್ಳಲು ಶಾಸ್ತ್ರಾನುಸಾರ ತತ್ತ್ವಾನುಸಾರ, ಶರಣಮಾರ್ಗಾನುಸಾರ ಬಂದೇ ಬರುವದು. ಈ ಜಣಭೀತಿಯಿಂದ ಆ ಅನಧಿಕಾರಿವರ್ಗಕ್ಕೆ ಗೌರವಕೊಟ್ಟು ಅವರಿಂದಲೇ ಸಾಗಿಸಿಕೊಳ್ಳಬೇಕೆಂಬ ಅನಾಚಾರವನ್ನು ಸಾಗಗೊಡುವದು ಸರ್ವಸ್ವ ನಮ್ಮ ಕಡೆಗೆ ಕಾರಣವಾಗಿರುವದು, ಈ ವಿಷಯದಲ್ಲಿ ಸಮಾಜೋದ್ಧಾರಕ ಮಹಂದಾಳುಗಳು ನಿಷ್ಠಾಪರರಾಗಬೇಕಾಗಿರುವದು,

೩ ಗುರುವರ್ಗ ಭಕ್ತವರ್ಗಗಳೆಂಬ ಭೇದಗಳನ್ನೇನು ಮಾಡದೆ ಎಲ್ಲರೂ ಸರಿಸಮಾನರೆಂದು ಸಮದೃಷ್ಟಿಯಿಂದ ಛಾತ್ರವರ್ಗದ ಶಿಕ್ಷಣಸಂಸ್ಥೆಗಳನ್ನು ಸಾಗಿಸುತ್ತಿರುವವರಿಗೂ, ಸಮಾಜದಲ್ಲಿ ಭಕ್ತಿಯನ್ನು ಜಾಗೃತಪಡಿಸಿ ಧರ್ಮಬೋಧೆಯು ಉಂಟಾಗುವಂತೆ ಪ್ರಯತ್ನಿಸುವವರಿಗೂ, ಸಮಾಜದ ಕಲ್ಯಾಣಕ್ಕಾಗಿ ತನುಮನಧನಗಳನ್ನು ಸೂರಿಗೊಟ್ಟು ಆಚರಿಸುವವರಿಗೂ ಮುಷ್ಟಿಫಂಡು, ದಾನಧರ್ಮ, ಕಾಣಿಕಾದಿ . ಮುಂತಾದವುಗಳನ್ನು ನಡಿಸುವದಿರುವದೇ ಹೊರತು, ದುರಾಚಾರಿಗಳಿಗೂ,ಗಂಟುಗಳ್ಳರಿಗೂ, ವಿಕಾರೋನ್ಮತ್ತರಿಗೂ, ಏನು ಇಕ್ಕುವದಿರುವದಿರುವದಿಲ್ಲ, ಆದುದರಿಂದ ಬಹಿಷ್ಕೃತರಾದ ಗುರುವರ್ಗದವರ ಉಪಜೀವ

ನದ ಭಾರವು ಭಕ್ತಕೋಟಿಯ ಮೇಲೆ ಉಳಿಯಲಾರದು. ಆ ಬಹಿಷ್ಕಾರದ ಕೂಡ ಇವೆಲ್ಲ, ಅವರಿಗಾಗಿ ಮಾಡುವ ಕೃತಿಗಳೂ ಬಹಿಷ್ಕೃತವಾದುವೇ ! ಈ ವಿಷಯ ವಾಗಿ ಸಮಾಜದಲ್ಲಿ ಏನೊಂದು ಪ್ರಯೋಜನವಿಲ್ಲದೆ, ಧರ್ಮದ ನೆವದಿಂದ ದುರ್ವ್ಯಯವಾಗುತ್ತಿರುವವನ್ನು ತಡೆದು, ಸದ್ವ್ಯಯವಾಗುವದರ ಕಡೆಗೆ ತಿರುಗು ವಂತೆ ಎಚ್ಚರಪಡಬೇಕಾಗಿರುವದು.

ಮೊದಲನೆಯ ಮೂರನೆಯ ನಿಯಮಗಳನ್ನು ಪ್ರತಿಯೊಂದು ಮನೆತನದವ ರು ತಮ್ಮ ತಮ್ಮ ಮನೆಗಳ ಪೂರ್ತೆಯಾದರೂ ಆಚರಿಸಲು ಬರುವದು. ಆದರೆ ಎರಡನೆಯ ನಿಯಮವು ಹೊರಗೆ ದೈವಕೂಡಿಸಿಕೊಂಡು ಮಾಡುವದಿರುವದರಿಂ ದ ತೊಂದರೆಯು ಉಂಟಾಗುವದು. ಈ ನಿಯಮವನ್ನು ಪರಿಪಾಲಿಸುವದರಲ್ಲಿ ಯೇ ಶರಣುಮಾರ್ಗಪ್ರವರ್ತನೆಯಿರುವದು. ಇದನ್ನು ಪರಿಪಾಲಿಸಿದ ಹೊರ ತು, ಸಮಾಜದ ಉದ್ಧಾರ ವಿಲ್ಲ! ಇದನ್ನು ಪ್ರಚಾರದಲ್ಲಿ ತರುವದಾಗದೆ, ಇಷ್ಟು ಕಷ್ಟದಲ್ಲಿ ಹೊರಳಾಡುತ್ತಿರುವದು. ಕೆಲವು ಸುಶಿಕ್ಷಿತರೂ, ಶಿವಾಂಶಿಕರೂ ಆದ ವಿವೇಕಸಂಪನ್ನರು ಹಂಗುಹರಿದು ಅಲ್ಲಲ್ಲಿ ಕೂಡಿಕೊಂಡು ನಿಷ್ಕಾಮಪರರಾಗಿ ಆಚ ರಿಸಲು ಕಂಕಣಬದ್ಧರಾದ ಹೊರತು ಪ್ರಚಾರದಲ್ಲಿ ಬರುವದು ಕಷ್ಟ! ಎಲ್ಲಿಯ ವರೆಗೆ ಈ ನಿಯಮವನ್ನು ಆಚರಿಸಲು ಜನರು ಕಂಕಣಬದ್ಧರಾದವರ ಹಿಂಬಾಲಿ ಸಲು ಧೀರರಾಗಲಾರರೋ, ಅಲ್ಲಿಯ ವರೆಗೆ ಕಂಕಣಬದ್ಧರಾದವರಿಗೆ ಅನಂತ ತೊಂದರೆಗಳು ಸಂಭವಿಸುವವು. ಅವುಗಳನ್ನೆಲ್ಲ ಸಹಿಸಿ ಮುಂದಡಿಯನಿಕ್ಕುವ ದರಲ್ಲಿಯೇ ಹೆಚ್ಚೆಚ್ಚು ನಿಷ್ಠೆಯನ್ನು ತಾಳುತ್ತ ಹೋಗಬೇಕಾಗುವದು. ಈ ರೀತಿ ನಿಷ್ಕಾಮಪರರಾಗಿ ಆಚರಿಸುವವರೇ ದೇವರಾಜ್ಯದಲ್ಲಿ ಪ್ರಭುವಿನ ಪರಿಪೂರ್ಣವಾದ ಅಂತಃಕರಣಕ್ಕೆ ಪಾತ್ರರಾಗುವರು.

ಗುರುವರ್ಗವು ಧರ್ಮದ ನೆವದಿಂದ ತಮ್ಮ ಗೌರವವನ್ನು ಮೆರೆಯಿಸಲು ಏನಾದರೊಂದು ಒಣರಂಜನೆಯ ಕಾರ್ಯವನ್ನು ಹೂಡಹೋದರೆ, ಕೂಡಲೇ ಅದನ್ನು ನಿಷೇಧಿಸಿ, ಕಾರ್ಯವು ಜರಗದಂತೆ ಮಾಡುವದುಚಿತವು. ಒಂದು ವೇಳೆ ತಮ್ಮ ಮುಂಗೈಜೋರಿನಿಂದ ಕಾರ್ಯಮಾಡಲು ಸಿದ್ಧರಾದರೆ, ಆ ವಿಷಯದಲ್ಲಿ ಎಲ್ಲರೂ ಹರತಾಳವನ್ನು ಆಚರಿಸಬೇಕಾಗುವದು. ತಮ್ಮ ಅಧಿಕಾರವು ಕುಂದಿ ತಮ್ಮ ಕೈಯೊಳಗಿನ ಸೂತ್ರವು ತಪ್ಪುವದೆಂದು ವಿಕಾರವರ್ಗದ ತಂಡನ್ನು ಕೂಡಿ ಕೊಂಡು, ನಮ್ಮ ಆಟವು ಎಷ್ಟೂ ನಡೆಯಗೊಡದಂಥ ನಿಯಮವನ್ನು ಮಾಡಿ ಆ ಗುರುವರ್ಗವು ಅದನ್ನು ಒತ್ತಾಯದಿಂದ ನಮ್ಮ ಮೇಲೆ ನಡಿಸಬಂದರೆ, ಆ ವಿಷಯವಾಗಿ ಅಸಹಕಾರಾತ್ಮಕ ಸತ್ಯಾಗ್ರಹವೇ ಮದ್ದು. ಉದಾ:—ಹನ್ನೊಂದು, ಅರುವತ್ತು ಮೂರು, ಏಳನೂರಾ ಎಪ್ಪತ್ತು ಮಂಟಪ ಪೂಜೆಗಳೂ, ಅಡ್ಡ ಉದ್ದ ಪಲ್ಲಕ್ಕಿಯ ಉತ್ಸವಗಳೂ, ಸ್ಥಲಗೂಡುವ, ಸಾವಿರಕ್ಕೆ ಮಾಡುವ, ಮರಿಗೆ ಅಧಿ ಕಾರ ಕೊಡುವ ಇತ್ಯಾದಿ ಕಾರ್ಯಗಳು.

ಪಂಚಸೂತಕವಿರಹಿತ ಶರಣಮಾರ್ಗವನ್ನು ಪ್ರಚಾರದಲ್ಲಿ ತರಹೋದರೆ ಮೊದಲು ಜಾತಿಯ ಸೂತಕಕ್ಕೇ ಜನರು ಅಡ್ಡಬರುವರು. ಇದನ್ನು ಮುರಿಬಡಿದು ಲಿಂಗವಂತರೆಲ್ಲರೂ ಸರಿಸಮಾನರು ಎಂಬ ಭಾವವು ದೃಢೀಕರಿಸಿ, ಅಷ್ಟಾವರಣ ಬಳಿಕೆಯುಳ್ಳವರಲ್ಲಿ ಕಾಯಕವ ನೋಡದೆ ಊಟುಪಚಾರಗಳೂ ಶರೀರಸಂಬಂಧಾದಿ ಕಾರ್ಯಗಳೂ ನಿರಾತಂಕವಾಗಿ ನಡೆಯುವ ಹಾಗೆ ಮಾಡುವ ವಿಷಯದಲ್ಲಿ ಕಂಕಣಬದ್ಧರಾದ ಹೊರತು, ಇವು ನಾಮಶೇಷವಾಗವು. ಇದಕ್ಕಾಗಿ ಸತ್ಯಾಗ್ರಹವೇ ಮದ್ದು.

ಶ್ರೀಮುಷ್ಪಸವಣ್ಣನು ಸಮಾಜದ ಕಾಯಕಗಳಿಗೆ ಯಾವಕಾಲಕ್ಕೂ ಎಷ್ಟೂ ಕ್ರಾಂತಿಯಾಗದಂತೆ, ನಿಜಕಲ್ಯಾಣದ ನಿಜದೃಷ್ಟಿಯಿಂದ ಹಾಕಿಕೊಟ್ಟ ನಿಯಮಗಳನ್ನು ಮುರಿದು ಅರ್ಥವ್ಯಾಪಾರವನ್ನು ಎಷ್ಟೂ ಹೇಸಿಕೆಯೂ ಭೀತಿಯೂ ಇಲ್ಲದೆ ಸಮಾಜದ ಮಧ್ಯದಲ್ಲಿ ಮಾಡುತ್ತಿರುವ ವ್ಯಾಪಾರಸ್ಥರ ಆಟವು ಎಷ್ಟೂ ನಡೆಯದ ಹಾಗೆ, ಅಂದರೆ ಸಮಾಜದಲ್ಲಿಯೇ ಹುಟ್ಟುವ ಸರಕುಗಳು ಸಮಾಜದಲ್ಲಿಯೇ ವ್ಯಯವಾಗುವ ಹಾಗೆ ವ್ರತವನಾಚರಿಸದಿದ್ದರೆ, ಸಮಾಜದಲ್ಲಿ ಕಲ್ಯಾಣವು ತಲೆದೋರಲಾರದು. ಸಮಾಜದೊಳಗಿನ ಎಲ್ಲ ಕಾಯಕಗಳಿಗೆ ಉತ್ತೇಜನವು ದೊರೆಯುವ ಹಾಗೆ ನಮ್ಮವರಿಗೆ ನಾವೇ ಸಹಾಯಮಾಡದಿದ್ದರೆ, ಅವರ ಹೊಟ್ಟೆಯು ಸಾಗುವ ಬಗೆ ಯಾವದು? ಅನ್ನ ಅರಿವೆಗಳ ಕೊರತೆಯು ಉಂಟಾಗದಂತೆ ಮಾಡುವದು ಕಲ್ಯಾಣದ ಮೊದಲನೆಯ ಮೆಟ್ಟು. ಅನ್ನ ಅರಿವೆಯ ಕೊರತೆಯ ಮೂಲಕವಾಗಿ ಹೊತ್ತೇಳುವ ಉರಿಯುಷ್ಟು ಇನ್ಯಾತರ ಕೊರತೆಯಿಂದಲೂ ಉಂಟಾಗಲಾರದು. ಇದು ಯಾವ ಸರಕಾರದ ನೇತೃತ್ವದಲ್ಲಿ, ಇದರ ಅಧಿಕಾರಕೊಳಪಟ್ಟ ತಂಡದಲ್ಲಿ ಕಂಡುಬರುವದೋ ಅದಕ್ಕೆ ಆಳಿಕೆಯನ್ನದೆ ರಾಕ್ಷಸರ ಹಾವಳಿಯೆನ್ನಬೇಕಾಗುವದು. ಲಿಂಗಾಂಗಿಯ ಸಾಮ್ರಾಜ್ಯದಲ್ಲಿ ವ್ಯಕ್ತಿಶಃ ಪರಿಪಾಲಿಸುವದು ಅದೇ ನಿಯಮವೇ! ಸಾಮೂಹಿಕವಾಗಿ ಪರಿಪಾಲಿಸುವದು ಅದೇ ನಿಯಮವೇ! ಆಗಿರುವದರಿಂದ ಅದು ವ್ಯಕ್ತಿಯಲ್ಲಿ ಪೂಜಾಕಾರ್ಯವಾಗಿಯೂ, ಸಮೂಹದಲ್ಲಿ ದಿಗ್ಬಂಧನಕಾರ್ಯವಾಗಿಯೂ ಪರಿಣಮಿಸುವದು. ದಿಗ್ಬಂಧನವಿಲ್ಲದೆ ಪೂಜಾಕಾರ್ಯವಿಲ್ಲ! ಪೂಜಾಕಾರ್ಯವಿಲ್ಲದೆ, ದಿಗ್ಬಂಧನವಿಲ್ಲ! ಯಾರೂ ಯಾರಿಗೂ ಪರಸ್ಪರರ ಹಿತಕಾರ್ಯಗಳನ್ನು ಮಾಡದೆ, ಕಡೆತನಕ ಹಿಡಿಯಲಾರರು. ದೇವರು ಬೇಡಿದ್ದನ್ನು ಕೊಡುವನೆಂಬ ದೃಢವಾದ ನಂಬಿಗೆಯಿಂದಲೇ ಲೋಕದಲ್ಲಿ ದೇವಪೂಜೆಯು ಇರುವದಲ್ಲದೆ, ಆ ನಂಬುಗೆಯು ಹಾರಿದಲ್ಲಿ ಆತನು ಪ್ರತ್ಯಕ್ಷ ಎದುರಿಗೆ ಬಂದರೂ ಯಾರೂ ನಮಿಸರು; ಭಯಭಕ್ತಿಯಿಂದ ಮಾತಾಡಿಸರು. ಕಾಯಕಗಳು ಪರಸ್ಪರರ ಕಲ್ಯಾಣವನ್ನು ಸಹಜವಾಗಿ ಒದಗಿಸಿಕೊಡುವವಾದ ಉಪಜೀವನದ ಧಾರ್ಮಿಕ ಕಾರ್ಯಗಳಾಗಿರುವದರಿಂದ, ಲೋಕದಲ್ಲಿ ನಿಜವಾದ ದಾನಧರ್ಮಗಳೆಲ್ಲ ಈ ಕಾಯಕಗಳಲ್ಲಿಯೇ ಅಡಗಿರುವ

ವು. ಏಕೆಂದರೆ ಉಪಜೀವನಕ್ಕೆ ಮುಖ್ಯಸಾಧನವಾದ ಅನ್ನ ಅರಿವೆಗಳ ಸಾಮಾನ್ಯವಾದ ಪೂರಯಿಕೆಯು ಇವರಲ್ಲಿಯೇ ಇರುವದು. ಖಾದಿಯನು ಬಳಿಸಬೇಕೆಂಬ ವಿಷಯದಲ್ಲಿ ಇಡೀ ಹಿಂದುಸ್ಥಾನವು ಏಕಧ್ಯೇಯವುಳ್ಳದ್ದಾಗಿರುವದರಿಂದ ಭವಿಭಕ್ತರೆಂಬ ಭೇದವ ಮಾಡದೆ ಹಿಂದುಗಳಾದ ನಾವೆಲ್ಲರೂ ಪರಿಪಾಲಿಸಬೇಕಾಗಿದೆ. ಆದುದರಿಂದ ನಮ್ಮ ದೇಶದ ಮುಂದಾಳುಗಳು ಈ ಬಗ್ಗೆ ಯಾವ ನಿಯಮಗಳನ್ನು ಗೊತ್ತುಮಾಡುವರೋ, ಅವೇ ನಿಯಮಗಳು ನಮ್ಮವಾಗಿರುವವು. ಅನ್ನ ಅರಿವೆಗಳ ಕೊರತೆಯು ಮೂಲಕವಾಗಿಯೇ ಲೋಕದಲ್ಲಿ ಪಂಚಮಹಾಪಾತಕಗಳಿಗೆ ಆಸ್ಪದವಿರುವದಲ್ಲದೆ, ಅವುಗಳ ಪೂರಯಿಕೆಯಾಗಲು, ಆ ಪಾಪಕೃತಿಗಳು ತಮ್ಮಿಂದತಾವೇ ಮಾಡುವವು. ಆದರೂ ಅವುಗಳಿಂದಾಗುವ ದುಷ್ಪರಿಣಾಮವನ್ನು ಲೋಕದ ದೃಷ್ಟಿಗೆ ತಂದುಕೊಡುವ ಸದ್ಬೋಧದಿಂದ ಅವುಗಳೊಳಗಿನ ಚಿತ್ತವೃತ್ತಿಯನ್ನು ತಿರುಗಿಸಬೇಕಾಗುವದು.

ಸ್ವಾರ್ಥಶೂನ್ಯವಾದ ನಿರ್ವಿಕಾರದ ಸಾಮ್ರಾಜ್ಯಕ್ಕೆ ನಿಜಭಕ್ತಿಯೋಗವೇ ಪ್ರಾಮುಖ್ಯವಾದ ಸಾಧನವಾಗಿರುವದು. ಅದಿಲ್ಲದೆ, ಯಾವಕಾರ್ಯಗಳಿಗೂ ಧರ್ಮಸ್ವರೂಪವು ಉಂಟಾಗಲಾರದು ಇದೇ ಮಾನವನ ಸಾರ್ಥಕ ಗೊಳಿಸುವದಾದ ಜೀವಾಳವಾಗಿರುವದರಿಂದ, ಭಕ್ತಿಯು ಶೂನ್ಯವಾಗಿ ಲೋಕದ ಆಟವು ಆಡಿನ ಮೊಲೆಗಳ ಹೊಯ್ದಾಟವಾಗಿರುವದು. ಅಂತೇ ಲಿಂಗಾಂಗಿಗಳಲ್ಲಿ ಭಕ್ತಿಯಿಲ್ಲದೆ ಯಾವ ಆಟವೂ ಇಲ್ಲ! “ ಭಕ್ತಿಯಿಲ್ಲದ ಗುರುವು ನರನಿಂದ ಕರಕಷ್ಟ ” ವೆಂಬ ಆದ್ಯರ ಅನುಭವೋಕ್ತಿಯುಂಟು. ಗುರುವರ್ಗದವರೇ, ಪ್ರಾಂಜಲ ಮನಸ್ಸಿನಿಂದ ನಿಮ್ಮ ಯೋಗ್ಯತೆಯನ್ನು ನೀವು ಬಲ್ಲವರಾಗಿ ಪವಿತ್ರವಾದ ಗುರುಗದ್ದಿಗೆಗಳನ್ನು ಹೊಲಸುಮಾಡುವದನ್ನು ಬಿಟ್ಟು, ಜಾತಿಯ ದುರಭಿಮಾನವನ್ನು ತೋರಿದು ಪೂಜೆಗೊಳ್ಳುವದನ್ನು ನಿಲ್ಲಿಸಿ, ಭಿಕ್ಷೆಬೇಡುವ ಅಧಿಕಾರವಿಲ್ಲದೆ ತಿರಿದು ತಿಂಬುವದನ್ನು ಬಿಟ್ಟು, ಭಕ್ತಿಯನ್ನು ಕಲಿಯಲು ಭಕ್ತರಾಗಿ, ಏನೊಂದು ಭೇದವಿಲ್ಲದೆ ಭಕ್ತಕೋಟಿಯಲ್ಲಿ ಬೆರೆಯುವವರಲ್ಲಿಯೇ ನಿಮ್ಮ ಗುರುತತ್ತ್ವವಿರುವದಲ್ಲದೆ ಬಣಗೌರವವನ್ನು ಮೆರೆಯಿಸಲು ಹಮ್ಮಿನಿಂದ ಎದುರಾಳುಗಳಾಗಿ ಹೆಣಗಾಡಲು ನಿಂತರೆ, ನೀವು ತುಸುದಿವಸಗಳಲ್ಲಿಯೇ ಭಕ್ತರಿಂದ ಭಂಗಿತರಾಗಿ ನಿಮ್ಮ ನಿಮ್ಮ ಸ್ಥಾನಗಳಿಂದ ಪದಚ್ಯುತರಾಗುವಿರಿ. ಈ ಮಾತು ಪದುನೊಳಗಿನ ಗಂಟು. ಆಗ ನಿಮ್ಮ ಪೂಜೆಯು ಯಾವತರಹದಿಂದಾದೀತೆಂಬದನ್ನು ತಿಳಿದು ಜಾಣರಾಗಿ ನೀವಾಗಿಯೇ ಶರಣಮಾರ್ಗಪ್ರವರ್ತಕರಾಗುವದು ಉತ್ತಮ ಪಕ್ಷವು. ಬಹಿಷ್ಕಾರ ಹಾಕಿಸಿಕೊಂಡು ಹಿಂದಿನಿಂದ ಕೂಡಿಕೊಂಬುವದು ಮಧ್ಯಮ ಪಕ್ಷವು. ಮಾನಭಂಗಿತರಾಗಿ ಪದಚ್ಯುತರಾಗುವದು ಕನಿಷ್ಠ ಪಕ್ಷವು. ಸಾಮಾನ್ಯವಾಗಿ ಸಮಾಜದ ಕೂಡ ನೀವೂ ನಮ್ಮಷ್ಟೇ ಅವನತಿಯನ್ನು ಹೊಂದಿದಾಗ್ಯೂ, ನಮ್ಮ

ಅವನತಿಗೆ ನೀವೇ ಕಾರಣವಾದುದರಿಂದ ನಿಮ್ಮ ಅಪರಾಧಕ್ಕೆ ಸರಿಯಾದ ಶಿಕ್ಷೆಯನ್ನು ಮಾಡಲು ಪ್ರಭುವರನು ಪ್ರತ್ಯಕ್ಷದಲ್ಲಿರುವನು. ಆದರೂ ಲಿಂಗಧಾರಿಗಳ ಪ್ರೇಮಭಾವದಿಂದ ನಿಮ್ಮನ್ನು ಎಚ್ಚರಿಸಿರುವದು. ಇದರ ಮೇಲೆ ನಿಮ್ಮ ಇಚ್ಛೆಯು,

ಇಲ್ಲಿಯವರೆಗೆ ವಿವರಿಸಿದ ವಿವರದಿಂದ ಹೊರಡುವ ಮುಖ್ಯವಾದ ಕಾರ್ಯಗಳಾವವೆಂಬದನ್ನು ಕೆಳಗೆ ಕ್ರಮವಾಗಿ ಕೊಟ್ಟಿರುವದು ನೋಡಿರಿ,

೧ ಅಯ್ಯಗಳಿಗೆ ಬಹಿಷ್ಕಾರವನ್ನು ಹಾಕಿ ಎಲ್ಲೆಲ್ಲಿಲ್ಲ ಅವರ ಪೂಜೆಯು ನಡೆಯದಂತೆ ಮಾಡುವದು.(ನಿಲ್ಲುವಂತೆ ಮಾಡುವದು)

೨ ಭಕ್ತರೊಳಗೆ ಕುಲಜಾತಿಗಳನ್ನೇನು ನೋಡದೆ ಊಟುಪಚಾರಗಳನ್ನೂ ಶರೀರಸಂಬಂಧಾದಿ ಕಾರ್ಯಗಳನ್ನೂ ಮಾಡುವದು.

೩ ಭಕ್ತೋತ್ತಮರನು ಆಯ್ದು ಅವರಿಂದಲೇ ಲಿಂಗಧಾರಣಾದಿ ಕ್ರಿಯೆಗಳನ್ನು ಮಾಡಿಸುವದು.

೪ ಎಲ್ಲರೂ ಕೈನೂಲಿನ ಕೈಮಗ್ಗದ ಖಾದಿಗಳನ್ನೇ ಬಳಿಸುವ ಹಾಗೆ ಮಾಡುವದು.

೫ ಧರ್ಮತತ್ತ್ವಗಳ ಬೋಧೆಯು ಎಲ್ಲೆಲ್ಲಿಲ್ಲ ನಿತ್ಯವೂ ನಡೆಯುವಂತೆ ವ್ಯವಸ್ಥೆಯನ್ನು ಮಾಡುವದು.

೬ ಭಕ್ತರು ಮನೆಯಲ್ಲಿ ಮಾಡಿದ ಶುದ್ಧ ಪಾಕವನ್ನು ಮಠಕ್ಕೆ ಒಯ್ದು, ಕುಲವಂತರೆಂದೆನ್ನಿಸಿಕೊಳ್ಳುವವರನ್ನು ಕರೆಕರೆದು ಉಣಿಸುವದನ್ನು ಬಂದುಮಾಡಿ, ಅವರು ಮನೆಗೇ ಬರುವಂತೆ ಮಾಡುವದು.

೭ ವಿವಾಹ ಪದ್ಧತಿಯಲ್ಲಿ ಬೆರೆತ ರಂಜನದೋಷಗಳನ್ನೆಲ್ಲ ತೆಗೆದು ಕೇವಲ ದೀಕ್ಷಾ ಕಾರ್ಯ, ಅಕ್ಷತಾರೋಪಣಗಳನ್ನಷ್ಟೇ ಇಟ್ಟು ಅತ್ಯಲ್ಪ ಖರ್ಚಿನಿಂದ ಮಾಡಲಿಕ್ಕೆ ಬರುವ ಹಾಗೆ ಮಾಡುವದು,

೮ ಬಾಲವಿವಾಹ ಜರಠವಿವಾಹ ವಿಷಮವಿವಾಹಗಳನ್ನು ಬಂದುಮಾಡಿ, ಕೇವಲ ಪ್ರೌಢವಿವಾಹಗಳನ್ನಷ್ಟೇ ಬಳಕೆಯಲ್ಲಿ ತರುವದು. ಅಂದರೆ ಗಂಡಿಗೆ ೨೫ ಹೆಣ್ಣಿಗೆ ೧೬ ವರ್ಷಗಳಾದ ಮೇಲೆಯೇ ಲಗ್ನವಾಗುವಂತೆ ಮಾಡುವದು.

೯ ಕಾಯಕಗಳ ವಿಷಯವಾಗಿದ್ದ, ಹಾಗು ಸಮಾಜದ ವಿಷಯವಾಗಿದ್ದ ಧರ್ಮಕಟ್ಟುಗಳು ಎಷ್ಟೂ ಕೆಡದಂತೆ ಕಾಯ್ದುಕೊಳ್ಳುವದು.

೧೦ ಸಕಲ ದಾನಧರ್ಮಗಳೂ, ಕೋರಧಾನ್ಯ ಸ್ವಯಂಪಾಕ ಕಂತಿ ಮುಂತಾದ ಭಿಕ್ಷೆಗಳೂ, ಪಸಕಿಪರಡಿಗಳೂ, ಆಯಾ ಕಾಣಿಕಾದಗಳೂ ಗುರುಲಿಂಗ ಜಂಗಮ ದಾಸೋಹಕ್ಕೆ ಸಲ್ಲುವಹಾಗೆ ವ್ಯವಸ್ಥೆಯನ್ನು ಮಾಡಬೇಕಲ್ಲದೆ, ವಿಕಾರಿಗಳೂ, ಜಡಜೀವಿಗಳೂ ಆದ ಅಯ್ಯಗಳಿಗೆ ಯಾವರೀತಿಯಿಂದಲೂ

ಸಲ್ಲದಂತೆ ಎಲ್ಲೆಲ್ಲಿಲ್ಲ ಕಟ್ಟು ಮಾಡಿ ಬಲು ಎಚ್ಚರಿಕೆಯಿಂದ ಅದನ್ನು ಪರಿಪಾಲಿಸತಕ್ಕದ್ದು.

೧೯೫ ಬಹಿಷ್ಕೃತರಾದ ಅಯ್ಯಗಳು ಮೇಲಿನ ನಿಯಮಗಳನ್ನು ಪರಿಪಾಲಿಸಲು ಸಿದ್ಧರಾದರೆ ನಮ್ಮೊಳಗೆ ಕೂಡಿಸಿಕೊಳ್ಳುವದು.

ಅನಾಚಾರದಿಂದ ದುರ್ಬಲವಾಗುತ್ತ ಬಂದಿರುವ ಪಿಂಡಪ್ರಕೃತಿಗಳು ಈಗ ಬಹಳ ದಿವಸಗಳವರೆಗೆ ತಾಳದಂತಾಗಿರುವವು. ಆದರಿಂದ ಮಾನವನ ಸರಾಸರಿ ತಾಳಿಕೆಯ ಮಾನವು ನೂರು ವರುಷವಿದ್ದದ್ದು ನಾಲ್ವತ್ತು ವರ್ಷಕ್ಕೆ ಬಂದು ನಿಂತಿರುವದು. ಕಾರಣ ಈಗಿನ ಮನ್ವಂತರದಲ್ಲಿ ಬಾಲವಿವಾಹದಿಂದಲೂ ಜರಠವಿವಾಹದಿಂದಲೂ ವಿಷಮವಿವಾಹದಿಂದಲೂ ವ್ಯಭಿಚಾರದ ಅಭಿವೃದ್ಧಿಗೆ ಒಳ್ಳೇ ಅನುಕೂಲ ಪರಿಸ್ಥಿತಿಯು ಉಂಟಾಗಿರುವದು. ಆದರಿಂದ ಕಲ್ಯಾಣವೆನಿಸುವ ವಿವಾಹಗಳೇ ಕೇಡಿಗೆ ಕಾರಣವಾಗಿ ಕೆಲವಂಶದಿಂದ ಅಕಲ್ಯಾಣವೆನಿಸಹತ್ತಿರುವವು. ತರುಣರೂ ಸುಶಿಕ್ಷಿತರೂ ಆದ ಭಕ್ತವೃಂದವು ಒಂದೇಸವನೆ ಗಂಟು ಬಿದ್ದು ಸಮಾಜಸೇವೆಯಲ್ಲಿ ಇದೊಂದು, ಬಾಲವಿವಾಹ ಹಾಗು ಜರಠವಿವಾಹ ವಿಷಮವಿವಾಹ ಇವುಗಳನ್ನು ಅತಿ ತೀವ್ರದಲ್ಲಿ ನಿಲ್ಲಿಸಿ ಬಿಡುವ ಕಾರ್ಯವನ್ನು ಮಾಡಬೇಕಾಗಿರುವದು, ಬಾಲವಿವಾಹವು ಬಡತನದ ಮೂಲಕ ಹಗಲೆಲ್ಲ ಖರ್ಚುಮಾಡಿ ಮಾಡುವದಾಗುದಿಲ್ಲೆಂದೂ, ವಯಸ್ಸಿಗೆ ಬಂದ ಮಕ್ಕಳ ಮದುವೆಯಲ್ಲಿ ಖರ್ಚಿನೊಳಗೆ ಖರ್ಚು ಎಂದೂ ತೊಟ್ಟಿಲಲ್ಲಿ ಆಡುವ ಕೂಸುಗಳನ್ನೂ ಸಹ ಎಳೆದು ಧಾರೆಯೆರಕೊಡುವ ಪದ್ಧತಿಯಿಂದ ಬೆಳೆದಿರುವದು. ಅತ್ಯಲ್ಪ ಖರ್ಚಿನಿಂದ ಮಾಡಲಿಕ್ಕೆ ಬರುವಹಾಗೆ ತಿದ್ದುಪಾಟನ್ನು ಮಾಡಿದರೆ, ಇದು ಎಷ್ಟೋ ಮಟ್ಟಿಗೆ ಕಡಿಮೆಯಾಗುವದು. ಸೃಷ್ಟಿಯು ತನ್ನ ಸ್ವಾಭಾವಿಕ ಧರ್ಮದಲ್ಲಿ ಅದರ ಅನಿಷ್ಟ ಫಲವನ್ನು ಲೋಕಕ್ಕೆ ಉಣಿಸಿ, ತಾನಾಗಿಯೇ ಆ ಮೆಟ್ಟಿಗೆ ಬರುವ ಹಾಗೆ ಒಳಹೊರಗೂ ಪರಿಸ್ಥಿತಿಯನ್ನುಂಟುಮಾಡಿರುವದು. ಆದರೂ ತಿದ್ದುವಿಕೆಯು ಯಾವಾಗಲು ಬಾಹ್ಯ ಪ್ರೇರಣೆಯನ್ನು ಅಪೇಕ್ಷಿಸುತ್ತಿರುವದಾದುದರಿಂದ, ಈ ಸಮಯವು ಈ ಕಾರ್ಯಕ್ಕೂ ಒಳ್ಳೇ ಹದವಾಗಿರುವದೆಂದು ಇಲ್ಲಿ ಸೂಚಿಸಿರುವದಾಯಿತು. ಹೆಣ್ಣಿಗೆ ತೆರವು ಕೊಡುವದನ್ನೂ, ಗಂಡಿಗೆ ವರದಕ್ಷಿಣೆ ತಕ್ಕೊಳ್ಳುವದನ್ನೂ ಬಂದು ಮಾಡತಕ್ಕದ್ದು. ಇದಾವರೂ ಕಾಯಕಗಳ ವ್ಯವಸ್ಥೆಯು ನೆಲೆಗೊಂಡಲ್ಲಿ, ತನ್ನಿಂದ ತಾನೆ ಆ ಮನೆಗೆ ಬಂದೇ ತೀರುವದು. ಬರುವವರೆಗೆ ಎಚ್ಚರಪಡಬೇಕಾಗಿರುವದು. ಜರಠ ವಿವಾಹವು ಬರೇ ದುಡ್ಡುಳ್ಳವರ ಕೆಲಸವಾದಾಗ್ಯೂ, ಅದು ಕೇವಲ ವ್ಯಭಿಚಾರಕ್ಕೆ ಕಾರಣವಾಗಿರುವದರಿಂದ ಆ ವಿಷಯದಲ್ಲಿ ಅತಿ ಧೀರರಾಗಿ ಟೊಂಕ ಕಟ್ಟಬೇಕಾಗಿರುವದು.

ಅಲ್ಲಲ್ಲಿ ಅವಶ್ಯ ವಿದ್ದಷ್ಟು ಲಿಂಗಾಂಗಿಯ ತತ್ತ್ವ ವಿಚಾರವನ್ನು ಮುಂದಿಟ್ಟೇ ದೋಷಗಳನ್ನೂ ಅವುಗಳ ಪರಿಹಾರಕ ಉಪಾಯಗಳನ್ನೂ, ಈಗ್ಗೇ ಇಷ್ಟು ಏಕೆ

ತ್ವರೆಮಾಡಬೇಕೆಂಬ ಕಾರಣವನ್ನೂ, ಅತ್ಯವಶ್ಯವಾಗಿ ಮಾಡಬೇಕಾದ ಕಾರ್ಯ ಗಳನ್ನೂ ವಿವರಿಸಿರುವದಷ್ಟೇ! ಅಲ್ಲದೆ ಲಿಂಗಧಾರಣದ ಅವಶ್ಯಕತೆಯನ್ನೂ ಸ್ವಲ್ಪ ದರ ಮಟ್ಟಿಗೆ ದಿಗ್ದರ್ಶನ ಮಾಡಿತು. ಮುಂದಿನ ಭಾಗದೊಳಗಿನ ಉಪಸಂಹಾರವ ನ್ನಷ್ಟು ಮಾಡಿದಲ್ಲಿ ತಮ್ಮಗಳಿಗೆ ಹೇಳಬೇಕಾದದ್ದನ್ನೆಲ್ಲ ಹೇಳಿದಂತಾಗುವದು. ಶ್ರೀ ಪ್ರಭುವರನು ಹೇಗೆ ನಡೆಯಲು ಪ್ರೇರಿಸುವನೋ, ಹಾಗೆ ನಡೆಯುವದು ನಮ್ಮೆಲ್ಲರ ಕರ್ತವ್ಯವು. ಆವನ ಇಚ್ಛೆಯಂತೆ ಕುಣಿಸ್ಯಾಡಿ ದೇಹ ಹಾಗು ಜನ್ಮ ಸಾರ್ಥಕ ಮಾಡಿಕೊಳ್ಳುವ ಕಲ್ಯಾಣದ ಕಾರ್ಯಕ್ಕೆ ಟೊಂಕ ಕಟ್ಟೋಣ ಏಳಿರಿ ತಡಮಾಡದೆ, ಎಷ್ಟೂ ಅನುಮಾನಿಸದೆ!

## ೫ನೆಯ ಭಾಗ

## ಉಪಸಂಹಾರವು.

ಲೋಕದಲ್ಲಿ ಯಂತ್ರಗಳಿಂದಾದ ಉದ್ಯೋಗಕ್ರಾಂತಿಯು, ಕೈಗಾರಿಕೆಯ ಉದ್ಯೋಗಗಳನ್ನೆಲ್ಲ ನಿರ್ಮೂಲಮಾಡಿ ಕೂಲಿಕಾರರ ಸ್ವಾತಂತ್ರ್ಯವನೆಲ್ಲ ಹರಣ ಮಾಡಿ. ಅವನ್ನು ಕಂಪನಿಗಳ, ಸಾವುಕಾರರ, ದೊಡ್ಡ ದೊಡ್ಡ ಜಮೀನದಾರರ ಪಾಲುಮಾಡಿಬಿಟ್ಟಿರುವದು. ಇದು ಸಾಮಾನ್ಯವಾಗಿ ನಮ್ಮ ಸಮಾಜದಲ್ಲಿಯೂ ಒಳಹೊಕ್ಕು, ಅಪ್ರಾಮಾಣಿಕತನ, ಅಪನಂಬುಗೆ, ಸ್ವಾರ್ಥಪರಾಯಣತೆ, ಮುಂತಾ ದವುಗಳ ಮೂಲಕ ಹೇಳಿಕೊಳ್ಳುವ ಕಂಪನಿಗಳಿರದಿದ್ದರೂ, ಸಾವುಕಾರರನ್ನು, ದೊಡ್ಡ ದೊಡ್ಡ ಜಮೀನದಾರರನ್ನೂ ಮುಂದು ಮಾಡಿರುವದು. ಸಾವುಕಾರರೆ ಲ್ಲರೂ ಬಹಳಮಾಡಿ ವ್ಯಾಪಾರ ಉದ್ಯೋಗದಲ್ಲಿ ಮುಂದರಿದ ಕುಶಲಮತಿಗಳಾದ ಅಣ್ಣಾಗಳು. ಮಠ ಮಾನ್ಯೆದವರೂ, ಗೌಡ ದೇಸಾಯಿ ದೇಶಪಾಂಡೆಯುವರೂ ದೊಡ್ಡ ದೊಡ್ಡ ಜಮೀನದಾರರು. ಈ ಜಮೀನದಾರರು ಬಹಳಮಾಡಿ ಅಯ್ಯ ಗಳೂ ಪಂಚಮಸಾಲೆಯುವರೂ ಇರುವರು. ಇವರಲ್ಲಿ ಅಣ್ಣಾಗಳು ಜಾಣರು ಅಯ್ಯಗಳು ಬಹಳಮಾಡಿ ಕೋಣರು! ( ಮಡ್ಡರು ) ಈ ಜಾಣರೂ, ಆ ಕೋಣ ರೂ ( ಮಡ್ಡರೂ ) ಸರಕಾರಿಯ ವತನೀ ಅಮಲದಾರರ ಮುರವತ್ತನ್ನು ಕಾಯು ಕೊಂಡು, ಬಡತಂಡದ ಮೇಲೆ ತಮ್ಮ ದೊಡ್ಡಿಸ್ತನವನ್ನು ಮೆರೆಯಿಸುವವರು; ಅಲ್ಲದೆ ಜಾಣರಾದ ಅಣ್ಣಾಗಳು ಕೋಣರಾದ ಅಯ್ಯಗಳ ಮೇಲೆಯೂ, ತಮ್ಮ ಛಾಪು ಹಾಕಿ, ಪ್ರತಿಯೊಂದು ಧಾರ್ಮಿಕ, ಕಾರ್ಯವನ್ನು ತಮ್ಮನ್ನು ಕೂಡಿಕೊಂ ಡೇ ಮಾಡುವಹಾಗೆ ಸಾಧಿಸಿಕೊಂಡಿರುವರು. ಆದರಿಂದ ಪ್ರತಿಯೊಂದು ಧಾರ್ಮಿ ಕ ವ್ಯಾವಹಾರಿಕ ಸಾರ್ವಜನಿಕ, ಯಾವದೇ ತರಹದ ಸಾಮಾಜಿಕ ಹಾಗು ರಾಜಕೀಯ ಕೆಲಸಗಳಲ್ಲೆಲ್ಲ ತಂತ್ರಗಾರರಾದ ಅಣ್ಣಾಗಳ ಅಂಗವು ಇದ್ದದ್ದು ಕಂ ಡು, ಎಲ್ಲೆಲ್ಲೆಲ್ಲ ಇವರ ವಜನವು ಬಿದ್ದಿರುವದು. ಬಹಳಮಾಡಿ ಧಾರ್ಮಿಕ ಸರ ಕಾರದ ಅಂಗದಲ್ಲಿ ಈ ಜನರೇ ಇರುವದರಿಂದ, ಹೊರಗೆ ಬಳಿಸುತ್ತಿರುವ ತಂತ್ರೋ ಪಾಯಗಳು ಧಾರ್ಮಿಕ ಸಂಗತಿಗಳಲ್ಲಿಯೂ ಆವರಿಸಿಕೊಂಡಿರುವವು. ಆದರಿಂ

ದ ಮಂತ್ರಶಕ್ತಿಯು ಬಲವು ಕುಂದಿ, ಅದು ಏನೊಂದು ತನ್ನ ಅರ್ಥದ ಜ್ಞಾನವನ್ನೂ ನೀಡಕೊಡದ, ಸತ್ತ್ವಹೀನವಾದ, ಕೇವಲ ಐದು ಇಲ್ಲವೆ ಆರು ಅಕ್ಷರಗಳ ಗುಂಪಾಗಿ ಬಿಟ್ಟಿರುವದು. ಮಂತ್ರ ಶಕ್ತಿಯಿಂದ ಭೂವ್ಯೋಮಾಕಾಶಗಳನ್ನು ಅದಲು ಬದಲು ಮಾಡುವ ಸಾಮರ್ಥ್ಯವುಳ್ಳ ಗುರುವರ್ಗವು, ತನ್ನ ಹೀನ ಕೃತಿಯಿಂದ ಬೆದರಿ ಬೆಚ್ಚಿ ಕೇವಲ ಕುಶಲಮತಿಗಳ ತಂತ್ರೋಪಾಯಕ್ಕೆ ಒಳಪಟ್ಟಿರುವದು. ಕೋಣ ರಾದ ಅಯ್ಯಗಳಿಂದ ಮಾಡಿಸುವ ಧಾರ್ಮಿಕ ಕಾರ್ಯಗಳಲ್ಲೆಲ್ಲ ತಂತ್ರಗಾರರ ತಂತ್ರೋಪಾಯವೇ ತಂತ್ರೋಪಾಯವು. ಈ ಕುಶಲಮತಿಗಳು ಸರಕಾರಿಯ ವರ್ತನೀ ಅಮಲದಾರರನ್ನು (ಪಂಚಮಸಾಲೆಯವರನ್ನು), ಬರೇ ಹೊರಗಿನ ಶೀಲ ಬಳಿಕೆಯ ದೃಷ್ಟಿಯಿಂದ, ಕಡಿಮೆಯ ದರ್ಜೆಯವರೆಂದು ಭಾವಿಸಿಕೊಂಡಾಗ್ಯೂ, ಅವರು ಬಹಳಮಾಡಿ ಬಾಹ್ಯ ಸರಕಾರದ ಹಾಗು ಧಾರ್ಮಿಕ ಸರಕಾರದ ಅಧಿಗವಾಗಿರುವದನ್ನೂ, ಪಂಚಾಚಾರ್ಯರ ಪಂಚ ಸೂತ್ರಗಳಿಗೆ ಹೊಂದಿ, ವೀರಶೈವ ಸೃಷ್ಟಿಯ ಆದಿಕಾಲದಿಂದ ಇದ್ದವರೆಂದು ವದಂತಿ ಇರುವದನ್ನೂ ಕಂಡು, ಅವರನ್ನು ಲಿಂಗವಂತರ ವರ್ಗೀಕರಣಮಾಡುವಾಗ್ಗೆ ಕಡಿಮೆಯ ದರ್ಜೆಯಲ್ಲಿ ಗಣಿಸಿರುವದಿಲ್ಲ. ಆದರೂ ನಡವಳಿಕೆಯಲ್ಲಿ ಕೋಣರಾದ ಅಯ್ಯಗಳನ್ನು ಮುಂದೆಮಾಡಿಕೊಂಡು, ತಮ್ಮ ಶೀಲಬಳಿಕೆಯನ್ನು ಮೇಲುಮಾಡಿಕೊಂಡಿರುವರು. ಈ ಮಾತಿಗೆ ಪಂಚಮಸಾಲಿಯವರು ಬಣಜಿಗರ ಮನೆಯಲ್ಲಿ ಉಣ್ಣುತ್ತಿರುವದೂ, ತಮ್ಮ ಹೆಣ್ಣುಗಳನ್ನು ಅವರಿಗೆ ಕೊಡುತ್ತಿರುವದೂ, ಬಣಜಿಗರು ಪಂಚಮಸಾಲೆಯವರ ಮನೆಯಲ್ಲಿ ಉಣ್ಣದಿರುವದೂ, ತಮ್ಮ ಹೆಣ್ಣುಗಳನ್ನು ಅವರಿಗೆ ಕೊಡದಿರುವದು ಸಾಕ್ಷಿಯಾಗಿದೆ.

ಲಿಂಗದ ಮಹತ್ತ್ವವೂ, ಲಿಂಗವಂತ ಧರ್ಮದ ಉದಾತ್ತವಾದ ತತ್ವಜ್ಞಾನವೂ, ಲಿಂಗಾನುಭವವೂ ಎಷ್ಟೂ ಇಲ್ಲದ ಗುರುವರ್ಗದವರನ್ನು ಕೂಡಿಕೊಂಡು, ತಂತ್ರಗಾರರು ತಮ್ಮದು ನಡೆಯುವದೆಂದು ತಮ್ಮ ಕೇವಲ ಬಾಹ್ಯ ಶೀಲ ಬಳಿಕೆಯ ದೃಷ್ಟಿಯಿಂದ, ಷಟುಸ್ಥಳದ ಮಾರ್ಗಾನುವರ್ತನದಲ್ಲಿ ಕೇವಲ ಸ್ಥಲಕಟ್ಟಿನಿಂದ ಬೇರೆ ಬೇರೆಯಾಗಿ ತೋರಿಸಲಿಕ್ಕೆ ಮಾತ್ರ ಬರುವದೂ, ಕಾಯಕಗಳ ಕುಲಭೇದಗಳನ್ನು ಮಾಡಿ ವರ್ಗೀಕರಿಸಲಿಕ್ಕೆ ಎಂದೂ ಬಾರದಿರುವದೂ ಆದ ಈ ಸಮಾಜದಲ್ಲಿ. "ವೀರಶೈವ ಬ್ರಾಹ್ಮಣರೆಂದೆನ್ನಿಸಿಕೊಳ್ಳಬೇಕೆಂಬ ದುರಭಿಮಾನಕ್ಕೆ ಬಿದ್ದು, ಮಾಡಿಕೊಟ್ಟ ವರ್ಗೀಕರಣವನ್ನು ನೋಡಿದರೆ, ಯಾವ ಸುಶಿಕ್ಷಿತ ಲಿಂಗವಂತನಿಗೂ ಕೆಡಕೆನಿಸದೆ ಇರದು. ತಂತ್ರಗಾರರು ಯಾವ ದೃಷ್ಟಿಯ ದೋಷದಿಂದ ಉಳಿದ ಉದ್ಯೋಗದವರನ್ನು ಕೆಳಗಿನ ದರ್ಜೆಯಲ್ಲಿ ಗಣಿಸಲು ಪ್ರೇರಿಸಿರುವರೋ, ಆ ದೋಷವು ಇವರಲ್ಲಿಯೇ ಹೆಚ್ಚುಪ್ರಮಾಣದಿಂದಿರುವದು. ಈ ಮಾತಿಗೆ ಚುರುಕು ಬುದ್ಧಿಯು ಹೊಸರಕ್ತದ ಮಿಶ್ರಣದಿಂದುಂಟಾಗುವದೆಂದು ಲೌಕಿಕಾನುಭವವು ಸಾರುತ್ತಿರುವದೇ ಸಾಕ್ಷಿ! ನೋಡಿದಿರಾ, ಇವರು ಲೌಕಿಕ

ಹಿಂದೂ ಧರ್ಮಕ್ಕೆ ಹೋಲಿಸಿ ವರ್ಗೀಕರಣಮಾಡಲು ಪ್ರೇರಿಸಿದ ಕೇಡನ್ನು! ಎಷ್ಟು ನಿಷ್ಪಕ್ಷಪಾತದ್ದಾಗಿರುವದು ! ಬ್ರಾಹ್ಮಣರೆಂದು ಬಗೆವ ಅಯ್ಯಗಳಿಗೂ, ಕೆಲವಂಶದಿಂದ ಕ್ಷತ್ರಿಯರೆಂದೂ, ಕೆಲವಂಶದಿಂದ ವೈಶ್ಯರೆಂದೂ ಬಗೆದ ಪಂಚಮ ಸಾಲಿಯವರಿಗೂ, ಕೇವಲವೈಶ್ಯರೆಂದು ಬಗೆವ ಬಣಜಿಗರಿಗೂ, ಬಳಿಕೆಯಲ್ಲಿ ರಕ್ತ ಸಂಬಂಧ ಮಾಡಿಕೊಂಡಿರುವದರಿಂದ, ಇವರೆಲ್ಲರೂ ಪೂರ್ಣ ಲಿಂಗಾಯತರಂತೆ; ರಕ್ತಸಂಬಂಧವಿರದ ಕುಡವಕ್ಕಲಿಗರು ವೈಶ್ಯಕಾಯಕವೆನಿಸುವ ಒಕ್ಕಲತನವನ್ನು ಮಾಡಿದರೂ, ಆದಿಬಣಜಿಗರು ವ್ಯಾಪಾರವನ್ನೇ ಮಾಡಿದರೂ ಅವರೂ, ಉಳಿದ ಎಲ್ಲ ಅಷ್ಟಾವರಣ ಬಳಿಕೆಯ ಲಿಂಗವಂತರೂ ಕೂಡಿಸಿಕೊಂಡ ಲಿಂಗಾಯತ ರಂತೆ; ಕಡಿಮೆಯ ಉದ್ಯೋಗದಲ್ಲಿದ್ದು ಲಿಂಗ ಧರಿಸಿದವರೆಲ್ಲರೂ ಅರಮರ್ಧ ಲಿಂ ಗವಂತರಂತೆ! ಇಷ್ಟೇ ಅಲ್ಲ! ತಂತ್ರಗಾರರ ಈ ಕುಟಿಲಕುಯುಕ್ತಿಯು ಬಹಳ ದೂರದವರೆಗೆ ಇಳಿದಿರುವದು. ಈಗಿನ ಸುಶಿಕ್ಷಿತರ ವಿವೇಕದೃಷ್ಟಿಗೆ ಬಹುದಿವ ಸದಿಂದ ಸಾಧಿಸಿದ ತಮ್ಮ ಹುಳುಕು ಗೊತ್ತಾದರೆ, ಸಮಾಜದಲ್ಲಿ ತಮ್ಮ ಅವಹೇ ಲನವಾಗುವದೆಂದು ಬಗೆದು,ಪ್ರತಿಯೊಂದು ಸಾಮಾಜಿಕ ಕಾರ್ಯದಲ್ಲಿ ಒಳ್ಳೇ ದಕ್ಷರಾಗಿ ನಡೆಯುತ್ತಿರುವರು. ಇಂತಹದೊಂದು ಕಾರ್ಯದಿಂದ ಇಡೀ ಸಮಾ ಜಕ್ಕೆ ಕಲ್ಯಾಣವಾಗುವದೆಂದು ಕಂಡುಬಂದರೂ, ಆ ಕಾರ್ಯದಲ್ಲಿ ತಮ್ಮ ಹುಳು ಕು ಹೊರಬೀಳುವ ಪ್ರಸಂಗವಿದ್ದಲ್ಲಿ, ಆ ಕಾರ್ಯವನ್ನೇ ನಡೆಯಗೊಡದಂತೆ ಮಾಡಲಿಕ್ಕೆ ತಮ್ಮ ತಂತ್ರೋಪಾಯಗಳನ್ನು ಪರಮಾತ್ಮನ ಹೆದರಿಕೆಯೂ ಸಹ ಇಲ್ಲದೆ ಮಾಡುತ್ತಿರುವರು. ಬಸವಾದಿ ಪ್ರಮಥರು ಆಚರಿಸಿ ತೋರಿಸಿದ ಶರಣ ಮಾರ್ಗವು ಇವರಿಗೆ ಎಷ್ಟೂ ಸಮ್ಮತವಾದುದಲ್ಲ. ಕೆಳಗಿನ ದರ್ಜೆಯವರೆಂದು ಗಣಿಸಲ್ಪಟ್ಟವರು ತಮ್ಮನ್ನು ಕೂಡಿಕೊಳ್ಳಲಿಕ್ಕೆ ಎಂದು ಬಂದಿರಬಾರದು; ಅಂತ ಹ ಮತ್ತೊಂದು ತಂತ್ರೋಪಾಯವನ್ನು ಮಾಡಬೇಕೆಂದು ಬಹುದಿವಸಗಳಿಂದ ಹೊಂಚುಹಾಕುತ್ತ ಬಂದಿದ್ದರು. ಕೋಣರಾದ ಅಯ್ಯಗಳಲ್ಲಿ ವಿರಕ್ತರಿಗೂ, ಪಟ್ಟಚರಾಧಿಪರಿಗೂ ಗೌರವದ ವಿಷಯದಲ್ಲಿ ಮನಸ್ತಾಪವುಂಟಾಗುತ್ತಿರುವದ ನ್ನು ಕಂಡು, ಅದನ್ನು ಉಪಯೋಗಿಸಿಕೊಂಡು, ಬಹು ದಿವಸದಿಂದ ಹೊಂಚು ಹಾಕಿಕೊಂಡಿದ್ದ ಉಪಾಯವನ್ನು ಸಾಧಿಸಿಕೊಂಡರು.

ಈ ಮಾತಿಗೆ ಅಯ್ಯಗಳಲ್ಲಿ ಗುರುವರ್ಗದವರೆಂದೂ, ವಿರಕ್ತರೆಂದೂ ಭೇದ ಹುಟ್ಟಿ, ಇಡೀ ಸಮಾಜವನ್ನೇ ಇಬ್ಭಾಗಮಾಡುವದಾದ, ಪಟ್ಟಚರಾಧಿಪರ ಪಕ್ಷ ದವರೆಂದೂ, ವಿರಕ್ತರ ಪಕ್ಷದವರೆಂದೂ ಕದನವೆದ್ದಿರುವದೇ ಸಾಕ್ಷಿ! ಪಟ್ಟಚರಾಧಿ ಪರ ಪಕ್ಷಕ್ಕೆ ತಂತ್ರಗಾರರೇ ಹೆಚ್ಚು ಪ್ರಮಾಣದಿಂದ ಸೇರಿಕೊಂಡಿರುವದೇ ಸಾಕ್ಷಿ! ಇವರಲ್ಲಿ ಕೆಲವು ಮೋಸುಗಾರರು ಮೇಲೆ ಮೇಲೆ ವಿರಕ್ತಪಕ್ಷದವರಂತೆ ನಟಿಸಿ ಒಳಗಿಂದೊಳಗೆ ಸಂಪೂರ್ಣವಾಗಿ ಪಟ್ಟಚರಾಧಿಪರ ಪಕ್ಷದವರಾಗಿರುವದೇ ಸಾಕ್ಷಿ! ಶ್ರೀಮದ್ಬಸವಾಲ್ಲಮರ ನಿಂದಕ ಪ್ರಕರಣದಲ್ಲಿ, ಲಿಂಗವಂತರೆಲ್ಲರೂ ಬಸವನ

ಸಂತತಿಯವರು ಅಹುದೆಂದು ಸಿದ್ಧಪಡಿಸುವದನ್ನು ಉದಾಸೀನಮಾಡಿ, ಪೂರ್ಣ ಲಿಂಗಾಯತರಲ್ಲಿ ಎಣಿಸಲ್ಪಟ್ಟ ಮುಖಂಡರು ಹೋಳುದೆಗೆದುದೇ ಸಾಕ್ಷಿ! ಮುಂದೆ ಅಪೀಲದ ದೆಸೆಯಿಂದ ಅಪಮಾನವಾಗಿರುವದೆಂಬ ಅರ್ಜಿಗಳನ್ನು, ನೇಕ ನಾಮದಾರ ಗವ್ಹರ್ನರ ಇನ್ ಕೌನ್ಸಿಲ್ ಮುಂಬಯಿ ಇವರ ಕಡೆಗೆ ಮಾಡಿಕೊಳ್ಳಿರೆಂದು ಜಾಹೀರ ಪಡಿಸಲು, ಅಪಮಾನವಾಗಿರುವದೆಂದು ಸಮಾರು ಐವತ್ತು ಅರ್ಜಿಗಳೂ, ಅಪಮಾನವಾಗಿಲ್ಲೆಂದು ಸುಮಾರು ನೂರಾ ಐವತ್ತು ಅರ್ಜಿಗಳೂ ಹೋದುದೇ ಸಾಕ್ಷಿ; ಮೊನ್ನೆ ಬೆಂಗಳೂರಲ್ಲಾದ ಹತ್ತನೆಯ ವೀರಶೈವ ಮಹಾಸಭೆಯ ಅಧ್ಯಕ್ಷರ ವಿಷಯವಾಗಿ ಗೊಂದಲವೆದ್ದು, ಮಹಾಸಭೆಯನ್ನು ನಿಲ್ಲಿಸಲು ಧಾರವಾಡದ ಫರ್ಸ್ಟಕ್ಲಾಸ ಸಬ್‌ಜಜ್ಜ ಕೋರ್ಟಿನಲ್ಲಿ ದಾವೇ ತಂದು ಬಂದೀ ಹುಕುಮು ಮಾಡಿಸಿದುದೇ ಸಾಕ್ಷಿ! ಮತ್ತು ಈ ತಂತ್ರೋಪಾಯದವರು ವೀರಶೈವ ಮಹಾಸಭೆಯು ಮುಂದೆ ಎಂದೆಂದೂ ನೆರೆಯದಂತೆ ಮಾಡುವೆವೆಂದು ಜನರ ಮುಂದೆ ಸಾರಹತ್ತಿರುವದೇ ಸಾಕ್ಷಿ!

ಸಾರಾಂಶ ಬಹಳಮಾಡಿ ತಂತ್ರಗಾರರೆಲ್ಲರೂ ಕುಲಕಂಟಕರಾಗಿ ಸಮಾಜದೊಳಗಿನ ಕಾಯಕಗಳನ್ನೂ ಶ್ರೀಮದ್ಬಸವಣ್ಣನು ಹಾಕಿಕೊಟ್ಟ ಕಟ್ಟುಗಳನ್ನೂ ಮುರಿದು ಹಸಗೆಡಿಸಿ, ಕಾಯಕದವರು ಉದ್ಯೋಗವಿಲ್ಲದೆ ಉದ್ಯೋಗಕ್ಕಾಗಿ ಮನೆ ಮನೆ ಊರು ಊರು ತಿರಗುವಂತೆಯೂ, ಅನ್ನವಸ್ತ್ರಗಳಿಗೆ ಪಿರಿಯಾಗುವಂತೆಯೂ ಮಾಡಿ, ಕಲ್ಯಾಣಕಂಟಕರೂ ಆಗಿರುವರು; ಮತ್ತು ಅಯ್ಯಗಳೆಲ್ಲರೂ ಬಹಳಮಾಡಿ ಇಡೀ ಸಮಾಜವು ಧರ್ಮದಿಂದ ಪತಿತವಾಗುವಂತೆಯೂ, ಹೀನ ನಡತೆಯಿಂದ ಶೂದ್ರಕೋಟಿಯಲ್ಲಿ ಗಣಿಸಲ್ಪಡುವಂತೆಯೂ, ಪಂಚಮಹಾಪಾತಕಗಳಿಗೆ ಗುರಿಮಾಡಿ ಗುನ್ಹೆಗಾರ ಜಾತಿ ( Criminal Tribe ) ಎಂದು ಅನ್ನಿಸಿಕೊಳ್ಳುವಂತೆಯೂ ಮಾಡಿ, ಕಲ್ಯಾಣಕಂಟಕರೂ, ತಮ್ಮ ಕುಲವೇ ಶ್ರೇಷ್ಟವಾದದ್ದೂ ಪೂಜ್ಯವಾದದ್ದೂ ಎಂದು ಸಾಧಿಸಿಕೊಳ್ಳುತ್ತಿರುವ ಕುಲಕಂಟಕರೂ ಆಗಿರುವರು. ಇವರಿಬ್ಬರೂ ಕೂಡಿ ಹಕ್ಕು ಬಾಬುಗಳುಳ್ಳ ಸರಕಾರಿಯ ವತನೀ ಅಮಲದಾರರಾದ ಗೌಡ ಶಾನಬೋಗ ದೇಸಾಯಿ ಮುಂತಾದವರನ್ನು ಬರೇ ಬಾಯಿಮಾತಿನಿಂದ ಪೂರ್ಣ ಲಿಂಗಾಯತರಲ್ಲಿ ಹಾಕಿಕೊಂಡಂತೆ ಮಾಡಿ ಅವರ ಮೂಗಿಗೆ ತುಪ್ಪಾಒರಿಸಿಬಿಟ್ಟಿರುವರು. ಮತ್ತು ಕೃತಿಯಿಂದ ಉಳಿದ ಸ್ವೀಕರಿಸಿದ ಲಿಂಗಾಯತರಲ್ಲಿ ಗಣಿಸಲ್ಪಟ್ಟ ಹಚ್ಚೊಂಬತ್ತೂ ಕಾಯಕದವರ ಕೂಡ ಹೇಗೋ ಹಾಗೆ, ದೀಕ್ಷೆಯಿಂದ ಪಂಚಮಸಾಲೆಯವರ ಹೆಣ್ಣುಗಳನ್ನು ತೆಗೆದುಕೊಳ್ಳುವ ಸಾಂಪ್ರದಾಯವನ್ನಷ್ಟು ಹೊರತುಪಡಿಸಿ, ಆ ಪಂಚಮಸಾಲಿಯವರಲ್ಲಿಯೂ ಕೂಡ ಬಳಿಕೆಯನ್ನಿಟ್ಟು ಆಚರಿಸುತ್ತಿರುವ ತಂತ್ರಗಾರರ ಕುಲಕಂಟಕತನವನ್ನು ನೋಡಿದರೆ, ಹಿಂದೆ ಶ್ರೀಮದ್ಬಸವಾದಿ ಪ್ರಮಥರಿಂದ ಕೊಲೆಗೆ ಪಾತ್ರನಾದ ಬಿಜ್ಜಳರಾಯನು ತನ್ನ ಯಾವತ್ತೂ ಬಳಗದೊಂದಿಗೆ ಶ್ರೀಮದ್ಬಸವಣ್ಣನಿಂದ ಸ್ಥಾಪಿತ

ವಾದ ಈ ಲಿಂಗವಂತ ಸಮಾಜದ ಅಭೇದ್ಯವಾದ ದುರ್ಗವನ್ನು ಮೋಸದಿಂದ ಒಳಹೊಕ್ಕು, ಹೇಳಹೆಸರಿಲ್ಲದಂತೆ ಮಾಡಬೇಕೆಂದು, ಈ ತಂತ್ರಗಾರರ ತಂಡದ ಲ್ಲಿ ತಲೆಯೆತ್ತಿ, ತಳವೂರಿದಂತೆ ಕಾಣುವದು. ಇವರು ತಮ್ಮ ಕುಶಲತನದ ತಂತ್ರೋಪಾಯದಿಂದ ಸಮಾಜಸರಕಾರದ ಆಳರಸರಾದ ಗುರುವರ್ಗದವರನ್ನು ಸೂತ್ರಗೊಂಬೆಯಂತೆ ಮಾಡಿ, ಹಕ್ಕುಬಾಬುಗಳುಳ್ಳ ಸರಕಾರಿಯ ವತನೀ ಆಮ ಲದಾರರ ಮೇಲೆ ತಮ್ಮ ಛಾಪು ಹಾಕಿ, ಇಡೀ ಸಮಾಜವನ್ನೆಲ್ಲ, ಏನೊಂದು ತಿಳಿ ಯದಹಾಗೆ ಬರೇ ಸವಿಮಾತುಗಳಿಂದ ಹಿತವಾದಿಗಳಂತೆ ನಟಿಸುತ್ತ, ಯಾವ ತತ್ತ್ರ ರೀತಿಯಿಂದ ಜಿಗಳಿಯಂತೆ ಹಿಂಡಿ ಹಿಚಿಕಿ ಇಹಪರನಾಸ್ತಿಯಾಗುವಂತೆ ಮಾಡುತ್ತಿರುವದನ್ನು ನೋಡಿದರೆ, ಬಿಜ್ಜಳನ ಸಂತತಿಯವರೇ ಅಹುದೆಂದು ಸ್ಪಷ್ಟವಾಗುವದು. ಶ್ರೀಮದ್ಬಸವಣ್ಣನ ವ್ಯವಸ್ಥೆಯಲ್ಲಿ ಇಂತಹದೊಂದು ವ್ಯಕ್ತಿಗೆ ಪೂರ್ಣ ಸ್ವಾತಂತ್ರ್ಯವಿರುವದೆಂದು ಹೇಳಲಿಕ್ಕೆ ಬರುವ ಹಾಗಿಲ್ಲ. ಯಾರು ತಮ ಕ್ರಿಯಾಜ್ಞಾನಗಳಿಂದ ಬಲ್ಲಿದರಾಗುವರೋ, ಅವರಿಗೇ ಸಹಜವಾಗಿ ಸಾಮೂ ಹಿಕ ರೀತಿಯಿಂದ ಇರುವ ಹಾಗೆ ಯೋಜನೆಯಿರುವದು. ಈ ಯೋಜಕತನ ಕನುಗುಣವಾಗಿಯೇ ಬಿಜ್ಜಳನು ( ಅಹಂಕಾರ ಪುರುಷನು ) ಕ್ರಿಯಾಜ್ಞಾನಗಳಿಂ ದ ಹೀನವಾದ ಸಮಾಜದಲ್ಲಿ, ತನ್ನ ಬಳಗವೇ ಸಾಮೂಹಿಕರೀತಿಯಿಂದ ಮಂ ತ್ರಿಪದವನ್ನಾಕ್ರಮಿಸುವಂತೆ ಮಾಡಿ ಬಿಟ್ಟಿರುವನು. ಅಯ್ಯಗಳ ಉದ್ದಾಮತನವ ನ್ನೂ, ಅವರಿಂದ ಸಮಾಜದಮೇಲಾದ ಹೀನದಶೆಯನ್ನೂ, ಕುಶಲತನದ ಸವಿ ಮಾತಿನಿಂದ ನುಗ್ಗನುರಿಯಾಗಿ ಮಾಡುವ ಈ ತಂತ್ರಗಾರರ ಹೀನವಾದ ಕೃತಿಯ ನ್ನೂ, ಮೂಗಿಗೆ ತುಪ್ಪ ಒರಿಸಿಕೊಂಡು, ರೊಟ್ಟೀ ತುಣುಕಿಗೆ ಆಶೆಮಾಡಿ ಬಲಿಗಾ ರನ ಬೆನ್ನುಹತ್ತಿದ ಕಾಗೆಯ ಹಿಂಡಿನಂತೆ, ಈ ಉಭಯ ಸಮಾಜಘಾತಕರನ್ನು ಇನ್ನೂ ಬೆನ್ನುಹತ್ತಿದರೆ, ಮುಂದೆ ನಮ್ಮ ಗತಿ ಏನಾದೀತೆಂಬದನ್ನು ನಮ್ಮ ಪಂಚ ಮಸಾಲೆಯ ಬಂಧುಗಳು ಮನನಂದು, ಇಲ್ಲಿಗೆ ತಡೆದು, ಕೂಡಿಸಿಕೊಂಡ ಲಿಂ ಗಾಯತರಲ್ಲಿ ಗಣಿಸಲ್ಪಟ್ಟ ಹತ್ತೊಂಬತ್ತು ಕಾಯಕದವರನ್ನು ಕೂಡಿಕೊಂಡು ಸಮಾಜಸೇವೆಯಲ್ಲಿ ಕಂಕಣಬದ್ಧರಾದರೇನೇ ಕಲ್ಯಾಣವು. ಬಿಜ್ಜಳನ ಸಂತ ತತಿಯವರಾದ ಈ ತಂತ್ರಗಾರರ, ಮತ್ತು ಉಂಡಮನೆಯ ಗಳ ಎಣಿಸಿ ಆಶನ ಘಾತಕರೂ, ದುಷ್ಟರೂ, ದುರಾಚಾರಿಗಳೂ, ಆದ ರಾಕ್ಷಸ ವರ್ಗದ ಅಯ್ಯ ಗಳ ಆಟವು ಇಲ್ಲಿಗೆ ನಿಂತಿತು. ಈ ಮೆಟ್ಟೇ ಅವರ ವಧಸ್ಥಾನವು. ಲೀಲೆಯ ನಾಡನಿಂತ ಶ್ರೀಮಜ್ಜಗದ್ಗುರು ಪ್ರಭುವರನು ಅವರ ಸ್ವಭಾವಗುಣದಲ್ಲಿಯೇ ತಾವಾಗಿಯೇ ಈ ಮೆಟ್ಟಿಗೆ ಬರುವ ಹಾಗೆ ಬಿಟ್ಟುಕೊಟ್ಟನು. ಅವರು ಇಲ್ಲಿಗೆ ತಮ್ಮ ಯಾವತ್ತೂ ನೀಚಕೃತಿಗಳನ್ನು ಮನದಂದು, ಪಶ್ಚಾತ್ತಾಪಬಟ್ಟು, ತಮ್ಮ ಹೆಣ್ಣುಗಳನ್ನು ಈ ಕೂಡಿಸಿಕೊಂಡ ಅಷ್ಟಾವರಣ ಬಳಿಕೆಯ ಲಿಂಗಾಯತ ರೆಂದು ಗಣಿಸಲ್ಪಡುವ ಭಕ್ತಕೋಟಿಯವರ ಮಕ್ಕಳಿಗೆ ಧಾರೀ ಎರಕೊಟ್ಟು

ಕೂಡುಂತು, ಏಕ ಬಳಿಕೆಯಿಂದ ಸಮಾಜೋದ್ಧಾರ ಕಾರ್ಯವನ್ನು ಮಾಡಲು ನಿಂತರೆ ವಾಕ್ಸ್, ತಮ್ಮ ಹೊಟ್ಟೆಯೊಳಗಿನ ಗಂಟುಗಳನ್ನೆಲ್ಲ ಬದಿಗಿಟ್ಟು ಸರಳರಾದರೆಂದು ಭಾವಿಸಿ, ನಂಬಿ ಕೂಡಿಕೊಳ್ಳಲಿಕ್ಕೆ ಆಗುವದು. ಹೆಣ್ಣುಗಳನ್ನು ಧಾರೇ ಎರೆದುಕೊಡದೆ ಕೂಡುಣ್ಣದೆ, ಎಂದಿನಂತೆ ಬರೇ ಸವಿಮಾತುಗಳಿಂದ ಮೋರೆಯ ಮೇಲೆ ಕೈಯಿಳಸು, ಕೂಡಿಕೊಳ್ಳಲು ಯತ್ನಿಸಿದರೆ, ಆ ಹೊಟ್ಟೆಯೊಳಗಿನ ಗಂಟು ಕಾಯ್ದುಕೊಂಡ ಈ ಠಕ್ಕರು ಯಾವ ಹೊತ್ತಿಗೆ ಏನು ಮಾಡಿಯಾರೆಂಬ ನಿಯಮವಿಲ್ಲ. ಅವರ ಬರೀ ಸವಿಮಾತಿಗೆ ಸುರ ಳಾಗ ರಷ್ಟು ಕೆಳಗೆ ಗಣಿಸಲ್ಪಟ್ಟ ವರ್ಗವು ಜ ಣವಾಗಿರುವದು. ಅವರಲ್ಲಿ ಯಾವ ಹೆಚ್ಚಿನ ಸಂಗತಿಯನ್ನು ಕಂಡು ಮೇಲ್ಪಂಕ್ತಿಯಲ್ಲಿ ಎಣಿಸುವದಿದೆ? ತುದಿಯಿಂದ ಹಿಡಿದು ಬೊಡ್ಡಿಯುವರೆಗೆ ಬಹುಶಃ ಎಲ್ಲವೂ ಕೆಟ್ಟ ವಿಷಮಯವಾಗಿರುವದು. ಕಚ್ಚುವದೂ, ಮುಟ್ಟುವದೂ, ಬಳಿಯಲ್ಲಿರುವದೂ ಒತ್ತಟ್ಟಿಗಿರಲಿ, ಇವರ ಗಾಳಿಯು ಸೆರಗು ಬಡಿದರೆ ಸಾಕು; ವಿಷಸೋಂಕುವಂತಹ ಯಮುನಾನದಿಯ ಮಡುವಿನೊಳಗಿನ ಕಾಲಿಯಾ ಸರ್ಪಕ್ಕೆ ಸರಿಯಾದ ಸರ್ಪಗಳ ಹಿಂಡಿಗೆ ಪ್ರತಿ ಕಾಲಿಯಾ ಆಗಿರುವರು. ಇವರ ಬೆನ್ನು ಹತ್ತಿ ಬಂದ ಪಂಚಮ ಸಾಲಿಯ ಭಕ್ತಬಾಂಧವರು, ಇವರನ್ನು ಕೂಡಿಕೊಂಡು ನಿರಪರಾಧಿಗಳಾದ ತಾವೂ ಇವರ ದುಷ್ಕೃತಿಯ ಫಲವನ್ನು ಉಣ್ಣಲು ಪಾಲುಗಾರರಾಗುವಂತಹದು ತಿಳಿಹೀನರಲ್ಲ! ಇನ್ನಾದರು ಎಚ್ಚತ್ತು ಶರಣುಮಾರ್ಗವಿಡಿದು ಸಮಾಜವನ್ನು ಉದ್ಧಂಸಲು ಉಳಿದ ಯಾವತ್ತೂ ಸಮಾಜಬಾಂಧವರನ್ನು ಕೂಡಿಕೊಂಡು ಕಂಕಣಬದ್ಧರಾದಾರೆಂದು ತೋರುವದು. ಕಣ್ದೆರೆದು ನೋಡಿದರೆ ಸಮಾಜದಲ್ಲಿ ಏನು ಗಂಧವುಳದಿಲ್ಲ! ಭಕ್ತಗುರುಲಿಂಗಜಂಗಮಕೆ ಹೊರತಾದ ಅಯ್ಯಗಳ ಪೂಜೆಯು ಯಾರಿಗೆ? ಅವರಿಗೆ ಇಕ್ಕುವ ಕಾಳು, ಹಿಟ್ಟು, ರೊಟ್ಟಿ, ದಾನ, ಧರ್ಮ, ಕಾಣಿಕೆ, ಮುಂತಾದವುಗಳು ಯಾಕೆ? ಅವರನ್ನು ಆದರಿಸಿ ಮಾಡುವ ಮರ್ಯಾದೆಯು ಯಾರಿಗೆ? ಪ್ರಕಟನಾದ ಪರಮಾತ್ಮನಿಗೆ ಅಡ್ಡಾಗಿ ನಿಂತ ಇವರನ್ನು ಓರೆಮಾಡಿ (ಬಹಿಷ್ಕರಿಸಿ) ಯೇ ಮುಂದೆಮಾಡುತಕ್ಕುದನು ಮಾಡಬೇಕಾಗಿದೆ. ಇದು ಮೊದಲನೇ ಕಾರ್ಯವು. ಮೊದಲಿನಿಂದ ಕಡೆತನಕ ಕಾಯಕದವರ ಕೈಯಿಂದಲೇ ಬಟ್ಟೆಗಳು ತಯಾರಾಗುವ ಹಾಗೆ ಅಲ್ಲಲ್ಲಿಯ ಮುಖಂಡರು ಏರ್ಪಡಿಸಿ, ಆ ಬಟ್ಟೆಗಳನ್ನೇ ನಮ್ಮವರು ಬಳಿಸುವ ಹಾಗೆ ಎರ್ಪಡಿಸುವದು ಎರಡನೆಯ ಕಾರ್ಯವಾಗಿರುವದು. ನಮ್ಮೊಳಗಿನ ಭಕ್ತೋತ್ತಮರಿಂದ ಲಿಂಗಧಾರಣಾದಿ ಧಾರ್ಮಿಕ ಕಾರ್ಯಗಳನ್ನು ನೆರವೇರಿಸಿಕೊಳ್ಳುತ್ತ ಶರಣಮಾರ್ಗದಲ್ಲಿ ಏಕನಿಷ್ಠೆಯಿಂದ ಸಾಗುವದು ಮೂರನೆಯ ಕಾರ್ಯವಾಗಿರುವದು. ಈ ಮೂರು ಕಾರ್ಯಗಳನ್ನು ಒಮ್ಮೆಲೆ ಆರಂಭಿಸುವದರಿಂದ ಈ ಉಭಯ ಕಲ್ಯಾಣಕುಲಕಂಟಕರ ಕೊಬ್ಬು ಮುರಿದು ಅವರು ಹಣ್ಣಿಗೆ ಬರುವರು. ಹಾಗಲ್ಲದೆ ಎಂದಿಗೂ ಬಾರರು, ಕೂಡಿಸಿಕೊಂಡ ಅಗೆ[illegible] ಗಣಿಸಿದ್ದ ವಂತಹ ಅನರ್ಥಕ್ಕೆ ಕಾರಣವಾಗಿರುವ

ದು? ಸಮಾಜ ಸುಧಾರಿಸಬೇಕೆಂಬುವ ಜಾಣರಾದ ಮುಂದಾಳುಗಳೆಲ್ಲ ಬಹಳ ಮಾಡಿ ಈ ಕೂಡಿಸಿಕೊಂಡವರೆಂದು ಗಣಿಸಲ್ಪಡುವ ವರ್ಗದೊಳಗಿನವರೇ ಇರುವರು. ಇವರ ಸತ್ಯವಾದ ಪ್ರಯತ್ನಕ್ಕೆ ಗೆಲವು ಬರಬಾರದೆಂದು ತಮ್ಮ ಶಾಸ್ತ್ರಾನುಸಾರ ಚತುರೋಪಾಯಗಳನ್ನಾಚರಿಸುತ್ತಿರುವರಲ್ಲದೆ, ಅಂಧಶ್ರದ್ಧೆಯ ಅಜ್ಞಾನಿಗಳು ಅವರನ್ನು ನಂಬದಂತೆ, ತಾವು ಕೆಳಗಿನ ದರ್ಜೆಯವರಿದ್ದು ಮೇಲಿನ ದರ್ಜೆಯವರಾಗಿ ಪೂಜೆಗೊಳ್ಳಲು ಪ್ರಯತ್ನಿಸುತ್ತಾರೆ, ಇವರ ಗುರುಲಿಂಗಜಂಗಮ ನಿಂದಕ ವಾಕ್ಯಗಳನ್ನು ಕೇಳಲಾಗದು ನೋಡಲಾಗದು, ಅವುಗಳನ್ನು ಯಾವರೀತಿಯಿಂದಲೂ ಮರ್ಯಾದಿಸಲಾಗದು ಎಂದು ಸುದ್ದೀ ಹರವಿ ತಮ್ಮ ಮೋಸಗಾರಿಕೆಯ ತಂತ್ರೋಪಾಯುಗಳನ್ನು ಮೆರೆಯಿಸುತ್ತಿರುವರು. ಇಷ್ಟೇ ಅಲ್ಲ; ಯಾವನಾದರೊಬ್ಬ ವಿವೇಕಶಾಲಿಯು ಅವರ ಮಾತುಗಳನ್ನೂ ರೀತಿಯನ್ನೂ ಎತ್ತಿಕೊಂಡಾಡುವದು, ಕರ್ಣೋಪಕರ್ಣದಿಂದ, ತಮ್ಮ ಕಿವಿಗೆ ಬಿದ್ದೊಡನೆಯೇ, ಯಾವರೀತಿಯಿಂದಲೂ ಆ ಕೊಂಡಾಡಿದವನ ನೀರು ಏರದಂತೆ ಮಾಡಲು ಹೇಸರು ಹೆದರರು. ಎಲೈ ಅಂಧಶ್ರದ್ಧೆಯ ಭಕ್ತಬಾಂಧವರಿರಾ, ಈ ಅಯ್ಯಗಳೂ, ತಂತ್ರಗಾರರೂ ನಮ್ಮನ್ನು ಎಷ್ಟು ದೂರ ಚಲ್ಲಿಕೊಟ್ಟು ತಮ್ಮ ಸ್ವಾರ್ಥವನ್ನು ಸಾಧಿಸಿಕೊಳ್ಳಲು ಸಮಾಜವನ್ನು ಹಿಂಡಿ ಹಿಪ್ಪೀ ಮಾಡುತ್ತಿರುವರೆಂಬದನ್ನು ಇನ್ನಾದರೂ ಕಣ್ದೆರೆದು ನೋಡಿ, ಶರಣಮಾರ್ಗದಲ್ಲಿ ಅಡಿಯಿಟ್ಟು ಮುಂದರಿದು ಹಾದೀ ತೋರುತ್ತಿರುವ ಸತ್ಯಸಂಧರ ಬೆನ್ನು ಹತ್ತಿರಿ. ಇಂತಹ ಅಂಧಶ್ರದ್ಧೆಯಿಂದ ನಮಗೆ ಇಹವೂ ಪರವೂ ಇಲ್ಲ ಪಂಚಸೂತಕವಿರಹಿತವಾದ ಶರಣಮಾರ್ಗ ಹಿಡಿದು ಕುಲಛಲಗಳನ್ನೇನೂ ನೋಡದೆ, ಅಷ್ಟಾವರಣ ಬಳಿಕೆಯವರಾದ ನಮ್ಮ ಮಕ್ಕಳಿಗೆ ಹೆಣ್ಣುಗಳನ್ನು ಕೊಟ್ಟಾಗಲಿ. ತಮ್ಮ ಮಕ್ಕಳಿಗೆ ಹೆಣ್ಣುಗಳನ್ನು ತಕ್ಕೊಂಡಾಗಲಿ ನಮ್ಮನ್ನು ಕೂಡಿಕೊಳ್ಳುವ ಪೂರ್ಣಲಿಂಗವಂತರೊಂದಿಗೆ ಸಮಾಜೋದ್ಧಾರಮಾಡಲು ಜೀವದ ಹಂಗುದೊರೆದು ಕಂಕಣ ಕಟ್ಟೋಣ ಏಳಿರಿ!, ಹೀಗೆಯೇ ಬಿಟ್ಟಲ್ಲಿ ಮುಂದೆ ನಮ್ಮ ಹಾಡೇನು? ನಮ್ಮ ಮಕ್ಕಳ ಮರಿಗಳ ಹಾಡೇನು? ವಿಚಾರಿಸಿ ನೋಡಿದರೆ ಮಹಾ ಭಯಂಕರ ಸ್ಥಿತಿಯು ಕಣ್ಣುಮುಂದೆ ನಿಲ್ಲುತ್ತಿರುವದು. ಏಳಿರಿ ಇನ್ನಾದರು ಎಷ್ಟೂ ಅನುಮಾನಿಸದೆ! ಇವರ ಹೀನಕೃತಿಗಳ ಕಷ್ಟನಷ್ಟಗಳಿಗೆ ಗುರಿಯಾಗಿ ಕುಲಹೀನರೆಂದು ಕರಿಸಿಕೊಳ್ಳುವ ನಮ್ಮ ಕೆಳಗಿನ ವರ್ಗದವರದೇ ಈ ಕಾರ್ಯವಿರುವದು. ನಾವು ತಟಸ್ಥರಾದಲ್ಲಿ ಅವರಿಗೇನು ನೋವು ಮತ್ತಿಷ್ಟು ಅವರ ಚಕ್ಕಂದತನವನ್ನು ಬೆಳಿಸಲಿಕ್ಕೆ ಅನುವು ಮಾಡಿಕೊಟ್ಟಂತಾಗುವದು.

ಮೇಲೆ ಹೇಳಿದ ಮೂರು ಪ್ರಾಮುಖ್ಯವಾದ ಕಾರ್ಯಗಳನ್ನು ಅನುಮಾನಿಸದೆ ಮಾಡಲು ಆಧಾರವಾದ ಕೆಲವು ಶರಣಮಾರ್ಗದ ನಿಯಮಗಳನ್ನು ಕೆಳಗೆ ಕೊಟ್ಟಿರುವದು.

೧ ಅಷ್ಟಾವರಣ ನಿರತರಾದ ಲಿಂಗಾಂಗಿಗಳಲ್ಲಿ ಕುಲಜಾತಿಗಳೇನು ಇಲ್ಲ.

೨ ಭಕ್ತ ಮಾಹೇಶ ಎಂಬವು ಜಾತಿಸಿದ್ಧ ಜನ್ಮಸಿದ್ಧವಾದವುಗಳಲ್ಲ! ಮತ್ತು ಅವು ಜಾತಿಗಳಲ್ಲ.

೩ ಜನಸಮೂಹದಲ್ಲಿ ಕೂಡಿಕೊಂಡು, ಅಂತರಂಗದಲ್ಲಿ ಲಿಂಗಾನುಸಂಧಾನವಿಲ್ಲದೆ ಶುದ್ಧರಕ್ತದ ಸಾತ್ತ್ವಿಕಾಂಗವನ್ನು ಕಾಯ್ದುಕೊಂಡು ಹೋಗುವದು ಎಂದೂ ಶಕ್ಯವಿಲ್ಲ. ಏಕಂದರೆ ಸೃಷ್ಟಿಯು ಯಾವಾಗಲು ತನ್ನ ಪಂಚಮಹಾಭೂತಗಳ ಗುಣಧರ್ಮಾದಿಗಳ ಸಹಾಯದಿಂದ ತನ್ನ ಯಾವತ್ತು ಪರಮಾಣಗಳನ್ನು ಒಂದೇ ಸ್ಥಿತಿಗೆ ತರಲು ಯತ್ನಿಸುತ್ತಿರುವದು. ಕಾರಣ ಬಹಿರ್ಮುಖವಾಗಿ ಶೀಲಬಳಿಕೆಗಳನ್ನು ಆಚರಿಸುವವರು ತಾವಾಗಿಯೇ ತಮ್ಮನ್ನು ಜನಸಮೂಹದಿಂದ ಹೊರಗೆ ದೂಡಿಕೊಂಡ, ಅಜ್ಞಾನ ಕುನ್ನಿಗಳಾದ ಅಸ್ಪೃಶ್ಯರು.

೪ ನಿಜಧರ್ಮವೇ ಅಂಗವಾಗಿಯುಳ್ಳ ಭಕ್ತನೇ ಪೂಜ್ಯನಲ್ಲದೆ ಮಿಕ್ಕವರಾರೂ ಅಲ್ಲ!

೫ ತನ್ನ ಅಂತರಂಗದ ತನುಃಕರಣಾದಿಗಳನ್ನೆಲ್ಲ ಗುರುಲಿಂಗಜಂಗಮಕೆ ಸಂಪೂರ್ಣವಾಗಿ ನೀಡಿ ತತ್ಪರವಶವಾದ ವ್ಯಕ್ತಿಗೆ ಮಾಡುವ ಪೂಜೆಯು ಗುರುಲಿಂಗಜಂಗಮಕೆ ಸಲ್ಲುವದು. ಉಳಿದವರು ಯಾರೇ ಇರಲಿ, ಎಷ್ಟೇ ಆಚಾರಸಂಪನ್ನರಾಗಿರಲಿ, ಅವರಿಗೆ ಮಾಡಿದ ಪೂಜೆಯು ಅವರ ವಿಕಾರವೃತ್ತಿಗೆ ಸಲ್ಲುವದಲ್ಲದೆ ಗುರುಲಿಂಗಜಂಗಮಕೆ ಸಲ್ಲದು.

೬ ಲಿಂಗಾನುಸಂಧಾನವಿರದ ವ್ಯಕ್ತಿಯು ಗುರುಗದ್ದುಗೆಯ ಮೇಲೆ ಕುಳಿತು ಪೂಜೆಗೊಂಡಲ್ಲಿ ಅವನೂ, ಅವನನ್ನು ಪೂಜಿಸಿದವನೂ ಗುರುದ್ರೋಹಿ, ಲಿಂಗದ್ರೋಹಿ, ಜಂಗಮದ್ರೋಹಿಗಳಾಗಿರುವರು.

೭ ವಿಕಾರದಿಂದ ಮತ್ತರಾದ ಗುರುಲಿಂಗಜಂಗಮದ್ರೋಹಿಗಳನ್ನು ಬಹಿಷ್ಕರಿಸುವದೇ ಆಚಾರ, ಸಮಾಜದ ಮಧ್ಯದಲ್ಲಿ ಇಟ್ಟುಕೊಳ್ಳುವದೇ ಅನಾಚಾರ.

೮ ಭಕ್ತನಿಗೇ ಲಿಂಗಧಾರಣಾದಿ ಅಧಿಕಾರವಿರುವದಲ್ಲದೆ, ಭಕ್ತನಲ್ಲದವನು ಪಲ್ಲಕ್ಕಿಯನೇರಿದರೂ ಬಾರದು.

೯ ಭಕ್ತಿಯು ಅಳವಟ್ಟ ಭಕ್ತಶ್ರೇಷ್ಠನೇ ಗುರು. ಮಿಕ್ಕವರು ಆರಿದ್ದರೇನು ಅವರೆಲ್ಲರೂ ನರರೇ.

೧೦ ಭಕ್ತರ ಕಲ್ಯಾಣಕಂಟಕರೇ ಕಂಟಕಾಸುರರು. ಇವರನ್ನು ತಲೆವಾಗಿಸದ ಹೊರತು, ಶಿವಪೂಜೆಗೆ ದಿಗ್ಬಂಧನವಿಲ್ಲ.

೧೧ ಶಿವಪೂಜೆಗೆ ಸಮಾಜಸೇವೆಯೇ ಮೊದಲು. ಸಮಾಜಸೇವೆಯಿಂದಲೇ ಅಂತಃಕರಣಗಳು ಶುದ್ಧ ಗುರುಕರುಣವನ್ನು ಹೊಂದಲು ಪಾತ್ರವಾಗುವವು

೧೨ ಭಕ್ತಿಯುಳ್ಳವ ಭಕ್ತಿಯ ಮಾಡುವಲ್ಲಿ ಗುರುವಿನಲ್ಲಿ ಗುಣವನರಸಬೇಕು. ಲಿಂಗದಲ್ಲಿ ಲಕ್ಷಣವನರಸಬೇಕು. ಜಂಗಮದಲ್ಲಿ ವಿರಕ್ತಿಯನರಸಬೇಕು.

೧೩ ಹಿಡಿದಾರಾಧಿಸುವ ವಸ್ತು ಶುದ್ಧವಾಗಿಯಲ್ಲದೆ ಪೂಜಿಸುವ ಭಕ್ತನ ಚಿತ್ತ ಶುದ್ಧಿಯಿಲ್ಲ.

೧೪ ಹೊನ್ನು ಹೆಣ್ಣು ಮಣ್ಣಿಗೆ ಇಚ್ಛಿಸುವಾತ ಗುರುವಲ್ಲ! ಪ್ರಾಣೇಂದ್ರಿಯಂಗಳ ಸುಖೋಪಭೋಗದಲ್ಲಿ ಮುಳುಗಿದಾತ ಜಂಗಮವಲ್ಲ; ಇವರನ್ನು ದೇವರೆಂದು ಪೂಜಿಸುವಾತ ಭಕ್ತನಲ್ಲ!

ಪಂಚಸೂತಕವಿರಹಿತವಾದ ಶರಣಮಾರ್ಗವನ್ನು ಬಳಿಕೆಯಲ್ಲಿ ತರುವದು ಸಾಮಾನ್ಯವಾದುದಲ್ಲ! ಹೆಂಡರು ಮಕ್ಕಳೊಂದಿಗೆ ಸಂಸಾರದ ಹುದಿಲಿನಲ್ಲಿ ಸಿಕ್ಕಿಕೊಂಡಿರುವವರು ಎಂತಹ ಸದಾಚಾರಸಂಪನ್ನರೂ, ಶಾಸ್ತ್ರವಿಶಾರದರೂ ಇದ್ದಾಗ್ಯೂ ಅವರಿಂದ ಹಂಗುಹರಿದು ಬೈಲಿಗೆ ನಿಂತು ಆಚರಿಸಲು ಧೈರ್ಯವು ಬರಲಾರದು. ಅಂದಬಳಿಕ ಸಾಮಾನ್ಯರಿಗಂತೂ ಅಸಾಧ್ಯವೇ, ಇನ್ನೂ ಸಂಸಾರದ ಹುದಲಿನಲ್ಲಿ ಸಿಕ್ಕಿಕೊಳ್ಳದ, ಶಿವಾಂಶಿಕರೂ, ವಿಶಾಲಮತಿಗಳೂ ಆದ ತರುಣರೇ ಈ ಕಾರ್ಯಕ್ಕೆ ಅರ್ಹರು. ಬಹುದಿವಸದಿಂದ ವೈಯುಂಡ ಜಾತಿಯ ಅಭಿಮಾನವು ಬರೇ ವಿವೇಕದಿಂದ ಕುಂದದು. ಬಳಿಕೆಯಲ್ಲಿ ತಂದ ಮೇರೆಗೆ ಆದರ ಕಸವು ಕಡಿಮೆಯಾಗಿ ಬರಬರುತ್ತ ಬಲವುಂಟಾಗುತ್ತಹೋಗುವದು. ಸಮಾಜದೊಳಗಿನ ಒಳಪಂಗಡಗಳನ್ನು ಮುರಿಯಬೇಕೆಂದು ಪ್ರತಿಯೊಂದು ಮಹಾಸಭೆಯಲ್ಲಿ ಠರಾವಿನ ಮೇಲೆ ಠರಾವುಗಳು ಆಗಹತ್ತಿಎರಡು ಪಟ್ಟಿಗಳಾದರೂ ಇನ್ನೂ ಪ್ರಚಾರದಲ್ಲಿ( ಬಳಿಕೆಯಲ್ಲಿ) ತರುವದಾಗಲ್ಲೊಲ್ಲದು.ಏಕಂದರೆ ಆ ಕ್ರಿಯೆ ಗೆ ಜನರಲ್ಲಿ ಪ್ರವೃತ್ತಿಯು ಉಂಟಾಗಲೊಲ್ಲದು. ಮತ್ತು ಪ್ರವೃತ್ತಿಯು ಉಂಟಾಗಲಿಕ್ಕೆ ಅಂತಹ ಪರಿಸ್ಥಿತಿಯು ವೈಮೇಲೆ ಬಂದಿದ್ದಿಲ್ಲ; ಈಗ ಕಡಿಮೆಯ ದರ್ಜೆಯಲ್ಲಿ ಗಣಿಸಲ್ಪಟ್ಟ ನಾವು ಸುಮ್ಮನೆ ಕುಳಿತದ್ದಾದರೆ, ಗುರುವರ್ಗದವರ ಪಕ್ಷವ ತಂಡವು ನಮ್ಮನ್ನು ಎಂದೂ ತಲೆಯೆತ್ತಗೊಡದಂತೆ ಮಾಡಿಬಿಡುವದು. ವಿರಕ್ತರ ಪಕ್ಷದ ತಂಡದೊಳಗಿನ ಎಷ್ಟೋ ಕುಲಾಭಿಮಾನಿಗಳು ಆ ಗುರುವರ್ಗದ ತಂಡವನ್ನು ಕೂಡಿಕೊಳ್ಳಲು ಹಿಂದು ಮುಂದು ನೋಡರು; ಕೂಡಿಕಾಡಲು ಹೇಸರು; ಅಲ್ಲದೆ ಬಹುಶಃ ತಂತ್ರಗಾರರ ತಂಡದ ಬೆಂಬಲವೆಲ್ಲ ಗುರುವರ್ಗಕ್ಕೆ ಇರುವದು. ಸುಮ್ಮನೆ ಕೂತೇನೆಂದರೂ ಆ ತಂಡವು ಕೂಡ್ರಗೊಡದಾಗಿರುದದು. ನಮ್ಮನ್ನು ಹೆಚ್ಚೆಚ್ಚು ಜಾಲದಲ್ಲಿ ಬಿಗಿಯುವ ಕೆಲಸವು ಒಂದೇ ಸವನೆ ಒಳಗೂ ಹೊರಗೂ ಕೂಡಿಯೇ ನಡೆದಿರಲು, ನಾವು ಕಂಡೂ ಕಂಡು ಸುಮ್ಮನೆ ಅದನ್ನು ಆಗಗೊಡುವದು, ನಮ್ಮ ಹಾದಿಗೆ ನಾವೇ ಮುಳ್ಳುಹಚ್ಚಿಗೊಂಡಂತೆ ಆಗುವದು. ಅಲ್ಲದೆ ನಮ್ಮಂತಹ ಅಧರ್ಮಿಗಳು ನಾವೇ ಆಗುವೆವು. ಅವರ ಕೃತಿಯಿಂದ ಅವರಿಗೂ ನಮಗೂ ಕೂಡಿಯೇ ಅಕಲ್ಯಾಣವು ತಪ್ಪದೆ ಆಗುವದು. ಅವರನ್ನು ಬಹಿಷ್ಕ

ರಿಸಿ, ಶರಣಮಾರ್ಗದಲ್ಲಿ ಸಾಗುವದರಿಂದ ಎಲ್ಲರಿಗೂ ಕಲ್ಯಾಣವು. ಕಲ್ಯಾಣ ಕರ್ತರೇ ನಿಜಗುರುವಿನ ಮಕ್ಕಳು. ಅವರೇ ಧರ್ಮಿಷ್ಠರೂ ನಿಷ್ಕಾಮರರೂ.

ಶಿವಾಂಶಿಕರೂ, ಸುಶಿಕ್ಷಿತರೂ ಆದ ಭಕ್ತಬಾಂಧವರಿರಾ, ಇವರ ಹೊರತು ಉಳಿದ ಅಂಧಶ್ರದ್ಧೆಯ ದೊಡ್ಡ ಭಾಗಕ್ಕೆ ಯಾವದೋಷವನ್ನೂ ಹೊರಿಸಲು ಬರುವಂತಿಲ್ಲ; ಏಕಂದರೆ ಸದಸದ್ವಿವೇಕ ಬುದ್ಧಿಯು ಯಾವದೋಷವನ್ನೂ ಹೊರಿಸಲಾರದು. ಗುರುವರ್ಗವು ತನ್ನ ಧರ್ಮಾನುವರ್ತನದಲ್ಲಿ ದಕ್ಷವಾದುದಾಗಿದ್ದರೆ ಕುಲಕಂಟಕರಾದ ತಂತ್ರಗಾರರನ್ನು ಬಗ್ಗುಬಡಿದು, ಅವರ ತಲೆಯು ಎಷ್ಟೂ ಎತ್ತಗೊಡದಂತೆ ಮಾಡುತ್ತಿತ್ತು. ಆ ತಂತ್ರಗಾರರ ತಲೆಯೆತ್ತಗೊಡಿಸಿದ್ದೂ ಗುರುವರ್ಗದ ದೋಷವೇ! ಯಾವ ಕಡೆಯಿಂದ ನೋಡಿದರೂ, ಗುರುವರ್ಗವೇ ಸರ್ವದೋಷಕ್ಕೆ ಪಾತ್ರವಾದುದಾಗಿರುವದರಿಂದ, ಈ ಎಲ್ಲ ತರದ ಕಸವನ್ನು ಕಿತ್ತು ಹಾಕುವದು ನಮ್ಮ ಕರ್ತವ್ಯವು. ಲೋಕದಲ್ಲಿ ಕ್ಷುಬ್ಧವಾದ ರುದ್ರಶಕ್ತಿಯ ಕಾರ್ಯವು ಈ ಕಸವನ್ನು ಕಿತ್ತು ಹಾಕುವ ಕಾರ್ಯದಲ್ಲಿಯೇ ತೊಡಗಿರುವದರಿಂದ, ಈ ಕಾರ್ಯದಲ್ಲಿ ಕಂಕಣಬದ್ಧರಾದ ನಮಗೆ ಆ ರುದ್ರಶಕ್ತಿಯ ಬಲವು ಸಹಜವಾಗಿ ಉಂಟಾಗುವದು.

ನಿಜಾನುವರ್ತನದ ವೀರಶೈವ ಶಕ್ತಿವಿಶಿಷ್ಟಾದ್ವೈತಸಮಾಜವೇ ಲೋಕದೃಷ್ಟವಾದ ಇಷ್ಟಲಿಂಗವಾದುದರಿಂದ, ಇಂತಹ ಸಮಾಜಸೇವೆಯ ಕಾರ್ಯದಲ್ಲಿ ಟೊಂಕಕಟ್ಟುವದೇ ನಿಜವಾದ ಇಷ್ಟಲಿಂಗಪೂಜೆಯಾಗಿರುವದು. ಈ ಲಿಂಗಪೂಜೆಯನ್ನು ಮಾಡದೆ ಕರದಿಷ್ಟಲಿಂಗಪೂಜೆಯು ಆಳವಡದು. ದೋಷವನ್ನು ಪರಿಹರಿಸುವದೇ ಪೂಜೆಯ ಗುಟ್ಟಾಗಿರುವದು. ಬಾಹ್ಯದೋಷವನ್ನು ಪರಿಹರಿಸುವ ಕ್ರಿಯೆಯೇ ಅಂತರದೋಷಪರಿಹಾರಕವಾಗಿರುವದು. ಹಿಂದೆ ನಾಲ್ಕನೆಯ ಭಾಗದಲ್ಲಿ ಹೇಳಿದ ಅನಿಷ್ಟಪರಿಹಾರಕ ಉಪಾಯಗಳೇ ಅಷ್ಟವಿಧಾರ್ಚನೆ ಷೋಡಶ ಉಪಚಾರಗಳಾಗಿರುವವು. ಆದುದರಿಂದ ಆ ಉಪಾಯಗಳಲ್ಲಿ ಕಸ ಕಿತ್ತುಹಾಕಲು ಕಂಕಣಬದ್ಧರಾಗೋಣ! ಏಳಿರಿ ಇದರಲ್ಲಿಯೇ ಆ ಪ್ರಭುವರನ ಸರ್ವಶಕ್ತಿಯ ಸಹಾಯವಿರುವದು. ಕೆಳಗೆ ಪಾರ್ವತಿಯು ಕೊರವಿಯಾಗಿ ಹಾಡಿದ ಅಂಶವನ್ನು ನೋಡಿ, ಎಷ್ಟೂ ತಡಮಾಡದೆ ಅನುಮಾನವನ್ನು ತೊರೆದು ತತ್ಪರರಾಗೋಣ! ಹೂ ಏಳಿರಿ.

ಭಕ್ತರೆಲ್ಲ ನೀವು ಕೇಳಿ, ಸತ್ಯಕಾಲ ಬಂತು ನಿಮಗೆ ।
ಹತ್ತು ಹತ್ತು ಪರಿಗಳಿಂದ ನಿಮಗೆ ಅಭಯವಿತ್ತೆನು ॥
ಹೆತ್ತ ತಾಯಿ ಮಕ್ಕಳಿಂಗೆ ವಿಷವ ಕರೆವ ಪರಿಗಳುಂಟೆ ।
ತಪ್ಪೆನಿನ್ನ ಮಕ್ಕಳಿರಾ ನಂಬಿ ನನ್ನ ಬ್ಯಾಗದಿ ॥



**ಸಮಾಜಸೇವಕರಿಗೆ ಜಯವಾಗಲಿ**

## ಸಮಾಜಸುಧಾರಣೆಯು

ಏಳಿ ಬೇಗನೆ ಶರಣಮಾರ್ಗಕೆ ಕಾಲ ಕಳೆಯದೆ ವೀರರೆ ।
ಹಾಳು ಮಾಡಿದ ಜಗದ ಭಂಡರ ಗೋಳು ನೋಡುತ ಜಾಣರೆ ॥ಪ॥

### ತತ್ತ್ವಗಳ ಮಹತ್ತ್ವ

ನಮ್ಮ ಧರ್ಮದ ತತ್ತ್ವವೇನವು ಬರಿಯ ಮಾತಿಗೆ ಹೊಳೆವವೇ? ।
ಹೆಮ್ಮೆಕಾರರ ಜಾತಿಕುಲದಭಿಮಾನಕೇನವು ದೊರೆತವೆ? ॥ ೧ ॥

ನೆಮ್ಮಿ ನಡೆದರೆ ಮನುಜಮಾತ್ರರ ದೃಷ್ಟಿಗೆಂದಿಗು ನಿಲುಕವೇ? ।
ಹಮ್ಮು ಬಿಮ್ಮನು ಬಿಟ್ಟು ನಂಬುತ ನಡೆದರೆಂದಿಗು ಬಿಡುವವೇ? ॥ ೨ ॥

ತಪಕೆ ಕೊರಗದು ಯೋಗಕರಗದು ನೋಡು ಸಾತ್ತ್ವಿಕ ಹಮ್ಮವು ।
ಶಪಿಸಿ ಪುಣ್ಯವ ಕಳೆದುಕೊಂಡಿತು ಬಿಡದೆ ಮನುಮುನಿ ನಿಕರವು ॥ ೩ ॥

ಜಪಕೆ ಹಣಿಯದು ನಿಲುಕದಾಳಿಯಿತು ಲಿಂಗನೆಲೆಯದು ಡೆತ್ಯವು ।
ಚಪಲಮತಿಗಳೆ ಹಮ್ಮಿನಿಂದಲಿ ಸಕಲಕ್ರಿಯೆಗಳ ನಷ್ಟವು ॥ ೪ ॥

### ಐತಿಹ್ಯವು

ಪ್ರಮಥರೆಲ್ಲರು ನಡೆದು ತೋರಿದರಂದನೆ ಲೋಕಕೆ ವೀರನೆ ।
ಅಮಮ ಲೋಕವು ತಿರುಗಿಬಿದ್ದಿತು ಭೂಪನೋಡಗೊಂಡೀರನೆ ॥ ೫ ॥

ಸಮರಕಥನವೆ ಲಿಂಗನಡೆಯೊಳು ಕರಣದಾಟವು ವೀರನೆ ।
ಸಮಯವೀಗಿಲ್ಲೆನುತ ಸಾರ್ದರು ಕ್ಷೇತ್ರಕೆಲ್ಲರು ವೀರನೆ ॥ ೬ ॥

ಲಿಂಗದನುಭವ ನೀಡಿ ನಮ್ಮನು ಪಂಚಪೀಠಕೆ ಜಾಣರೆ ।
ಹಿಂಗದೊಪ್ಪಿಸಿ ಲಿಂಗಕ್ಷೇತ್ರವ ಕಾಯ್ದುಕೊಳ್ಳಲು ಜಾಣರೆ ॥ ೭ ॥

ಲಿಂಗಸಂಗದೊಳಡಗಲೋಸುಗ ಪೇಳಿ ಹೋದರು ಜಾಣರೆ ।
ಹಂಗು ಹರಿಯದ ಲಿಂಗಭವಿಗಳು ತಂದರಿಲ್ಲಿಗೆ ಜಾಣರೆ ॥ ೮ ॥

ಲಿಂಗದನುಸಂಧಾನವಿಲ್ಲದೆ ಲೋಕ ಬಳಿಕೆಯೊಳಿಕ್ಕಿದು ।
ಅಂಗಶುದ್ಧಿಯು ಸೃಷ್ಟಿಯನಿಯಮದೊಳುಳಿಯದೆಂದಿಗು
ನಿಜವಿದು ॥ ೯ ॥

ಸಂಗದೋಷವು ಭೂತಗುಣದೊಳಗೇಕರಕ್ತವ ಮಾಳ್ಪುದು ।
ಅಂಗಭೋಗವ ಹಿಂಗಲರಿಯದ ಕುಲದಚಂಡಿಗೆ ಹೊಳೆಯುದು ॥ ೧೦ ॥

ಶುದ್ಧರಕ್ತದ ಭ್ರಾಂತಿಯದು ತಾನುಣ್ಣದೆಂದಿಗು ಹಿಂಗದು ।
ಬದ್ಧಭಾವವು ತಾರತಮ್ಯವನೇನ ಸೋಧಿದಡೆಣಿಪುದು ॥ ೧೧ ॥

ಸಿದ್ಧವಾತಿದು ಕಾಲವಶದಿಂ ಲೋಕ ತಾಂ ಹದಗೊಳುವದು ।
ಬುದ್ಧಿಗಲಿಯಲು ಶರಣಸ್ಪಂದವು ಬಿಡುತಲಿವ್ಮನು ಪೋದುದು॥೧೨॥

ಪಂಗಡಗಳಾದುದು

ಅಂಗದೋಷವ ಹಿಂಗಲಾರದ ಅಯ್ಯಜನಗಳು ವೀರರೆ ।
ಅಂಗಶುದ್ಧಿಯು ತಾರತಮ್ಯದೊಳೆರಡು ಜಾತಿಯು ವೀರರೆ ॥ ೧೩ ॥
ಲಿಂಗಮಹಿಮೆಯು ಪರಿವೆಯಿಲ್ಲದೆ ಮಾಡಿನಡೆದರು ವೀರರೆ ।
ಸಂಗದೋಷದ ಭ್ರಾಂತಿಮಹಿಮೆಯನೇನು ಪೇಳ್ವದು ವೀರರೆ॥೧೪॥
ಜಾತಿದೋಷದ ಭ್ರಾಂತಿ ತಾನದು ಬೆಳೆಯುಹತ್ತಿತು ಜಾಣರೆ ।
ಮಾತುಗಾರರ ತಂತ್ರಜಾಲಕೆ ಬೆಳೆಯು ಬಂದಿತು ಜಾಣರೆ ॥ ೧೫॥
ಆತುಕೊಂಡಿತು ಜಾತಿಮತ್ಸರ ಕಸಬುಕಸಬಿಗೆ ಜಾಣರೆ ।
ಘಾತವಾಯಿತು ಮುಂದೆ ಪಂಗಡ ಬೇರುಗೊಂಡವು ಜಾಣರೆ ।೧೬॥
ಕುಲವನಾಯುಲ ಹತ್ತಿ ಭಕ್ತರು ಜಾತಿಭ್ರಮೆಯೊಳು ಬಿದ್ದರು ।
ಛಲವ ಹಿಡಿಯುತ ತಮ್ಮ ತಮ್ಮೊಳು ಭೇದಬುದ್ಧಿಯು
ಕಲಿತರು ॥ ೧೭॥
ಹಲವು ಹಂಬಲ ಹಿಡಿದು ಬಳಿಕೆಯ ಮುರಿದು ನಡೆಯುತ
ಬಂದರು ॥
ಹೊಲೆಯುತನವನು ಲಿಂಗಮಹಿಮೆಯು ಮರೆತು ಮಾಡುತ
ನಡೆದರು ॥ ೧೮॥

ಕೆಲವು ತಂತ್ರಗಾರರು ಸಾಧಿಸಿದ ಮಂತ್ರಿತನವು.

ಭಕ್ತರೊಳಗಿನ ಭೇದಬುದ್ಧಿಯು ಜಂಗಮರಿಗದು ಜಾಣರೆ ।
ಶಕ್ತಿಯಿಲ್ಲದೆ ಸ್ವಾರ್ಥಸಾಧಿಸಲನುವು ಕೊಟ್ಟಿತು ಜಾಣರೆ ॥೧೯॥
ಯುಕ್ತಿಯಿಂದಲಿ ತಂತ್ರಗಾರರು ಹೊಕ್ಕರಿದರೊಳು ಜಾಣರೆ ।
ತಕ್ಕ ಅಡಿವಿಡಿದು ನಮ್ಮನೆಲ್ಲರ ತೂಗಹತ್ತಿದರೀರರೆ ॥ ೨೦ ॥
ಕೂಳು ನೀರಿನ ಶೀಲ ಹೆಚ್ಚಿಸಿ ಭಕ್ತರನು ಭವಿ ಮಾಡಿದರ್ ।
ಹೇಳಲೇನೈ ಯಂತ್ರ ತರಿಸುತ ಕೂಳಿಗೂ ಪಿರಿಮಾಡಿದರ್ ॥೨೧॥
ಗೋಳು ಹಿಡಿಸುತ ನಮ್ಮನೆಲ್ಲರ ಕೆಟ್ಟಮಾರ್ಗಕೆ ಹಚ್ಚಿದರ್ ।
ಮೂಳ ಜಂಗಮರೆಲ್ಲರನು ಬಲೆಯೊಳಗೆ ಕೆಡವುತ ನಿಂದಿರ್॥೨೨॥
ಜಡ ಪದಾರ್ಥಂಗಳನು ಮಾರುತ ಬಲವಗೆಡಿಸುತ ನಡೆದಿಹರ್ ।
ಬಡ ಜನಂಗಳ ಗೋಣು ಮುರಿಯುತ ಹೊಟ್ಟೆಯನು
ಹೊರಕೊಳ್ಳುವರ್ ॥೨೩॥

ಕಡು ಕುಶಲಮತಿ ಕಪಟೆಗಳುತಾವ್ ಸೃಷ್ಟಿಗುಣವೆಂತರಸಃವರ್ ।
ಮಿಡುಕುದಾಯಿತು ನಮ್ಮ ಮನೆಗಳ ಮುಗಿಸ ಬಿಟ್ಟುವು
ಕೇಳಿವರ್ ॥ ೨೪ ॥

ಸೃಷ್ಟಿಧರ್ಮವ ಬಲ್ಲಿವರು ತಾವಲ್ಲವಾಡುದರಿಂ ಶಿವ ।
ಇಷ್ಟಹೇತುವ ಸಾಧಿಸಲು ತಲೆದೂಗಿ ಜಂಗಮರನು ಶಿವ ॥ ೨೫॥

ಎಷ್ಟು ತಡೆಯದೆ ನಮ್ಮ ಮನೆಗಳ ಮುಗಿಸಬಿಟ್ಟರು ಶಿವ ಶಿವ ।
ದುಷ್ಟ ಸೃಷ್ಟಿಯು ತನ್ನ ಧರ್ಮದಿ ಮೋಸಗೊಳಿಸಿತು ಶಿವ ಶಿವ॥೨೬॥

ನೋಡಿವರುಗಳ ಮಂತ್ರಿತನವನು ಮೂರು ವರ್ಗವ ಮಾಡುತ ।
ಕೂಡಿ ತಮ್ಮನು ಶ್ರೇಷ್ಠವೆಂಬುತ ಮೇಲುವರ್ಗಬೆ ಹಾಕುತ ॥೨೭॥

ದೂಡುತೆಮ್ಮನು ಕೆಳಗೆ ಹತ್ತೊಂಬಂತ್ತು ಕಾಯಕವೆಣಿಸುತ ।
ರಾಡಿಗಲಿಸಿದರೆಮ್ಮನೆಲ್ಲರ ನಡುವೆ ಭೇದವ ಬಗೆಯುತ ॥ ೨೮ ॥

## ಜಂಗಮರ ದಡ್ಡತನವೂ, ದುರಾಚಾರವೂ,

## ಸಾದುಣಿಕೆಯೂ

ಏನುಹೇಳಲಿದೆಲ್ಲ ಗೋಳನು ಕೋಣಜಂಗಮರೆಲ್ಲರು ।
ಶ್ವಾನನಂದದಿ ಬಾಲ ಬಡೆಯುತ ಹೇಳಿದಾಪರಿ ಕುಣಿದರು ॥ ೨೯ ॥

ಹೀನರಕ್ತದ ಭ್ರಮೆಗೆ ಬೀಳುತ ಲಿಂಗಕಳೆ ಕಳಕೊಂಡರು ।
ದಾನಧರ್ಮಕೆ ಮನವ ಸೋಲುತ ಭಕ್ತಿಹೀನರು ಬೆಳೆದರು ॥ ೩೦ ॥

ಜಂಗಮರ ಗುಣಲಕ್ಷಣಂಗಳ ಕೇಳಬಾರದು ಸ್ತ್ರೀಯರ ।
ಸಂಗಸುಖದೊಳು ಮುಳುಗಿ ವಿರತಿಯ ಹೊಲಬುಗೆಡಿಸಿದರ್ಕೈ
ಹರ ॥ ೩೧ ॥

ಮಂಗಮನುಜರು ಜಂಗ ಕಟ್ಟುತ ತಿರಿದುತಂದುದನೆಲ್ಲವ ।
ಹೆಂಗಳಿಯರಾ ಪಾಲು ಮಾಡುತ ಮೀರಿನಿಂತರು ಶಿವ ಶಿವ ॥೩೨॥

ಗಂಡಹೆಂಡರ ರೀತಿಯನು ಸಹ ಕೇಳಬಾರದು ಇವರೊಳು ।
ಗಂಡ ಮಿಂಡನು ರಂಡಿ ಹೆಂಡತಿ ರತಿಯು ಹೊರಗಿನ
ಜನರೊಳು ॥ ೩೩ ॥

ಉಂಡಮನೆಗಳ ಗಳವನೆಣಿಸುತ ಹೊರಗೆ ನೀಚರು ಮನದೊಳು ।
ಕಂಡಕಂಡುದ ಬಯಿಸಿ ಹರಿದಾಡುತ್ತ ನಲಿವರು ಊರೊಳು ॥೩೪॥

ಮಠವ ದಾಸೋಹಗಳು ನಿಂತಾದವವು ಖಾನಾವಳಿಗಳು ।
ಶಠರು ತುಂಬುತಲಾಗಿಬಿಟ್ಟವು ಕೆಟ್ಟನಡತೆಯ ಮನೆಗಳು ॥೩೫॥

ಮಠದ ಬೋಧಗಳೆಲ್ಲ ಹಾಳಾಗುತ್ತ ಹರಟೆಯ ಮನೆಗಳು
ಮಠಪತಿಗಳೂ ಮಠವವರ ಸರಿಯಾಗಿ ನಿಂತರು ನಮ್ಮೊಳು ॥೩೬॥

ಭ್ರೂಣಹತ್ಯವು ಶಿಶುವ ಹತ್ಯವು ನೋಡಲುಗೊಂಡಾ ಕೃತಿಗಳು ।
ಮಾಣಮಡಿಕೆಯ ದೋಷಭೀತಿಗೆ ಹೆಚ್ಚುತಾಗಲೆ ಮಠಗಳು ॥೩೭॥

ಅಣ್ಣ ಆದವು ಬಹಳ ಪಾಲಿಗೆ ಕೊಲೆಯ ಕಟಕರ ಮನೆಗಳು ।
ಬಣ್ಣಗೆಡಿಸತ ಮಲೆತು ನಿಂದವು ಪಂಚಪಾತಕ ಕೃತಿಗಳು ॥೩೮॥

ತಮಗೆ ನಡೆಯುತ ಬಂದ ಪೂಜಾಕಾಣಿಕಾದಿಗಳೆಲ್ಲವು ।
ಟುಮುಕಿ ಹೊಡೆಯುತ ಸೂರ್ಯಚಂದ್ರರು ಮೂಡಿಮುಳುಗುವ
ತನಕವು ।

ಆವು ಯಾರೂ ತೆಗೆದುಕೊಳ್ಳಲು ಬಾರದಾಪರಿ ಮಾಳ್ಪದು ।
ನಮಗೆ ಬಿಡದಿಹ ಕಾರ್ಯವಿದು ತಾನಾವಪರಿ ಸಾಧಿಸುವದು ॥೪೦॥

ರಕ್ತ ದೋಷವು ಭಕ್ತವರ್ಗಕೆ ವ್ಯಾಪಿಸಿರುವದು, ನಮ್ಮದು ।
ಮುಕ್ತಿ ಮಾರ್ಗಕೆ ತಕ್ಕುದಿಹುದೈ ಬೇಡ ನಮ್ಮೊಳು
ಹೊಲಸಿದು ॥ ೪೧ ॥

ಭಕ್ತವರ್ಗದ ದ್ರೋಹ ಬಗೆದಾದರೆಯು ಸಾಧಿಸಿಕೊಳ್ವದು ।
ಯುಕ್ತವಹುದೈ ಪುತ್ರವರ್ಗದ ಮಠಗಳೆಲ್ಲವ ಮಾಳ್ಪದು ॥ ೪೨ ॥

ಎನುತ ಸಭೆಗಳ ಕರಿಸಿ ತಮ್ಮೊಳು ಬಿಡದೆ ನಿರ್ಣಯ ಮಾಡುವರ್ ।
ವಿನುತ ಬಸವನ ಚೆನ್ನಬಸವಾಲ್ಲಮರ ಬಿಡದಲೆ ನಿಂದಿಪರ್ ॥ ೪೩ ॥

ಜನರ ಮಧ್ಯದಿ ಕದನವೆಬ್ಬಿಸಿ ಪಕ್ಷವೆರಡನು ಮಾಡಿಹರ್ ।
ಘನಗುರುಮಹಾಶೂನ್ಯ ಸಿಂಹಾಸನದ ಸೂತ್ರವ ಹರಿದಿಹರ್ ॥ ೪೪ ॥

ಜಗದ ಗುರುಗಳು ತಾವೆ ಎನುತಲಿ ಮಂಗಸಂದದಿ ಕುಣಿಯುವರ್ ।
ಜಗದ ಭಂಡರು ಕುಲದ ಬಿಂಕವನಿನ್ನು ಬಿಡದಲೆ
ತೋರುವರ್ ॥ ೪೫ ॥

ಸಗಣಿಗಳ್ಪರು ಕೆಟ್ಟಗುಣದಿಂದೆಷ್ಟು ಹೆದರದೆ ನಡೆಯುವರ್ ।
ಹಗಲಿರುಳು ಬರಿ ವಿಷಯಭೋಗಕೆ ಮೆಚ್ಚಿ ಲಿಂಗವ
ಮರೆತಿಹರ್ ॥ ೪೬ ॥

ನರರು ನರರಿಂದ ಪಡಕೊಂಬುವದು ಬಲು ಕೆಡಕು
ಸೃಷ್ಟಿಯು ಸ್ವಾಭ ವಿಕ ಧರ್ಮಕ್ಕೆ ಇಮ್ಮಡಿ ಬಲ ಬರುವದು
ನಾಚಿಕಿಲ್ಲದೆ ಕಾಲು ಚಾಚುತ ಪೂಜೆಗೊಳ್ಳುತಲಿಪ್ಪರು ।
ನೀಚಕೃತಿಗಳ ಮರೆತು ಮೆಣಸುಗಳೋಲು ಕೊಡುತಲಿ
ಮೆರೆವರು ॥೪೭॥

ಹೆಚ್ಚು! ಸೃಷ್ಟಿಯು ಗುಣವ ಮೀರುತ ಬಿಡದೆ ಸಮರಸಗೊಳುವದು।
ಮೆಚ್ಚಲಾರರು ಬಲ್ಲಿದರು ತಾವ್ ಕಂಗಳರು ಪಡಕೊಂಬುದು ।೪೮॥

ಭಾವದೋಷಂಗಳವು ಭೂತಂಗಳಲಿ ಸೇರುತಲಿರುವವು ।
ಅವನೊಳಗಾದರೆಯು ಕಲೆಯುತ ರಕ್ತವನು ಸಮಗೊಳಿಪುದು॥೪೯॥

ನಾವು ನರರೀ ಕಾಯ ಬುಡಮೇಲಾಗಿ ಬೆಳೆದಿಹ ವೃಕ್ಷವು ।
ಅವಕಾಲದಿ ಗುಣದ ಫಲಗಳು ಬೆರಳತುದಿಯಿಂ ಸುರಿಪುವು ॥೫೦॥

ನೀರು ತನ್ನೊಳು ಹಿಡಿದುದನು ಹೊರಬಿಡದೆ ಬೇಗನೆ ಹೀರುತ ।
ಸಾರವನೆ ಕೊಡುತಿಹುದು ನೋಡಾಯಾಸವಿಲ್ಲದೆ ಸೇರುತ ॥೫೧॥

ವೀರರೀ ಪಡಕೊಂಬ ರೀತಿಯು ಕಂಡುಕೊಂಡರು ಹುಡುಕುತ ।
ಸಾರ ನಿಂತರು ನೀಚ ಜಂಗಮರದನು ನರರಿಗೆ ಮೀರುತ ॥೫೨॥

ಒಂದೆ ರಕ್ತವ ಮಾಡಲೋಸುಗ ಜೋಡು ಶಕ್ತಿಯ ಕಾರ್ಯವು ।
ಒಂದುಗೂಡುತಭರದೆ ಸಾಗಲು ಮೇಲಕೇರಿದ ಸ್ತೋಮವು॥೫೩॥

ಇಂದಿಗೀ ಮನೆಗಿಳಿದು ಪಿತಾಚಾರ್ಯವರ್ಯರ ರಕ್ತವು ।
ಒಂದುಗೂಡುತ ಹೊಲತಿರಕ್ತಕೆ ಬಿಡದೆ ಸಮರಸವಾದವು ॥೫೪॥

ಎಲ್ಲ ರಕ್ತವು ಕೂಡಿ ಒಂದೇ ಆದುದನು ಸಲೆ ಮರೆತಿಹರ್ ।
ಮೇಲೆ ನಾಚಿಕೆ ಎಷ್ಟು ಹಿಡಿಯದೆ ಜಾತಿಪೌರುಷ
ತೋರುವರ್ ॥೫೫॥

ಎಲ್ಲಿಯಿಲ್ಲವು ಶುದ್ಧರಕ್ತವು ಬರಿದೆ ಜನ ಬಡಿದಾಡುವರ್ ।
ಅಲ್ಲಿಗಲ್ಲಿಗೆ ತಮ್ಮ ಕುದುರೆಯ ಬಿಟ್ಟು ಗೌರವ ಮೆರೆಸುವರ್ ।೫೬।

ನರರು ನರರನು ಪೂಜಿಸುತ ಪಡಕೊಂಬ ನಡತೆಯು ಸಲ್ಲದು ।
ಸರಿಯು ತಾನದು ನಿಜಬಕುತ ನಿಜಗುರುವಿನೊಳು
ಪಡಕೊಂಬುದು ॥೫೭॥

ಆರರೆ ಬಕುತಿಯದೆಲ್ಲಿ ತಾನುಳಿದಿಲ್ಲವೈ ಗಡ ಕಲಿವುದು ।
ನರರೆ ಜಾತಿಯ ಬಿಂಕಬಿಡುತಲಿ ಶರಣಮಾರ್ಗವ ಪಿಡಿವುದು ।೫೮।

## ಸುಧಾರಣೆಯು ನಿಡಚಾಪ ಹಾಕಿತು

ಅತ್ತ ಕಲೆಗಳ ಶಿಖರಕೇರಿದ ಕುಶಲಮತಿಗಳ ತಂತ್ರವು ।
ಬಿತ್ತಿಬೆಳೆದಿಹ ಸ್ವಾರ್ಥಬುದ್ಧಿಯ ಜ್ವಾಲೆ ತುಂಬಿದ
ಮೋಸವು ।೫೯।

ಸುತ್ತು ಜಗದೊಳು ಹರವಿ ನಾನಾ ಪರಿಯೊಳಾಗುವ ಕಷ್ಟವು ।
ಮತ್ತೆ ಪ್ರಭುವಿನ ಹದವಗೊಳಿಸುವ ಸೃಷ್ಟಿಕಾರ್ಯದ
ಕ್ಷೋಭವು ॥೬೦।

ಏನು ಹೇಳಲಿ ನಮ್ಮ ಜನಗಳ ಮಂದದೃಷ್ಟಿಯ ಕಾರ್ಯವ
ಸ್ವಾನುಭಾವದ ಮಾರ್ಗ ತಪ್ಪುತ ನೀಚವಾದಿವರಾಟವ ॥೬೧॥

ಹೀನ ಲೌಕಿಕ ಸೊಬಗಿನಾಟಕೆ ಮರುಳರಾಗುತ ಅಂಗವ ।
ಸಾನುರಾಗದೆ ಮೆಚ್ಚಿ ಹಿಡಿದರು ಪಾಶ್ಚಿಮಾತ್ಯರ ಮಾರ್ಗವ ॥೬೨॥

ಮಾಳುಮಾತಿಗೆ ಗೌರಕಾಯದ ಸಾಕ್ಷಿಕೊಡುವರು ತಪ್ಪದೆ ।
ಖ್ಯಾತಿಯೆಲ್ಲವು ಕಂಡುಬಂದಿತು ಮೊನ್ನಿನಾ ರಣರಂಗದೆ ॥೬೩॥

ಏತಕಿನ್ನಾ ನರರ ಸಾಕ್ಷಿಯು ಪ್ರಮಥಗಣರದು ಸಾಲದೆ ।
ಜಾತಿಕಾರರದಾಟಮುರಿಯಿತು ನಂಬಿ ನಡೆ ನಿಜಮಾರ್ಗದೆ ।೬೪।

ತಪ್ಪಿದೆಲ್ಲವು ನಮ್ಮ ಗುರುಗಳು ಮಾರ್ಗ ತಪ್ಪಿದ ಫಲವಿದು ।
ಒಪ್ಪಲಾರರು ಯಾರು ಜಗದೊಳು ನಮಗೆ ಹೇಗದು
ಬಪ್ಪುದು ॥೬೫॥

ಕಪ್ಪುಗೊರಳನ ಮಾರ್ಗದೊಳಗನುಭಾವವಿದ್ದರೆ ಜನವದು ।
ಅಪ್ಪಲಾಗದಸತ್ಯಮಾರ್ಗವ ಗುರುವು ತಿಳಿಸದ ತಪ್ಪಿದು ॥೬೬॥

ಕಾಕುಪೋಕದ ವಿದ್ಯೆಯಿಂದಲಿ ಭೋಗಿಸುತ್ತಿಹ ಫಲವನು ।
ಸಾಕುಮಾಡುತ ನಾಕದೊಡೆಯನ ಸುಖದ ಹಾದಿಯ
ನಡೆಯನು ॥೬೭॥

ಲೋಕವೆಲ್ಲವು ಕಂಡು ಕಣ್ಣಲಿ ಬೆನ್ನುಹತ್ತಲು ನಮ್ಮನು ।
ಏಕನಿಷ್ಠೆಯ ತೊಟ್ಟು ಮನದೊಳು ಬಳಿದು ಬಿಡೀ
ಕೆಸರನು ॥೬೮॥

## ಈಗಿನ ನಮ್ಮ ಕರ್ತವ್ಯವು.

ಮಣ್ಣುಗೂಡುತ ಬಣ್ಣಗೆಟ್ಟಿವು ತಣ್ಣಗೇತಕೆ ಕುಳಿತಿರಿ ।
ಕಣ್ಣು ತೆರೆಯಿರಿ ಸುತ್ತು ಜಗದೊಳಗೇನು ನಡೆದಿದೆ ನೋಡಿರಿ ॥೧೯॥

ಸಣ್ಣಮನುಜರ ಹಿರಿಯತನದಿಂದಾದ ಕಷ್ಟವನರಿಯಿರಿ ।
ಅಣ್ಣಗಳಿರಾ ಸಮಯವಲ್ಲವು ತೊರೆಯುತಲಸವ ನೇಳಿರಿ ॥ ೨೦ ॥

ಮೂಳ ಮನುಜರ ಪೂಜೆ ಮಾಡುವ ಹೇಸಿ ನಡತೆಯ ಭಕ್ತರೆ ।
ನಾಳಿಗೆನ್ನದೆ ನಿಲಿಸುತವರನು ಬಹಿಷ್ಕರಿಸಿರಿ ಧೀರರೆ ॥ ೨೧ ॥

ಖೂಳಮನುಜರ ತಂತ್ರವೆಷ್ಟೊ ನಡೆಯುದಾಪರಿ ಮಾಡಿರೈ ।
ಏಳಿ ಸುಡುತಲಿ ಯಂತ್ರಬಟ್ಟೆಯ ಶುದ್ಧಖಾದಿಯ ಧರಿಸಿರೈ ॥ ೨೨ ॥

ಜಾತಿಭೇದವ ಮುರಿಯುತೆಲ್ಲರು ಕಾಯಕಂಗಳ ನೋಡದೆ ।
ಜಾತಿ ಹಿಡಿಯುತ ಭಕ್ತಜಂಗಮರೊಳಗೆ ಭೇದವ ಮಾಡದೆ ॥೨೩॥

ಸೋತು ಬಳಿಸಿರಿ ಹೆಣ್ಣು ಗಂಡನು ಕೊಟ್ಟು ಕೊಳ್ಳುತ ಸಿಡಿಯದೆ ।
ಸೂತಕೈದನು ಬಿಡುತ ಕೂಡಿರಿ ಸ್ವಲ್ಪ ಸಂಶಯಗೊಳ್ಳದೆ । ೨೪ ।

ಭಕ್ತಿಯಿಂದಲಿ ಯೋಗ್ಯತೆಯು ಕೇಳ್ ಜಾತಿಯಿಂದಲದಲ್ಲವು ॥
ಯುಕ್ತಿಯಿಂದಲಿ ಸಾಧಿಸುವದದು ನೋಡು ತಂತ್ರೋ
ಪಾಯವು ॥೨೫॥

ಶಕ್ತಿಯುಕ್ತಿಗಳೆಲ್ಲ ಭಕ್ತಿಯ ಯೋಗದೊಳು ಸಹಜಿಪ್ಪುವು ।
ಭಕ್ತಿ ಬಲ್ಲಿದನಾಯ್ತು ಸೂತ್ರಕೆ ಯೋಜಿಸುವದದು ಯುಕ್ತವು॥೨೬॥

### ಮಂಗಲವು

ಪ್ರಕಟನಾಗಿಹ ಚೆನ್ನಲಿಂಗನ ಬಿಡದೆ ಹೊಂದಿರಿ ಸೂತ್ರವ ॥
ಸಕಲ ಜಗವನು ತನ್ನದೊಂದೇ ಸೂತ್ರದೊಳು ಕುಣಿ
ಸ್ಯಾಡುವ ॥ ೨೭ ॥



## ಶುದ್ಧಿಯ ಪತ್ರಿಕೆಯು

| ಪುಟ | ವಳಿ | ಅಶುದ್ಧ | ಶುದ್ಧ |
|---|---|---|---|
| ೮ | ೬ | ಕೆಳ್ತಿಗೆ | ಕೆಳಗೆ |
| ೧೩ | ೨೨ | ನಿಷಾಪರರಾದಲ್ಲಿ | ನಿಷ್ಕಾಪರರಾದಲ್ಲಿ |
| ೨೦ | ೧೫ | ಇದಲ್ಲ | ಇಲ್ಲದೆ |
| ೨೨ | ೧ | ಗುರುವರ್ಗದವರಿಗೂ | ಗುರುವರ್ಗದವರೂ |
| ೨೨ | ೨೬ | ಮುರವತ್ತಿದ | ಮುರವತ್ತಿನ |
| ೨೬ | ೯ | ಸಾತ್ವಿಕ | ಸಾತ್ತ್ವಿಕ |
| ೨೮ | ೧೫ | ಭಕ್ತಿ (ಇದರ ಮುಂದೆ) | ಪೂರ್ಣವಿರಾಮ ಬೇಕು |
| ೩೫ | ೧೪ | ರಂಜನ ಭಕ್ತರೂ ( ,, ) | ,, |
| ೩೫ | ೧೫ | ಧೈಯವು ( ,, ) | ,, |
| ೧ | ೧೨ | ಶಿವಲಿಂಗವು (ಲಿಂಗದ ನಿಜಾರ್ಥವು) | ಶಿವಲಿಂಗವು |
| ೨ | ೬ | ಕುರುರುಡ ,, | ಕುರುಡ |
| ೨ | ೮ | ಕ್ರಿಯಾಜ್ಞಾನಳ ,, | ಕ್ರಿಯಾಜ್ಞಾನಗಳ |
| ೨ | ೧೨ | ಉದ್ದರಿಸುವ ,, | ಉದ್ಧರಿಸುವ |
| ೨ | ೧೨ | ವ್ರಕಟಿಸು | ಪ್ರಕಟಿಸು |
| ೫೯ | ೧೫ | ಅಡಗಿತೆಂದ್ಮು | ಅಡಗಿತೆಂದು |
| ೬೧ | ೧ | ಯತ್ನಿಸುವರು | ಯತ್ನಿಸುವವರು ( ಪೂರ್ಣವಿರಾಮ |
| ೬೩ | ೨೬ | ಅಹಿಕ | ಐಹಿಕ |
| ೬೪ | ೧೫ | ರುತಿಯಲ್ಲಿ | ರೀತಿಯಲ್ಲಿ |
| ೬೪ | ೨೫ | ವಿದಿಸುವದು | ವಧಿಸುವದು |
| ೬೫ | ೧ | ವುಣ್ಯವು | ಪುಣ್ಯವು |
| ೬೬ | ೩ | ತೋದಿಕೊಂಡಂತಾಗುವದು | ತೋಡಿಕೊಂಡಂತಾಗುವದು |
| ೬೪ | ೧೦ | ಹೃದಯುಸ್ಥಾನಕ್ಟೆ | ಹೃದಯಸ್ಥಾನಕ್ಕೆ |
| ೬೭ | ೨ | ಭಕ್ಣಿಯುಗದಲ್ಲಿರುವದು | ಭಕ್ತಿಯೋಗದಲ್ಲಿರುವದು |
| ೬೭ | ೪ | ಸಿದ್ದಿಯ | ಸಿದ್ಧಿಯ |
| ೬೯ | ೨ | ಆತ್ಮನಗ್ರಹ | ಆತ್ಮನಿಗ್ರಹ |
| ೬೭ | ೧೫ | ಕಡೆಗೆ (ಎರಡನೆಯದು) | ಬೇಡ |
| ೬೭ | ೨೭ | ಹರಕೊಳ್ಳದಿರುವಡರ | ಹರಕೊಳ್ಳದಿರುವದರ |
| ೭೦ | ೧೧ | ವಿಃಷಾನ | ಮಿಷ್ಟಾನ್ನ |
| ೭೧ | ೩ | ಓದಿದುದಡೆಲ್ಲ | ಓದಿದುದನೆಲ್ಲ |

| ಪುಟ | ವಳಿ | ಅಶುದ್ಧ | ಶುದ್ಧ |
|---|---|---|---|
| ೭೧ | ೪ | ಎುಟ್ಟಿದುದದೆಲ್ಲ | ಮುಟ್ಟಿದುದನೆಲ್ಲ |
| ೭೧ | ೫ | ಭಾವಲ್ಲಿ | ಭಾವದಲ್ಲಿ |
| ೭೧ | ೬ | ತದ್ರೂಹದಲ್ಲಿ | ತದ್ರೂಪದಲ್ಲಿ |
| ೭೧ | ೭ | ಅಧಿಕಾರಿಗಳಿಲ್ಲೆಂದು | ಅಧಿಕಾರಿಗಳಿಲ್ಲೆಂದು |
| ೭೧ | ೩೦ | ಮಟ್ಟಿಗೆ | ಮೆಟ್ಟಿಗೆ |
| ೭೨ | ೨೩ | ಸದ್ಭಾವಕ್ಕೆ | ಸದ್ಭಾವಕ್ಕೇ |
| ೭೩ | ೨೯ | ಜೆಯಿಸಲಾರದ | ಜಯಿಸಲಾರದ |
| ೭೪ | ೨೦ | ಡಬ್ಬಕೋಡದಮೇಲೆ | ಡಬ್ಬಗೊಡದಮೇಲೆ |
| ೭೪ | ೩೦ | ರಾಡಿ ಆದುದರಿಂದ | ರಾಡಿಗಲಿಸುವದರಿಂದ |
| ೭೫ | ೧ | ಧರ್ಮದಲ್ಲ | ಧರ್ಮದಲ್ಲಿ |
| ೭೫ | ೧೧ | ದೃಷಿಯು | ದೃಷ್ಟಿಯು |
| ೭೬ | ೧ | ಇಂ | ಬೇಡ |
| ೭೬ | ೧೦ | ಒಳಕೊಂಡು | ಒಳಕೊಂಡುದರಿಂದ |
| ೭೬ | ೧೫ | ದುಸ್ಕೃತಿಗಳ | ದುಷ್ಕೃತಿಗಳ |
| ೭೬ | ೩೧ | ವಿಷಗಳಲ್ಲಿರುವದು | ವಿಷಯಗಳಲ್ಲಿರಿಸುವದು |
| ೭೭ | ೮ | ಸ್ಪರ್ಶದೋಷವನ್ನೆ | ಸ್ಪರ್ಶದೋಷವನ್ನೇ |
| ೭೭ | ೨೨ | ಒಂ | ಒಂದು |
| ೭೮ | ೧೮ | ಪ್ರಯೋಜನವಾಗುತ್ತಿರುವದು | ಇಲ್ಲಿ ಪೂರ್ಣವಿರಾಮ ಬೇಡ |
| ೭೮ | ೨೪ | ಸಿಗಬೇಕಾಗಿರುವದು | ಸಾಗಬೇಕಾಗಿರುವದು |
| ೭೮ | ೨೬ | ಶುದ್ಧವಾಗವವೆ ಆದು | ಶುದ್ಧವಾಗುವವೆಂದು |
| ೭೮ | ೨೭ | ಭ್ರಾಮಕವಾದುದು | (ಮುಂದೆ ಪೂರ್ಣವಿರಾಮ ಬೇಕು |
| ೭೮ | ೩೨ | ನಿಂತಿದ್ದರಿಂದಲೂ | ( ಅಲ್ಪವಿರಾಮ ಬೇಕು, |
| ೭೯ | ೧೦ | ಬಸ್ಮಗಳನ್ನು | ಭಸ್ಮಗಳನ್ನು |
| ೭೯ | ೨೨ | ಭೂತ್ತ್ವವಾದ | ಭೂತ ತತ್ತ್ವವಾದ |
| ೮೬ | ೩೧ | ಗುಣಾತ್ಮಕವಾವ | ಗುಣಾತ್ಮಕವಾದ |
| ೮೭ | ೪ | ಕಾಯುವ್ಮಕ್ತಿಯ ತ್ತ್ವಗಳು | ಕಾಯನ್ಮಕ್ತಿಯ ತತ್ತ್ವಗಳು |
| ೯೦ | ೧೬ | ತಡೆವು | ನಡೆದು |
| ೯೧ | ೫ | ಕಾರ್ಯಕಾರಣ ರ್ರೂಪದಿಂದ | ಕಾರ್ಯಕಾರಣ ರೂಪದಿಂದ |
| ೯೧ | ೯ | ನಡಿಸುವದು [ ಇದರ ಮುಂದೆ ] | ಪೂರ್ಣವಿರಾಮ ಬೇಕು |
| ೯೨ | ೧೩ | ಶುದ್ಧೀಕರಿಸಿ | ಶುದ್ಧೀಕರಿಸಿ |

| ಪುಟ | ವಳಿ | ಅಶುದ್ಧ | ಶುದ್ಧ |
|---|---|---|---|
| ೯೯ | ೩೨ | ಆತರಿಗೆಲ್ಲ | ಆತ್ಮರಿಗೆಲ್ಲ |
| ೧೦೦ | ೨೭ | ರೂಪನಿಂದ | ರೂಪದಿಂದ |
| ೧೦೩ | ೨೩ | ಪವಿತ್ರ್ರತೆ | ಪವಿತ್ರತೆ |
| ೧೦೩ | ೨೬ | ಉಪಚಾರದಲ್ಲಿ ( ಇದರ ಮುಂದೆ ) | ಪೂರ್ಣವಿರಾಮಬೇಡ |
| ೧೦೪ | ೨೨ | ಸದಾಚರಣೆಯಿಂ ವ | ಸದಾಚರಣೆಯಿಂದ |
| ೧೦೪ | ೨೩ | ಆಗುದವು | ಆಗುವವು |
| ೧೦೬ | ೨೫ | ಇಷಲಿಂಗ | ಇಷ್ಟಲಿಂಗ |
| ೧೦೬ | ೨೯ | ಅವೇ | ಆದೇ |
| ೧೦೭ | ೧೯ | ಮಾರ್ಗವು ( ಇದರ ಮುಂದೆ) ಪೂರ್ಣವಿರಾಮ ಬೇಕು | |
| ೧೦೭ | ೧೯ | ಇದುದು | ಇದ್ದುದು |
| ೧೦೯ | ೨೦ | ನಿದ್ರೆಯಲ್ಲಿಯಾ | ನಿದ್ರೆಯಲ್ಲಿಯೂ |
| ೧೦೯ | ೨೨ | ತೋರಿಕೆಯಲ್ಲವೂ | ತೋರಿಕೆಯಲ್ಲವೂ |
| ೧೦೯ | ೨೩ | ಕಂಡ (ಇದರ ಮುಂದೆ) | ಅಲ್ಪವಿರಾಮ ಬೇಕು |
| ೧೧೦ | ೧೯ | ಮೂರು | ಮೂರೂ |
| ೧೧೧ | ೪ | ಏರುವದು | ಏರುವದೂ |
| ೧೧೧ | ೪ | ಏರಿಬಂದುದೂ | ಏರಿಬಂದುದು |
| ೧೧೧ | ೨೫ | ಬಾಳವದಾಗಿರುವದು | ಬಾಳುವದಾಗಿರುವದು |
| ೧೧೧ | ೨೮ | ಕೆರುಹಾಗಿರುವದು ( ಇದರ ಮುಂದೆ ) ಪೂರ್ಣವಿರಾಮ ಬೇಕು | |
| ೧೧೧ | ೩೧ | ಗುಲಿಂಗಜಂಗಮದ | ಗುರುಲಿಂಗಜಂಗಮದ |
| ೧೧೨ | ೧೨ | ಇರೋಣವು ( ಇದರ ಮುಂದೆ ) | ಪೂರ್ಣವಿರಾಮ ಬೇಕು |
| ೧೧೩ | ೨೮ | ಪೆಂಚಸೂತಕಗಳು | ಪಂಚಸೂತಕಗಳ |
| ೧೧೩ | ೨೮ | ಸಾಗಿಸಿಕೊಂಡ | ಸಾಗಿಸಿಕೊಂಡು |
| ೧೧೪ | ೨೭ | ಚಿತವೃತ್ತಿಯ | ಚಿತ್ತವೃತ್ತಿಯು |
| ೧೧೪ | ೩೦ | ನಾಸ್ತಿಕರಾಗುಳದಿರುವದು ( ಮುಂದೆ ) ಪೂರ್ಣವಿರಾಮ ಬೇಕು | |
| ೧೧೫ | ೪ | ಧಾನಧಾರಣ | ಧ್ಯಾನಧಾರಣ |
| ೧೧೬ | ೨೩ | ಊರ್ಮ್ಮಿ | ಊರ್ಮಿ |
| ೧೧೭ | ೨೪ | ತಾಯಿಯಕೂಸಿನ್ನ ಹಾಗು | ತಾಯಿಯು ಹಾಗು ಕೂಸಿನ |
| ೧೧೭ | ೨೬ | ಸಂಬಂಧವಲ್ಲ ( ಇದರಮುಂದೆ ) ಪೂರ್ಣವಿರಾಮ ಬೇಕು | |

| ಪುಟ | ವಳಿ | ಅಶುದ್ಧ | ಶುದ್ಧ |
|---|---|---|---|
| ೧೧೮ | ೧೦ | ತವು | ತಮ್ಮ |
| ೧೧೮ | ೧೨ | ತ್ಯಾಗಿ್ಮ | ತ್ಯಾಗಿ |
| ೧೧೯ | ೧೦ | ಕಾರಣವಾದುದಾಯಿತಲ್ಲದೇ | ಕಾರಣವಾದುದಾಯಿತಲ್ಲದೆ |
| ೧೧೯ | ೧೩ | ಯೋಗವಿದ್ಯೆಯೆಂಬದನ್ನು | ಯೋಗವಿದೆಯೆಂಬದನ್ನು |
| ೧೧೯ | ೨೯ | ಪರಿವರ್ತಿಸದ | ಪರಿವರ್ತಿಸಿದ |
| ೧೧೯ | ೪ | ಜಗವಾದಿ | ಜಗದಾದಿ |
| ೧೨೦ | ೭ | ಉಧಾಪರಣೆಗಳು | ಉದಾಹರಣೆಗಳು |
| ೧೨೦ | ೨೦ | ಅರುಹು ( ಇದರ ಮುಂದೆ ) | ಪೂರ್ಣವಿರಾಮ ಬೇಕು |
| ೧೨೨ | ೩೧ | ಅಳುವಿಗೆ | ಅಳವಿಗೆ |
| ೧೨೩ | ೨೬ | ತನ | ತನ್ನ |
| ೧೨೬ | ೧೩ | ದಶವಿಧವಾಯಗಳನ್ನು | ದಶವಿಧವಾಯುಗಳನ್ನು |
| ೧೨೭ | ೧೮ | ಇದರ | ಇದ್ದ |
| ೧೨೭ | ೨೭ | ಪುರಾತನರು (ಇದರ ಮುಂದೆ) | ಪೂರ್ಣವಿರಾಮ ಬೇಕು |
| ೧೨೭ | ೩೧–೩೨ | ಆತ್ಮಕ್ಯೆದ ತತ್ತಗಳು | ಆತ್ಮೈಕ್ಯದ ತತ್ತ್ವಗಳು |
| ೧೨೮ | ೧ | ಧರ್ಮವು ( ಇದರ ಮುಂದೆ ) | ಪೂರ್ಣವಿರಾಮ ಬೇಕು |
| ೧೨೮ | ೭ | ಇದ್ದುಕೊಂಡ ( ,, ) | ಅಲ್ಪವಿರಾಮ ಬೇಕು |
| ೧೨೮ | ೪ | ಕ್ಷೇತ್ರದಲ್ಲಿ ( ,, ) | ,, |
| ೧೨೮ | ೭ | ತನುಕರಣಾದಿಗಳೆನ್ನು | ತನುಕರಣಾದಿಗಳನ್ನು |
| ೧೨೮ | ೨೪ | ಸರ್ವತೋಮೋಖವಾಗಿ | ಸರ್ವತೋಮುಖವಾಗಿ |
| ೧೨೮ | ೩೧ | ಕೈಕೆಳಗಿನ | ಕೆಳಗಿನ |
| ೧೩೭ | ೨೯ | ಬ್ರ್ರಹ್ಮಣನೇ | ಬ್ರಾಹ್ಮಣನೇ |
| ೧೩೮ | ೨೬ | ಇರುತ್ತಾರು | ಇರುತ್ತಾರೆ. |
| ೧೪೧ | ೧೯ | ಲಿಂಗದೇವನು [ ಇದರ ಮುಂದೆ) | ಪೂರ್ಣವಿರಾಮ ಬೇಕು |
| ೧೪೬ | ೩೨ | ಗಮನಿಸಬಹೇದು | ಗಮನಿಸಬಹುದು |
| ೧೫೨ | ೨೧ | ಸಚನೆಯಾಗಿರುವದು | ರಚನೆಯಾಗಿರುವದು |
| ೧೫೮ | ೨೩ | ರಾಜರುಗಳ | ರಾಜಗುರುಗಳ |
| ೧೬೦ | ೯ | ನಿಜಕಲ್ಯಾ | ನಿಜಕಲ್ಯಾಣ |
| ೧೬೫ | ೫ | ಶುದ್ಯದತ್ವವು | ಶೂದ್ರತ್ವವು |
| ೧೭೩ | ೨ | ಇಲ್ಲ | ಇಲ್ಲವೆ |
| ೧೭೩ | ೩೦ | [illegible]ನಲ್ಲಿ | ಶುಣಾಕೆನಲ್ಲಿ |

| ಪುಟ | ವಳಿ | ಅಶುದ್ಧ | ಶುದ್ಧ |
|---|---|---|---|
| ೧೭೪ | ೭ | [ ಪಡಿಕೊಳ್ಳುವ ] | (ಪಡಕೊಳ್ಳುವ) |
| ೧೭೫ | ೬ | ಮೆಲಾದ | ಮೇಲಾದ |
| ೧೭೫ | ೨೦ | ಆವಂರಿ | ಆವರಿಂ |
| ೧೭೫ | ೨೭ | ಧರ್ಮಬೋಧೆಯ | ಧರ್ಮಬೋಧೆಯು |
| ೧೭೮ | ೨೪ | ಗುರುತತ್ತ್ವವಿರುವದಲ್ಲದೆ | ಗುರುತ್ವವಿರುವದಲ್ಲದೆ |
| ೧೮೫ | ೧೦ | ತವು | ತಮ್ಮ |
| ೧೮೬ | ೩೨ | ಎಂಅಹ | ಎಂತಹ |
| ೧೮೮ | ೧೬ | ಸಲ್ಲವದಲ್ಲದೆ | ಸಲ್ಲುವದಲ್ಲದೆ |
| ೧೯೦ | ೭ | ಎಷ್ಟೂ | ಎಷ್ಟೊ |
| ೧೯೦ | ೧೫ | ಲೋಕದೃಷ್ಟವಾದ | ಲೋಕದ ದೃಷ್ಟವಾದ |
| ೧೯೧ | ೧೧ | ಡೆತ್ಯವು | ಸತ್ಯವು |
| ೧೯೨ | ೧೨ | ಜಾತಿಬ್ರಮೆ | ಜಾತಿಭ್ರಮೆ |

ಶುದ್ಧಾಶುದ್ಧತೆಗಳನ್ನೆಲ್ಲ ಸರಿಗೊಳಿಸಿಕೊಳ್ಳುವದೇ ಈಗಿನ ಕಾರ್ಯವು.

ಸಮಾಜಸೇವಕ,

ತಾರೀಖು ೪-೧೧-೧೯೨೮.

ಹು. ಬ. ಕಲಬುರ್ಗಿ, ಬಿ. ಎ.,

Secretary
Servents of Truth Society
Hoseripett Dharwar

ತಾದಿಗರಿಗೆ, ಪರಮ ನಿರಂಜನ ಶ್ರೀಗುರುಲಿಂಗಜಂಗಮವೆಂದು ಕರೆತಂದು, ಅವರ ಪಾದೋದಕಪ್ರಸಾದ ತೆಗೆದುಕೊಂಬುವವರಿಗೆ ಹದಿನೆಂಟು ಕೋಟಿಯುಗ ಪರಿಯಂತರ ನರಕದ ಕೊಂಡದಲ್ಲಿಕ್ಕುವದು ಕಾಣೆಂದ ರೇಕಣ್ಣಪ್ರಿಯನಾಗಿನಾಥ

## ಬಸವಣ್ಣನ ಕೆಲವು ಹಿತ ವಚನಗಳು.

(೧) ಲಿಂಗವ ನಂಬುವದೊಂದೇ ಆಚಾರವಯ್ಯಾ!

(೨) ಒಳಗೆ ಕುಟಿಲ ಹೊರಗೆ ವಿನಯವಾಗಿ ಭಕ್ತರೆನಿಸಿ ಕೊಂಬುವವರ ಒಲ್ಲ ನೊಲ್ಲನಯ್ಯ ಲಿಂಗವು! ಅವರು ಶಿವಪಥಕ್ಕೆ ಸಲ್ಲರು ಸಲ್ಲರಯ್ಯ!

(೩) ಲಿಂಗದಮೇಲೆ ನಿಷ್ಠೆಯಿಲ್ಲದಭಕ್ತ ಇದ್ದರೇನೋ ಶಿವಶಿವ! ಹೋದರೇನೋ ಶಿವಶಿವ! ನಿಜವನರಿಯದ ಭಕ್ತ ಬಳಲುವನಲ್ಲದೆ, ಲಿಂಗ ಬಳಲುವದೇ?

(೪) ಲಿಂಗವ ಮುಟ್ಟಿದ ಬಳಿಕ ಕುಚಿತ್ತ ಅನಾಚಾರವಾಗದು ನೋಡಾ!

(೫) ಲಿಂಗದೇವನ ಪೂಜಿಸಿ, ಕುಲವನರಸುವರೇ ಅಯ್ಯಾ!

(೬) ಲಿಂಗವಂತನ ಸನ್ನಿಧಿಯಿಂದ ಹಿಂದಿನ ದುಸ್ಸಂಗ ಕೆಡುವದು.

(೭) ಜಾಣನು, ಜಾಣನು, ಆತ ಜಾಣನು; ಲಿಂಗವ ಸೇರಿನಂಬಿದಾತ ಜಾಣನು.

(೮) ಶಿವಚಿಂತೆ ಶಿವಜ್ಞಾನವಿಲ್ಲದ ಮನುಜರು ಸಗಣಿಯಲ್ಲಿ ಸಾಸಿರಹುಳ ಹುಟ್ಟವೇ ದೇವಾ!

(೯) ಸತ್ಯವ ನುಡಿವುದೇ ದೇವಲೋಕ, ಮಿಥ್ಯವ ನುಡಿವುದೇ ಮರ್ತ್ಯಲೋಕ; ಆಚಾರವೇ ಸ್ವರ್ಗ, ಅನಾಚಾರವೇ ನರಕ.

(೧೦) ಯಥಾ ಭಾವಸ್ತಥಾ ಲಿಂಗಂ ಸತ್ಯಂ ಸತ್ಯಂ ನ ಸಂಶಯಃ।
ಯಥಾ ಭಕ್ತಿಸ್ತಥಾ ಸಿದ್ಧಿಃ ಸತ್ಯಂ ಸತ್ಯಂ ನ ಸಂಶಯಃ॥

(೧೧) ಉದ್ಧರಿಸುವನೊಬ್ಬ ಶರಣ ಸಾಲದೇ!

(೧೨) ಸದಾಚಾರ ಸದ್ಭಕ್ತಿಯಿಲ್ಲದವರ ನಾನೊಲ್ಲೆನಯ್ಯ! ಅವರಾರಾಧನೆ ದಂಡ!

(೧೩) ಲಿಂಗವಿರಿಸಿದಂತಿಪ್ಪುದಲ್ಲದೆ, ಮತ್ತೊಂದನ್ನವನರಿಯದಿರಬೇಕು.

(೧೪) ಆವ ಕುಲವಾದರೇನೋ ಶಿವಲಿಂಗವಿದ್ದವನೇ ಕುಲಜನು.

(೧೫) ಲಿಂಗವ ಗೆಲುವರೆ ಶರಣಸತಿ, ಲಿಂಗಪತಿ, ಎಂಬುದೊಂದು ಅಲಗು ಸಾಲದೇ!

(೧೬) ತನ್ನ ತಾನರಿದೆನೆಂಬ ಅಹಂಕಾರವುಳ್ಳರೆ ಲಿಂಗಕ್ಕೆದೂರ!

(೧೭) ಕಟ್ಟಿದರೇನೋ, ಬಿಟ್ಟರೇನೋ, ಮನವು ಲಿಂಗವ ಮುಟ್ಟದನ್ನಕ್ಕ!

(೧೮) ಅಹಂಕಾರ ಮನವನಿಂಬುಗೊಂಡಲ್ಲಿ ಲಿಂಗ ತಾನೆಲ್ಲಿಪ್ಪುದೋ?

(೧೯) ಲಿಂಗವನರಿದರೆ ಶರಣ, ಮರೆದರೆ ಮಾನವ!

(೨೦) ಮಾಡಿ ಕೆಟ್ಟರು; ಮಾಡದೆ ಕೆಟ್ಟರು; ನೀಡಿ ಕೆಟ್ಟರು; ನೀಡದೆ ಕೆಟ್ಟರು, ಲಿಂಗದ ಬೈಲ ಸಮಾಧಿಯು ಸಿಕ್ಕದೆ ಕೆಟ್ಟರು.

(೨೧) ಲಾಂಛನಕ್ಕೆ ತಕ್ಕ ಆಚಾರವಿಲ್ಲದಿದ್ದರೆ, ನೀ ಸಾಕ್ಷಿಯಾಗಿ ಛೀ ಎಂಬೆನು.

## ಜಗಭಂಡ ಜಂಗಮರ ಜಿಗಿದಾಟದ ಬಗ್ಗೆ ಭವಿಷ್ಯವು ಎಮ್ಮಿಯ ಬಸವಯ್ಯನವರು ಹಾಡಿದ್ದು.

[illegible]ಂಗಮರೆಲ್ಲರು ಮಂಗಗಳಾದರು ಹೊಯ್ಯಲೆ ಡಂಗುರವ! ಅಯ್ಯಾ!
[illegible]ಂಗುಳಿದೈವವ ಪೂಜೆಯ ಮಾಡ್ಯಾರು ಹೊಯ್ಯಲೆ ಡಂಗುರವ! ॥೧॥
[illegible]ರಪತಿ ಪುರಪತಿ ಪರಕೆದ್ದು ಹೋದಾರು ಹೊಯ್ಯಲೆ ಡಂಗುರವ! ಅಯ್ಯಾ!
[illegible]ರುಶಿಷ್ಯ ನ್ಯಾಯವ ತಪ್ಪಿನ್ನ ನಡೆದಾರು ಹೊಯ್ಯಲೆ ಡಂಗುರವ! ॥೨॥
[illegible]ರೆಂಟು ಕುಲವೊಂದ ನೀರನೆ ಕುಡಿದಾರು ಹೊಯ್ಯಲೆ ಡಂಗುರವ! ಅಯ್ಯಾ
[illegible]ರು ಹೇಳಿದ ಮಾತು ಸಟೆಯಲ್ಲ ಶಿವನಾಣೆ ಹೊ[illegible]ೆ ಡಂಗುರವ! ॥೩॥
[illegible]ಣ್ಣರು ತಪ್ಪ್ಯಾರು ನೀಚರು ಹೆಚ್ಚ್ಯಾರು ಹೊಯ್ಯ[illegible]ಂಗುರ[illegible] ಅಯ್ಯಾ!
[illegible]ಣ್ಯರು ಸಾದವ ಕುರುಬ ಜಂಗಮರಾಗಿ ಹೊ[illegible] ಡಂಗು[illegible]! ॥೪॥

## ಶ್ರೀಮುಚ್ಚೆನ್ನಬಸವಣ್ಣನವರು ಹಾ[illegible]ದ್ದು.

ಸಣ್ಣಬಣ್ಣವ ಹೊದ್ದು ಹೆಣ್ಣಸಂಗವ ಮಾಡಿ । ಹ[illegible] ಹಚ್ಚಿ [illegible]ಂಡು ಹು[illegible]ದು ಕುಳಿತು ॥
ಎಣ್ಣೆ ಔಷಧವ ಉಣ್ಣದೂಟವನುಂಡು । ಬಣ್ಣಗೆಟ್ಟಾರು ವಿರಕ್ತ[illegible] ॥೧॥
ಜಂಗಮರೆಲ್ಲರು ಲಿಂಗವಿಲ್ಲದವರಲ್ಲಿ । ಗಂಗಾಳ ತುಂಬ ಭೋಜನವ ತಿಂದು ॥
ಭಂಗಿಪಾನವ ಮಾಡಿ, ಲಿಂಗಭವಿಗಳಾಗಿ । ಜಂಗಮರು ಹೊಲಬುಗೆಟ್ಟು ಹೋದರಿನ್ನು ॥ ೨ ॥
ಗುರು ಕೊಟ್ಟ ಲಿಂಗವನು ಕುದುರಿಗೊಂಬೆಗೆ ಹಾಕಿ । ಕುರಿಗೋಣ ಕೊಟ್ಟು ದೈವವನು ಮಾಡಿ ॥
ಅಂಚಣ ಪಂಚನ ಪರಿಮಳವ ಬೀಸಿ ಓಕಳಿಯ ಆಡಿ । [illegible]ತಾರು ಮಾದಿಗರ ಕುಲದನೆಲ್ಲ ॥ ೩ ॥
ಮುಖಪೂಜ್ಯದವರೆಲ್ಲ ಸಟೆಮಾತುಗಳನಾಡಿ । ದಿಟವಾಗಿ ಹೆಣ್ಣುಗಳನೆ ಹಿಡಿದು ॥
ಕುಟಿಲವೇಷವ ತಾಳಿ ದಾಸೋಹಗಳ ಬಿಟ್ಟು । ಜಟಿಹತ್ತಿ ಸಂಸಾರ ಜಡರಿನಿಂದ ॥ ೪ ॥
ವಿರಕ್ತಮಠಗಳಿಗೆ ನಾರಿಯರು ಸೇರ್ಯಾರು । ಮಾರತಾಪಕೆ ಸಂದು ಮರುಳಾದಾರು ॥
ನಾರಿಯರ ಕೂಡಿ ಸೋಂಕಿ ಬೋರಿದ್ದು ಹೋದಾರು । ವಿರಕ್ತಕುಲವನು ಹಾಳುಮಾಡಿ ॥ ೫ ॥
ಘನಲಿಂಗದವರೆಲ್ಲ ಸ್ತ್ರೀಲಿಂಗಕೊಳಗಾಗಿ । ಮಾನಭಂಗಿತರಾಗಿ ಮಲಸಂಬಂಧಕೆ ॥
ತನುಮನವನೆಲ್ಲ ಸತಿಸುತರಿಗೀವುತ । ಅಸುಗೆಟ್ಟು ಹೋದಾರು ಘನಲಿಂಗವು ॥ ೬ ॥

---

ಈ ಪುಸ್ತಕವನ್ನು ಕೇ. ಎಚ್. ಎಫ್. ಕಟ್ಟೀಮನಿ, ಬಿ. ಎ. ಇವರು ತಮ್ಮ ಧಾರವಾಡ ಶ್ರೀ ತೋಂಟದಾರ್ಯ ಮುದ್ರಾಲಯದಲ್ಲಿ ಮುದ್ರಿಸಿದರು. ಮತ್ತು ಹಾವೇರಿ ಪೇಟಿಯಲ್ಲಿ ಮೂರುಸಾವಿರ ಮಠದ ಹಿಂದಿನ [illegible] ನೆಯ ಮನೆಯಲ್ಲಿ ಎಚ್. ಬಿ. ಕಲಬುರಗಿ ಬಿ. ಎ. ಇವರು ಪ್ರಕಾಶಪಡಿಸಿದರು.